# ಬಿನ್ನಹ

ನನ್ನ ಹಲವು ಕಥೆ ಕಾದಂಬರಿಗಳಂತೆ ಈ ಕಾದಂಬರಿಯೂ ನಡೆದ ಸಂಗತಿಯೊಂದರ ಪ್ರೇರಣೆಯಿಂದ ರಚಿತವಾದದ್ದು. ಆ ಸಂಗತಿಯ ತೆಳ್ಳನೆಯ ಕೋಲಿನ ಮೇಲೆ ಕಲ್ಪನೆಯು ಬಳ್ಳಿ ಧಾರಾಳವಾಗಿ ಹಬ್ಬಿ ಹರಡಿ ಹೂಬಿಟ್ಟಿದೆ. ಆದ್ದರಿಂದ, ಕಥೆಯ ಮುಖ್ಯ ಘಟನೆ ನಿಜವೇ ಆದರೂ ಅದರ ಪಾತ್ರಗಳು, ಅವರ ನಡೆನುಡಿ ಎಲ್ಲ ಕಲ್ಪನಾಪ್ರಪಂಚಕ್ಕೆ ಸೇರಿದುವು ಯಾವ ಪಾತ್ರವೂ ಯಾರನ್ನೂ ಕುರಿತದ್ದಲ್ಲ ಎಂದು ಪ್ರತ್ಯೇಕವಾಗಿ. ಹೇಳಬೇಕಾಗಿಲ್ಲ.

ಆ ಸಂಗತಿಯನ್ನು ನನಗೆ ತಿಳಿಸಿದವರು ನನ್ನ ಮಾನ್ಯ ವಿದ್ಯಾಗುರುಗಳಾದ ಶ್ರೀ ನಾ. ಕಸ್ತೂರಿ ಅವರು; ಆದರೆ, ಅದನ್ನು ಅವರಿಗೆ ಹೇಳಿದವರು ಇನ್ನೊಬ್ಬರು. ಅವರೂ ನಮ್ಮಿಬ್ಬರ ಮಾನ್ಯ ಮಿತ್ರರೆ. ಈ ಇಬ್ಬರೂ ಗಣ್ಯರಾದ ಹಿರಿಯ ಸಾಹಿತಿಗಳು. ತಾವೇ ಬರೆಯಬಹುದಾದದ್ದನ್ನು ನನಗೆ ಬಿಟ್ಟುಕೊಟ್ಟು ಉಪಕರಿಸಿದ್ದಾರೆ. ಅವರ ಉಪಕಾರಕ್ಕೆ ನಾನು ಕೃತಜ್ಞ.

ಈ ಕಾದಂಬರಿಯ ವಸ್ತು ಕೆಲವು ವರ್ಷಗಳಿಂದ ಗರ್ಭವಾಸದಲ್ಲಿಯೇ ಇದ್ದಿತು. ಅದು ಹೊರಬರುವಂತೆ ಮಾಡಿದ ಉಪಕೃತಿ ನನ್ನ ಮಿತ್ರರಾದ, 'ಚಿತ್ರಗುಪ್ತ'ದ ಸಂಪಾದಕರು ಶ್ರೀ ಎಂ. ಎಸ್. ಭಾರದ್ವಾಜ್, ಬಿ.ಎ. ಅವರದ್ದು; ಅವರ ಮೂಲಕ 'ಸುಧಾ ಪ್ರಕಾಶನ'ದವರದ್ದು. ಇಬ್ಬರಿಗೂ ನನ್ನ ಕೃತಜ್ಞತೆಯ ವಂದನೆಗಳು ಸಲ್ಲಬೇಕಾಗಿವೆ.

ಕಾದಂಬರಿಯನ್ನೇ ಕುರಿತು ಹೇಳಬೇಕಾದ್ದು ಹೆಚ್ಚಿನದೇನೂ ಇಲ್ಲ. ಈ ಕಾದಂಬರಿಯ ಮುಖ್ಯ ಘಟನೆಗಳು ಮಾನವ ಸ್ವಭಾವದ ವೈಚಿತ್ರ್ಯವನ್ನು ಚಿತ್ರಿಸುತ್ತವೆ. ಓದುಗರಿಗೆ ಅದರ ಅರಿವಾದರೆ ಕಾದಂಬರಿಯ ಗುರಿ ನೆರವೇರಿದಂತೆ.

ನನ್ನ ಕೃತಿಗಳ ಬಗೆಗೆ ಕನ್ನಡದ ಜನ ತುಂಬ ಆದರ ತೋರುತ್ತ ಬಂದಿದ್ದಾರೆ. ಇದಕ್ಕೆ ನಾನು ಎಂದೆಂದಿಗೂ ಋಣಿ. ಈ ಒತ್ತಾಸೆಯೇ ನನ್ನ ಸಾಹಿತ್ಯ ರಚನೆಗೆ ಇಂದೂ ಮುಂದೂ ಪ್ರೇರಕಶಕ್ತಿ.

೧೨ - ೯ - ೧೯೫೪
ಬೆಂಗಳೂರು.

**ಮೈಸೂರು ಸೀತಾರಾಮಯ್ಯ.**

# ಪ್ರಕಾಶಕರ ಮಾತು

ಉತ್ತಮ ಸಾಹಿತ್ಯ ಕೃತಿಗಳನ್ನು ಸುಲಭ ಬೆಲೆಗೆ, ಕನ್ನಡ ಓದುಗರಿಗೆ ಅರ್ಪಿಸಬೇಕೆಂಬ ನಮ್ಮ ಅಭಿಲಾಷೆಯನ್ನು ಕನ್ನಡನಾಡಿನ ಸುಪ್ರಸಿದ್ಧ ಸಾಹಿತಿ ಶ್ರೀ ಎಂ. ವಿ. ಸೀತಾರಾಮಯ್ಯನವರು ತಮ್ಮ "ತಾಯ ಬಯಕೆ" ಕಾದಂಬರಿಯನ್ನಿತ್ತು ಈಡೇರಿಸಿದ್ದಾರೆ. ಈ ಸರಳ, ಸುಂದರ ಹಾಗೂ ವಿಷಯುವತ್ತಾದ ಕಾದಂಬರಿ ಕನ್ನಡಿಗರೆಲ್ಲರ ಅಭಿಮಾನಕ್ಕೆ ಪಾತ್ರವಾಗುವುದೆಂದು ನಂಬಿದ್ದೇವೆ.

ಇದೇ ರೀತಿ ಇನ್ನು ಮುಂದೆಯೂ ಒಳ್ಳೆಯ ಕೃತಿಗಳನ್ನು ಪ್ರಕಟಿಸಬೇಕೆಂಬುದು ನಮ್ಮ ಬಯಕೆ. ಈ ಕೃತಿಗೆ ನೀವು ತೋರುವ ಬೆಂಬಲ, ನಮ್ಮ ಬಯಕೆಗೆ ಒತ್ತಾಸೆ ನೀಡಲಿ ಎಂದು ಹಾರೈಸುತ್ತೇವೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ತಾಯಿನಾಡು ಪ್ರೆಸ್ ಅವರಿಗೂ, ರಕ್ಷಾಪತ್ರವನ್ನು ಸುಂದರವಾಗಿ ಮುದ್ರಿಸುವ ಹೊಣೆ ಹೊತ್ತ ಚಿತ್ರಾ ಪ್ರಿಂಟರಿಯವರಿಗೂ ನಾವು ಬಹಳ ಕೃತಜ್ಞರಾಗಿದ್ದೇವೆ.

ಪ್ರಕಾಶಕ.

# ತಾಯ ಬಯಕೆ

## ೧

ಡಾ|| ರಘುರಾಂ, ಬಿ.ಎಸ್.ಸಿ., ಎಂ.ಬಿ.ಬಿ.ಎಸ್. ಅವರು ಬೆಂಗಳೂ
ಿನ ಸಮರ್ಥರೂ ಜನಪ್ರಿಯರೂ ಆದ ಕೆಲವು ಮಂದಿ ವೈದ್ಯರಲ್ಲಿ ಒಬ್ಬರು.
ಅವರ ಜನಪ್ರಿಯತೆಗೆ ಅವರ ಹಸ್ತಗುಣ ಎಷ್ಟರಮಟ್ಟಿಗೆ ಕಾರಣವೊ
ಾಯ ಗುಣವೂ ಅಷ್ಟರಮಟ್ಟಿಗೇ ಕಾರಣ. ಎಂತಹ ಕಹಿ ಔಷಧಿಯನ್ನೂ
ಸಿರಪ್' (ಸಿಹಿಪಾಕ) ಬೆರಸಿ ಸಿಹಿ ಮಾಡುತ್ತಿದ್ದ ರೀತಿಯಲ್ಲಿ, ನಿರಾಶೆ
ೊಂಡು ಸಾವನ್ನಾದರೂ ಅಪ್ಪಬೇಕೆಂಬ ರೋಗಿಗಳಲ್ಲಿ ತಮ್ಮ ಮಾತಿನ
ಮಾಧುರ್ಯದಿಂದ ಬದುಕಬೇಕೆಂಬ ಬಯಕೆಯನ್ನು ತುಂಬುತ್ತಿದ್ದರು. ಅವರ
ಹಾಸ್ಯದ ಗುಳಿಗೆ'ಗಳನ್ನು ನುಂಗಿದ ಯಾರೂ ಅವರ ಔಷಧಶಾಲೆಯಿಂದ
ನಪ್ಪೆ ಮುಖದೊಡನೆ ಹಿಂದಿರುಗಿದುದಿಲ್ಲ. ಈ ಗುಣಗಳ ಜೊತೆಗೆ ಅವರ
ಭವ್ಯಮನೋಹರವಾದ ಆಕೃತಿ, ಧೀರವಾದ ನಿಲುವು, ಪಾದರಸದಂತಹ
ಚಟುವಟಿಕೆ, ಠಾಕುಠೀಕಾದ ಉಡುಪು, ಹಿರಿಯರಲ್ಲಿ ಗೌರವ, ಕಿರಿಯರಲ್ಲಿ
ಸರಸ—ಇವು ವೈದ್ಯ ಪ್ರಪಂಚದಲ್ಲಿ ಅವರಿಗೆ ಗಣ್ಯವಾದ ಸ್ಥಾನವನ್ನು
ಕಲ್ಪಿಸಿಕೊಟ್ಟಿದ್ದುವು. ಅವರು ಯಾವಾಗ ನಿದ್ರೆ ಮಾಡುತ್ತಿದ್ದರೋ,
ಯಾವಾಗ ಊಟಕ್ಕೆ ಹೋಗುತ್ತಿದ್ದರೋ, ಯಾವಾಗ ಕಾಫಿ ತಿಂಡಿ
ಸೇವಿಸುತ್ತಿದ್ದರೋ ಯಾರೂ ಅರಿಯರು. ಇಷ್ಟಾದರೂ, ತಮ್ಮ ಪುಟ್ಟ
ಕಾರಿನಲ್ಲಿ ಒಂದು ಸುತ್ತು ಬಳಸಿ ತಮ್ಮ 'ಖಾಯಂ ಗಿರಾಕಿ'ಗಳ ಮನೆಗೆ
ದಿನ ಬಿಟ್ಟು ದಿನವಾದರೂ ಒಮ್ಮೆ ಹೋಗಿ ಮನೆಯವರ ಯೋಗ ಕ್ಷೇಮ
ವಿಚಾರಿಸಿಕೊಂಡು ಬರುತ್ತಿದ್ದರು. ಅಂಥ ಗಿರಾಕಿಗಳೆಲ್ಲ ಶ್ರೀಮಂತರು,

ಇಲ ಶ್ರೀಮಂತರಿಗಿಂತ ಸ್ವಲ್ಪ ಕೆಳಗಿನ ಮಟ್ಟದವರು. ಮಧ್ಯಮ ವರ್ಗ ದವರೂ ಬಡವರೂ ಅವರ ಅಂಗಡಿಯ ಅತಿಥಿಗಳು.

ಅನೇಕರಿಗೆ ಡಾ|| ರಘುರಾಂ ಕುಟುಂಬ ವೈದ್ಯರು; ಕೆಲವು ಕುಟುಂಬಗಳಿಗಂತೂ ಅವರು ಆಪ್ತ ವೈದ್ಯರು ಮಾತ್ರವಲ್ಲದೆ ಆಪ್ತ ಸಚಿವರೂ ಆಗಿದ್ದರು. " 'ನನಗೆ ಏನು ಖಾಯಿಲೆ ಆಗಿದೆ' ಅಂತ ನನ್ನ ಸಲಹೆ ಕೇಳಿದಿರಿ. ಅದಕ್ಕೆ ಫೀಸು (ಶುಲ್ಕ) ಹಾಕಬಹುದು. 'ನನ್ನ ಮಗಳಿಗೆ ಮದುವೆ ಮಾಡೋಣ ಅಂತಿದೀನಿ, ಏನು ಹೇಳುತ್ತೀರಿ, ಡಾಕ್ಟರ್' ಅಂತ ಕೇಳಿದರೆ, ಏನು ಫೀಸ್ ಕೇಳುವುದು?" ಎಂದು ಒಬ್ಬರ ಮನೆಯಲ್ಲಿ ಹಾಸ್ಯ ಮಾಡುವರು. "ನಾಲ್ಕು ದಿನವೂ ಮದುವೆ ಮನೆ ಊಟ ಗಿಟ್ಟಿಸಬಹುದಲ್ಲ, ಅದೇ ಫೀಸ್" ಎಂದು ಉತ್ತರ ಬರುವುದು. "ಆಗ ನನ್ನ ಕಾರ್‌ಮಿನೆಟಿವ್ ಮಿಕ್ಸಚರ್ ಪ್ರಯೋಜನಕ್ಕೆ ಬರುವುದಿಲ್ಲ; ನೀವೇ ಶುಂಠೀ ಕಷಾಯ ಮಾಡಿಕೊಡಬೇಕಾಗುತ್ತೆ" ಎಂದು ಹೇಳಿ, "ಹ್ಞೂ, ಇನ್ನು ಹೊತ್ತಾಯಿತು, ಬರುತ್ತೇನೆ" ಎಂದು 'ಕಾರ್' ಹತ್ತುವರು.

ಡಾ|| ರಘುರಾಂ ಅವರ ಅಂಗಡಿಯಲ್ಲಿ ಎಂದಿನಂತೆ ಇಂದೂ ರೋಗಿಗಳ, ರೋಗಿಗಳ ಕಡೆಯವರ ಮುತ್ತಿಗೆ ಮಧ್ಯಾಹ್ನ ಹನ್ನೆರಡರ ಸಮೀಪವಾದರೂ ಮುಗಿದೇ ಇರಲಿಲ್ಲ. ಹನ್ನೊಂದೂವರೆಯ ಸುಮಾರಿಗೆ ಬಂದ ಆಳು ಕೆಂಚಪ್ಪ ನಿಂತು ನಿಂತು ಬೇಸರವಾಗಿ, ರೋಗಿಗಳ ಜೊತೆ ರೋಗಿಯಂತೆ ಬೆಂಚಿನ ಮೇಲೆ ಕುಳಿತುಬಿಟ್ಟ.

ಡಾಕ್ಟರು ಒಂದು ಸಲ ಕೆಂಚಪ್ಪನ ಮುಖವನ್ನು ಗಮನಿಸಿ, ನೋಡಿಯೂ ನೋಡದವರಂತೆ ತಮ್ಮ ರೋಗಿಗಳ ವಿಚಾರಣೆಯಲ್ಲಿ ಮುಂದುವರಿದ್ದರು. ಒಬ್ಬನೂ ಉಳಿಯದಂತೆ ರೋಗಿಗಳ ದಾಳಿ ಹಿಮ್ಮೆಟ್ಟಿದ ಮೇಲೆ, 'ಸ್ಟೆತೋಸ್ಕೋಪ'ನ್ನು (ಹೃದಯ ಶ್ವಾಸಕೋಶ ಗಳನ್ನು ಪರೀಕ್ಷೆ ಮಾಡುವ ಯಂತ್ರ ಸಲಕರಣೆ) ಹಿಡಿದುಕೊಂಡೆ ಕೆಂಚಪ್ಪನ ಬಳಿಗೆ ನಡೆದರು. "ಎಲ್ಲಪ್ಪ, ಷರಟಿನ ಗುಂಡಿ ಬಿಚ್ಚು" ಎಂದು ಡಾಕ್ಟರು ಸ್ಟೆತೊಸ್ಕೋಪಿನ ಬಾಯನ್ನು ಅವನ ಎದೆಯ ಮೇಲೆ ಇಡ ಹೋದರು. "ನನಗೇನೂ ಆಗಿಲ್ಲ, ಬುದ್ದೀ. ಅಮ್ಮಾವರು ನಿಮ್ಮನ್ನ ಫುರಸೊತ್ತು ಮಾಡಿಕೊಂಡು ಬರಹೇಳಿದರು" ಎಂದು ಕೆಂಚಪ್ಪ ಕೆಮ್ಮುತ್ತಲೇ

ಹೇಳಿದ. "ನಿನ್ನ ಗೂರಲಿಗೆ ನನ್ನ ಬಳಿಯೂ ಮದ್ದಿಲ್ಲ. ಅದಿರಲಿ ಕೆಂಚಪ್ಪ, ಅವ್ಮಾರವರು ಬರಹೇಳಿದರೆ ಬೆಂಚಿನ ಅಂಚಿನ ಮೇಲೆ ಕಂಚಿನ ಹಾಗೆ ಈಟು ಹೊತ್ತು ಕೆಮ್ಮುದ್ರೇನೂ ಕುಳಿತುಬಿಟ್ಟಿದ್ದೆಯಲ್ಲಾ? ಆಗಲೇ ಒಂದು ಸಲ ಕೆಮ್ಮಿದ್ದರೆ, ನಿನ್ನನ್ನು ವಿಚಾರಿಸಿ ಕಳಿಸಿಬಿಡುತ್ತಿದ್ದೆನೋ" ಎಂದು ಡಾಕ್ಟರು ಅವನನ್ನು ಮೃದುವಾಗಿ ಆಕ್ಷೇಪಿಸಿದರು. "ಅವ್ಮಾರವರೆ ಹೇಳಿದ್ರು, ಡಾಕ್ಟರನ್ನ ತೊಂದರೆ ಮಾಡಬೇಡ, ಗಲಾಟೆ ಎಲ್ಲ ಮುಗಿದ ಮ್ಯಾಗೆ ಒಂದಿಗೇನೇ ಕರಕೊಂಡು ಬಾ ಅಂತ. ಅದಕ್ಕೇನೇ ಕುಂತಿದ್ದೆ" ಎಂದು ಕೆಂಚಪ್ಪ ವಿವರಣೆ ಕೊಟ್ಟ. "ಹಾಗಿದ್ದರೆ ಸರಿ. ಹೇಳಿದ ಕೆಲಸವನ್ನು ಮಾಡೋ ಹನುಮಂತ ನೀನು. ಹೋಗು, ನನ್ನ ಪುಷ್ಪಕ ವಿಮಾನ ಏರಿ ಕುಳಿತುಕೋ, ಬಂದುಬಿಟ್ಟೆ" ಎಂದು ಡಾಕ್ಟರು, ಕಾಂಪೌಂಡರ ಕೊಟಡಿಗೆ ಹೋದರು. ಕೆಂಚಪ್ಪ ಕಾದಿದ್ದಾದರೂ ಕಾರಿನ ಸವಾರಿಗಾಗಿಯೇ! ಡಾಕ್ಟರು ಹೇಳಿದ್ದೇ ತಡ, ಪದ್ಧತಿಯಂತೆ ಕಾರಿನ ಹಿಂದಿನ ಸೀಟಿನಲ್ಲೇ ಕುಳಿತ.

ಕಾರು ಬಿಡುತ್ತ, ಡಾಕ್ಟರು ದಾರಿಯಲ್ಲಿ ಆಳನ್ನು ಪ್ರಶ್ನಿಸಿದರು: "ಏನೋ ಸಮಾಚಾರ? ಅಮ್ಮಾವರು ಚೆನ್ನಾಗಿದಾರೇನೋ?" "ಚೆಂದಾಗಿದಾರೆ" ಎಂದು ಕೆಂಚಪ್ಪ ಉತ್ತರಕೊಟ್ಟ. "ಉಳಿದೋರೆಲ್ಲ ಚೆಂದಾಗಿದಾರೇನೊ?" ಎಂದು ವೃತ್ತಿಗನುಗುಣವಾದ ಮರುಪ್ರಶ್ನೆ ಹಾಕಿದರು. "ಎಲ್ಲ ಚೆಂದಾಗವ್ರೆ" ಎಂದ ಕೆಂಚಪ್ಪ.

'ಸರಿ, ಗೃಹಕೃತ್ಯದ ಯಾವುದೋ ತೊಡಕಿನ ಪರಿಹಾರಕ್ಕೆ ತಮ್ಮ ಬಳಿ ಇಲ್ಲದ ಮದ್ದನ್ನು ಕೇಳುತ್ತಾರೆ; ಇದೀಗ ಹೋದರೆ ನನ್ನ ಸೊಂಟ ಯಾವಾಗ ನೆಟ್ಟಗಾಗುತ್ತೆ ಅಂತ ಕೇಳುತ್ತಾರೆ, ಸುಂದರಮ್ಮನವರು' ಎಂದು ಡಾಕ್ಟರು ಮನಸ್ಸಿನಲ್ಲಿಯೇ ತೀರ್ಮಾನಿಸಿಕೊಂಡರು.

೨

ಸುಂದರಮ್ಮನವರ ಸೊಂಟ ಹಿಡಿದುಕೊಂಡು ಹತ್ತು ಹನ್ನೆರಡು ವರ್ಷಗಳ ಮೇಲಾಗಿತ್ತು. ಅದು ಅವರ ಕಡೆಯ ಹೆರಿಗೆಯಲ್ಲಿ ಸಂಭವಿಸಿದ ವಿಪತ್ತು. ಜೋಯಿಸರು ಹೇಳಿದಂತೆ, ಕ್ರೂರ ನಕ್ಷತ್ರದಲ್ಲಿ ಹುಟ್ಟಿದ ಗಂಡು ಕೂಸು ತನ್ನ ತಂದೆಯನ್ನು ಯಮಲೋಕಕ್ಕೆ ಕಳುಹಿಸಿ, ತಾಯಿಯ ಸೊಂಟ ಮುರಿದು, ಒಂದು ವರ್ಷ ಕಾಲ ತಾನೂ ನರಳಿ ತನ್ನ ಹುಟ್ಟನ್ನೂ ಅಳಿಸಿ ಕೊಂಡಿತ್ತು. ಆಗ ಡಾ|| ರಘುರಾಂ ಎಂಟು ಹತ್ತು ವರ್ಷಗಳ ಅನುಭವದ ಸಮರ್ಥ ವೈದ್ಯರೆನ್ನಿಸಿಕೊಂಡಿದ್ದರೂ ಸ್ವಂತ ಬಂಗಲೆ ಕಟ್ಟಿಸಿರಲಿಲ್ಲ; ಸುಂದರಮ್ಮನವರ—ಎಂದರೆ, ಚೆನ್ನಕೇಶವಯ್ಯನವರ—ಮನೆಯ ಹಿಂದು ಗಡೆಯ ಸಣ್ಣ ಮನೆಯಲ್ಲಿ ಬಾಡಿಗೆಗೆ ಇದ್ದರು. ಡಾಕ್ಟರ ಅನುಪಮ ಸಾಮರ್ಥ್ಯ ಕೂಡ ಚೆನ್ನಕೇಶವಯ್ಯನವರನ್ನಾಗಲಿ ಅವರ ಕೂಸನ್ನಾಗಲಿ ಉಳಿಸಿಕೊಳ್ಳಲು ಸಮರ್ಥವಾಗಿರಲಿಲ್ಲ; ಆದರೆ, ಕೋಲೂರಿಕೊಂಡು ನಡೆ ಯುವ ಮಟ್ಟಿಗಾಗಿದ್ದ ಸುಂದರಮ್ಮನವರು ಕೋಲು ಬಿಟ್ಟು ನಡೆಯುವ ಹಾಗೆ ಮಾಡಿದ್ದರು ಡಾಕ್ಟರು. ಇಷ್ಟಕ್ಕೆ ಮಾತ್ರವಲ್ಲದೆ, ಮನೆಯ ಒಡೆಯ ನಿಲ್ಲದ ಕುಟುಂಬದ ವ್ಯವಹಾರಗಳನ್ನು ವ್ಯವಸ್ಥೆಗೊಳಿಸಲು ನೆರವಾಗಿದ್ದ ಡಾಕ್ಟರಿಗೂ ಸುಂದರಮ್ಮನವರು ಕೃತಜ್ಞರಾಗಿದ್ದರು.

ಚೆನ್ನಕೇಶವಯ್ಯನವರು ಬಡ ಕುಟುಂಬದಲ್ಲಿ ಹುಟ್ಟಿದವರು. ಮೆಟ್ರಿಕ್ಯುಲೇಷನ್ ಪರೀಕ್ಷೆ ಮಾಡಿಕೊಂಡು, 'ಸೆಕ್ರೆಟೇರಿಯಟ್ಟ'ನ ಗುಮಾಸ್ತಗಿರಿಯ ನೊಗಕ್ಕೆ ಬಹುಕಾಲ ಕೊರಳೊಡ್ಡಿದ್ದರು. ತಮ್ಮ ಭಾಗದ ಪಿತ್ರಾರ್ಜಿತ ಆಸ್ತಿಯನ್ನು ಮಾರಿ, ತಮ್ಮ ಗೆಳೆಯರಾದ 'ಸ್ಟಾಕ್ ಬ್ರೋಕರ್' (ಷೇರು ವ್ಯಾಪಾರಿ) ಸುಬ್ಬರಾಯರ ನೆರವಿನೊಂದಿಗೆ 'ಷೇರು ಮಾರ್ಕೆಟ್ಟ'ನಲ್ಲಿ ತಮ್ಮ ಅದೃಷ್ಟ ಪರೀಕ್ಷೆ ಮಾಡತೊಡಗಿದರು. ಅವರ ಅದೃಷ್ಟದಿಂದ, ಎರಡನೆಯ ಮಹಾ ಯುದ್ಧ ಕಾಲದಲ್ಲಿ ಅವರು ಕೊಂಡಿದ್ದ ಷೇರುಗಳ ಬೆಲೆ ಗಗನಕ್ಕೆ

ಏರಿ, ಕಣ್ಣು ಮುಚ್ಚಿ ಬಿಡುವುದರಲ್ಲಿ ಅವರು ಲಕ್ಷಾಧೀಶರಾದರು. ಆಗ ಅವರು ಸರ್ಕಾರವನ್ನು ಕೇಳಿಕೊಂಡು, ಮೂರನೆಯ ಒಂದು ಭಾಗದ ಪಿಂಚಿನ್ನು ಪಡೆದು, ಕೆಲಸದಿಂದ ನಿವೃತ್ತರಾಗಿ, ತಮ್ಮ ಸ್ನೇಹಿತರ ಷೇರು ವ್ಯಾಪಾರದ ಪಾಲುದಾರರಾದರು. ಆಗಲೇ ಅವರು ಸುಂದರಮ್ಮನವರು ಈಗಿದ್ದ ಬಂಗಲೆಯನ್ನು ಕೊಂಡುಕೊಂಡದ್ದು; ಡಾ|| ರಘುರಾಂ ಅವರು ಆಗಲೇ ಈ ಬಂಗಲೆಯ ಹಿಂದಿನ 'ಔಟ್ ಹೌಸಿ'ಗೆ ಬಾಡಿಗೆಗೆ ಬಂದದ್ದು. ಸಾಧಾರಣ ಡಾಕ್ಟರಾಗಿದ್ದು ಬಂಡವಾಳವಿಲ್ಲದ ರಘುರಾಂ ಅವರಿಗೆ ಚೆನ್ನ ಕೇಶವಯ್ಯನವರು ಬಂಡವಾಳವನ್ನು ಒದಗಿಸಿ, ಹೇರಳವಾಗಿ ಔಷಧ ಸಾಮಗ್ರಿಯನ್ನು ಕೊಂಡು 'ದಾಸ್ತಾನು' ಮಾಡಲು ನೆರವಾಗಿದ್ದರು. ಔಷಧ ವಸ್ತುಗಳ ಬೆಲೆ ಒಂದಕ್ಕೆ ಮೂರು ನಾಲ್ಕರಷ್ಟು ಏರಿ, ರಘುರಾಂ ಅಪಾರವಾಗಿ ಹಣ ಗಳಿಸಿ, ಸಾಲವನ್ನೂ ಹಿಂದಿರುಗಿಸಿದರು. ಈ ಹೊತ್ತಿಗೆ ರಘುರಾಂ ಅವರ ಅನುಭವ ಸಾಮರ್ಥ್ಯವೂ ಹೆಚ್ಚಿ, ಅವರು ಪ್ರಸಿದ್ಧ ವೈದ್ಯರಲ್ಲಿ ಒಬ್ಬರೆನಿಸಿದರು. ಬೇರೆಯ ಮನೆ ಕಟ್ಟಿಸಿಕೊಂಡು ಹೋಗಲು ಈಗ ಅವರಿಗೆ ಅನುಕೂಲವಿದ್ದರೂ ರಘುರಾಂ ಅವರನ್ನು ಚೆನ್ನಕೇಶವಯ್ಯ ನವರು ಹೋಗಗೊಡಲಿಲ್ಲ. ಪ್ರೇಮ ಕೃತಜ್ಞತೆಗಳಿಗ ಒಳ್ಳರಾದ ರಘುರಾಂ ಕಡೆಯ ಗಳಿಗೆಯವರೆಗೂ ಚೆನ್ನಕೇಶವಯ್ಯನವರ ಸೇವೆಮಾಡಿ, ಋಣದ ಒಂದು ಭಾಗವನ್ನು ತೀರಿಸಿದರು. ಚೆನ್ನಕೇಶವಯ್ಯನವರು ರಕ್ತದ ಒತ್ತಡದ ರೋಗಕ್ಕೆ ತುತ್ತಾಗಿದ್ದರು. ಅವರ ಮರಣಾನಂತರವೇ ಸುಬ್ಬರಾಯರ ಮಿತ್ರದ್ರೋಹದ ವಿಚಾರ ರಘುರಾಂ ಅವರಿಗೆ ಗೊತ್ತಾಗಿ, ಅವರ ರೋಗಕ್ಕೂ ಅದೇ ಕಾರಣವೆಂದು ವ್ಯಕ್ತಪಟ್ಟಿದ್ದು.

ಲೆಕ್ಕದ ಪುಸ್ತಕಗಳಲ್ಲಿಯೂ 'ಫಾಖಲೆ'ಗಳಲ್ಲಿಯೂ ಯಾವ ದೋಷವೂ ಕಾಣದ ರೀತಿಯಲ್ಲಿ ಸುಬ್ಬರಾಯರು ತಮ್ಮನ್ನು ನಂಬಿದ್ದ ಸ್ನೇಹಿತರಿಗೆ ಮೋಸವೆಸಗಿದ್ದರು. ಇಷ್ಟಾದರೂ ಚೆನ್ನಕೇಶವಯ್ಯನವರ ಆಸ್ತಿಯನ್ನೆಲ್ಲ ನುಂಗಲು ಅವರಿಗೆ ಸಾಧ್ಯವಾಗಿರಲಿಲ್ಲ. ದ್ರವ್ಯನಷ್ಟಕ್ಕಿಂತ ಹೆಚ್ಚಾಗಿ ಮಿತ್ರದ್ರೋಹದ ಪ್ರಸಂಗ ಚೆನ್ನಕೇಶವಯ್ಯನವರ ಕೊರಗಿಗೆ ಕಾರಣವಾಗಿ, ಅವರ ಪ್ರಾಣವನ್ನು ಕೊಂಡಿತು. ರಘುರಾಂ ಬಹು ಬುದ್ಧಿ ವಂತಿಕೆಯಿಂದ ಒಬ್ಬರು ಲಾಯರನ್ನು ಗೊತ್ತುಮಾಡಿ, ಸುಂದರಮ್ಮನವರಿಗೆ

ಬರಬೇಕಾದ ಹಣವನ್ನೂ ಬರಮಾಡಿಕೊಟ್ಟಿದ್ದರು. ಹಣದಲ್ಲಿ ಸ್ವಲ್ಪ ಭಾಗವನ್ನು ಬ್ಯಾಂಕಿನಲ್ಲಿಯೂ, ಕೆಲವಂಶವನ್ನು ಸರ್ಕಾರದ ಸಾಲಪತ್ರಗಳಲ್ಲಿಯೂ, ಉಳಿದ ಭಾಗವನ್ನು ಎರಡು ಮೂರು ಮನೆಗಳ ಮೇಲೆಯೂ ಹಾಕಿಸಿದ್ದರು. ಹಣದ ಮೇಲಿನ ಬಡ್ಡಿ, ಮನೆಯ ಬಾಡಿಗೆ ಇವುಗಳಿಂದ ಸುಂದರಮ್ಮನವರಿಗೆ ತಿಂಗಳಿಗೆ ನಾನ್ನೂರರ ಹತ್ತಿರ ಹತ್ತಿರ ವರಮಾನ ಬರುವ ಹಾಗೆ ಏರ್ಪಾಡು ಮಾಡಿದ್ದರು. ಇಷ್ಟೆಲ್ಲಾ ಮಾಡಿದರೂ, "ಚೆನ್ನಕೇಶವಯ್ಯನವರು ನನಗೆ ಮಾಡಿರುವ ಉಪಕಾರದ ಋಣವನ್ನು ನಾನು ಈ ಜನ್ಮದಲ್ಲಿ ತೀರಿಸಲು ಸಾಧ್ಯವಿಲ್ಲ" ಎಂದು ಸುಂದರಮ್ಮನವರ ಎದುರಿನಲ್ಲಿ ಪದೇ ಪದೇ ಹೇಳುತ್ತಿದ್ದರು. ಇದು ನಾಲಗೆಯ ತುದಿಯ ಮಾತಾಗಿರದೆ ಹೃದಯದ ಅಂತರಾಳದಿಂದ ಹೊರಟದ್ದಾಗಿತ್ತು.

ಡಾ|| ರಘುರಾಂ ಅವರು ಸುಂದರಮ್ಮನವರ ಮನೆಗೆ ಬಂದಾಗಲೆಲ್ಲ, ಬಾಗಿಲ ಎದುರಿಗೆ ತೂಗಹಾಕಿದ ಚೆನ್ನಕೇಶವಯ್ಯನವರ ಭಾವಚಿತ್ರಕ್ಕೆ ಅಭಿಮುಖವಾಗಿ ಕುಳಿತು, ಆಗಾಗ್ಗೆ ಭಕ್ತಿಭಾವದಿಂದ ಚಿತ್ರದ ಕಡೆಯೇ ದೃಷ್ಟಿಸಿ ನೋಡುತ್ತಿದ್ದುದು ಅವರ ಪದ್ಧತಿ. ಇಂದೂ, ಡಾ|| ರಘುರಾಂ ಮನೆಯೊಳಕ್ಕೆ ಬಂದ ಕೂಡಲೆ, ಯಥಾಸ್ಥಾನದಲ್ಲಿ ಕುಳಿತರು. ಅದಕ್ಕೆ 'ಡಾಕ್ಟರ ಸೋಫ' ಎಂದೇ ನಾಮಕರಣವಾಗಿಬಿಟ್ಟಿತ್ತು.

ಡಾಕ್ಟರು ಒಳಕ್ಕೆ ಬಂದು ಕುಳಿತ ಮೇಲೆ, ಕೆಂಚಪ್ಪ ಕಾರಿನಿಂದ ಅವರ ಚರ್ಮದ ಕೈಪೆಟ್ಟಿಗೆಯನ್ನೂ 'ಸ್ಟೆತೊಸ್ಕೋಪ'ನ್ನೂ ಬಳಿಯಲ್ಲಿದ್ದ 'ಟೀಪಾಯ್' (ತಿಂಡಿ ತೀರ್ಥ ಇರಿಸುವ ಕಾಲುಮಣೆ) ಮೇಲೆ ಇರಿಸಿ, ಅವರು ಬಂದ ಸಂಗತಿಯನ್ನು ಅಮ್ಮಾವ್ರರಿಗೆ ತಿಳಿಸಲು ಒಳಕ್ಕೆ ಹೋದ.

೨

ಡಾ|| ರಘುರಾಂ ಅವರು ಕತ್ತೆತ್ತಿ, ಚೆನ್ನಕೇಶವಯ್ಯನವರ ಭಾವ ಚಿತ್ರದ ಪ್ರಸನ್ನ ಮುಖದ ಮುಗುಳುನಗೆಗೆ ಉತ್ತರವಾಗಿಯೋ ಎಂಬಂತೆ ಮುಗುಳುನಗೆ ನಗುತ್ತಲೇ ಚಿತ್ರವನ್ನು ದಿಟ್ಟಿಸಿ ನೋಡುತ್ತಿದ್ದರು. ಸುಂದರಮ್ಮನವರು ಬೆನ್ನು ಬಗ್ಗಿಸಿಕೊಂಡು ಒಳಗಿನಿಂದ ಬಂದದ್ದು ಅವರ ಗಮನಕ್ಕೆ ಬರಲೇ ಇಲ್ಲ. "ತುಂಬಾ ಹೊತ್ತಾಯಿತೇನೋ, ನೀವು ಬಂದು" ಎಂದು ಸುಂದರಮ್ಮನವರು ಹೇಳಿದಾಗಲೇ ರಘುರಾಂ ಚಿತ್ರಾವ ಲೋಕನ ಸಮಾಧಿಯಿಂದ ಎಚ್ಚತ್ತದ್ದು.

ಡಾ|| ರಘುರಾಂ ಚಿತ್ರವನ್ನು ನೋಡುತ್ತಿದ್ದುದು ಸುಂದರಮ್ಮನವರ ಗಮನಕ್ಕೂ ಬಾರದೆ ಹೋಗಿರಲಿಲ್ಲ; ತಮ್ಮ ಯಜಮಾನರಲ್ಲಿ ಡಾಕ್ಟರಿಗೆ ತುಂಬ ಗೌರವ ಎಂಬುದು ಅವರಿಗೆ ಅಭಿಮಾನದ, ಸಂತೋಷದ ಸಂಗತಿ.

ಸುಂದರಮ್ಮನವರು ಬಂದ ಕೂಡಲೆ ರಘುರಾಂ ಎದ್ದು ನಿಂತರು.

''ಕುಳಿತುಕೊಳ್ಳೀಪ್ಪ, ಎಷ್ಟು ದಿವಸ ಹೇಳಿದರೂ ನಿಮ್ಮ ಕೆಟ್ಟ ಚಾಳಿಯನ್ನು ನೀವು ಬಿಡುವುದಿಲ್ಲವಲ್ಲ" ಎಂದು ಸುಂದರಮ್ಮನವರು ನಗುತ್ತ ನುಡಿದು, ತಾವೂ ಎದುರಿಗಿದ್ದ ಇನ್ನೊಂದು ಸೋಫಾದ ಮೇಲೆ ಕುಳಿತರು.

"ಅವರು ನಮ್ಮ ತೀರ್ಥರೂಪರ ಸಮಾನ; ನೀವು ನಮ್ಮ ಮಾತೃ ಶ್ರೀಯವರ ಸಮಾನ. ಹೆತ್ತ ತಂದೆ ತಾಯಿಗಳಂತೂ ನನ್ನ ಚಿಕ್ಕಂದಿನಲ್ಲೇ ಹೋದರು. ನನ್ನ ಕೆಟ್ಟ ಚಾಳಿಯನ್ನ ತಿದ್ದೋದಕ್ಕೆ ನೀವೊಬ್ಬರೇ ಉಳಿದಿರುವವರು'' ಎಂದು ರಘುರಾಂ ಸೋಫಾದ ಮೇಲೆ ಕುಳಿತರು. ಮುಖದ ಮೇಲಿನ ಮುಗುಳುನಗೆ ಮಾಸಿರಲಿಲ್ಲ.

"ಆ ಭಾವಚಿತ್ರವನ್ನ ತಯಾರು ಮಾಡಿಸಿ ಹಾಕಿಸಿದವರೂ ನೀವೇ. ನಾನು ಬದುಕಿರುವಾಗಲೇ ನನ್ನದೂ ಒಂದು ಚಿತ್ರ ತಯಾರು ಮಾಡಿಸಿ ಬಿಡಿ, ಡಾಕ್ಟರೇ. ನಾನೂ ಯಾತ್ರೆಗೆ ಸಿದ್ಧಮಾಡಿಕೊಳ್ಳುತ್ತ ಇದ್ದೀನಿ.

ಅವರ ಬಳಿಗೆ ನನ್ನನ್ನ ಆದಷ್ಟು ಬೇಗ ಕಳಿಸಿಕೊಟ್ಟುಬಿಡಿ ಅಪ್ಪ" ಎಂದು ಹಾಸ್ಯ ಬೆರೆತ ಜುಗುಪ್ಸೆಯಿಂದ ನುಡಿದರು ಸುಂದರಮ್ಮ.

"ನಿಮ್ಮನ್ನ ವೈಕುಂಠ ಯಾತ್ರೆಗೆ ಕಳಿಸೋದಕ್ಕೆ ನನ್ನ ಬಳಿ ಜಾಪಾಳ ಮಾತ್ರೆಯಿಲ್ಲವಲ್ಲ! ಅಲ್ಲದೆ ನಿಮ್ಮ ಬೆನ್ನನ್ನ ನೆಟ್ಟಗೆ ಮಾಡಿ ಕೊಡ ಬೇಕೋ ಇಲ್ಲವೊ" ಎಂದು ನಕ್ಕು, ರಘುರಾಂ ಮುಂದುವರಿಸಿದರು: "ಅದು ಹಾಗಿರಲಿ, ನೀವು ಹೇಳಬೇಕಾದ್ದನ್ನ ಹೇಳಿ ನನ್ನನ್ನ ಊಟಕ್ಕೆ ಬಿಟ್ಟುಕೊಡುತ್ತೀರೋ, ಇಲ್ಲ ಇಲ್ಲೇ ಊಟಕ್ಕೆ ಏಳಲೋ?"

"ನಿಮ್ಮನ್ನ ಕಾಡು ಹರಟೆ ಹರಟೋದಕ್ಕೆ ಕರಸಿಕೊಂಡರೆ, ನಿಮ್ಮನ್ನ ನಂಬಿಕೊಂಡಿರುವ ಹೆಂಡತಿಗಿಂತ ರೋಗಿಗಳು ನನ್ನನ್ನು ಶಪಿ ಸುತ್ತಾರೆ. ನಿಮ್ಮನ್ನ ಒಂದೆರಡು ಮುಖ್ಯ ವಿಷಯ ಕೇಳಿ ತಿಳಿದುಕೊಳ್ಳ ಬೇಕಾಗಿತ್ತು. ಅದಕ್ಕೆ ಕರಸಿದೆ. ನಿಮ್ಮನ್ನ ಊಟಕ್ಕೆ ಕೂರಿಸಿಕೊಂಡರೆ ನಿಮ್ಮ ರಾಣೀ ಸಾಹೇಬರು ನನ್ನನ್ನ ಸುಮ್ಮನೆ ಬಿಡುತ್ತಾರೆಯೋ ಡಾಕ್ಟರೆ?" ಎಂದು ಹೇಳಿ, ಕೆಂಚಪ್ಪನನ್ನು ಕೂಗಿದರು; ಕೆಂಚಪ್ಪ ಒಳಗಿನಿಂದ ಬಂದು ಎದುರು ನಿಲ್ಲಲು, "ಭಟ್ಟರಿಗೆ ಹೇಳೋ, ಬೇಗ ಒಂದು ಲೋಟ ಓವಲ್ ಟೈನ್ ಮಾಡಿಕೊಂಡು ಬರೋ ಹಾಗೆ" ಎಂದು ತಿಳಿಸಿದರು. ಕೆಂಚಪ್ಪ ಅಪ್ಪಣೆ ಪಾಲಿಸಲು ಮತ್ತೆ ಒಳಕ್ಕೆ ಹೋದ.

"ಅಂತೂ, ನಾನು ಯಾವ ಹೊತ್ತಿಗೇ ಬರಲಿ—ಕಾಫಿಯೋ, ಟೀನ್ನೋ, ಓವಲ್‌ಟೈನ್ನೋ, ಹಾಲೋ—ನನ್ನ ಹೊಟ್ಟೆಯನ್ನ ಬಿಸಿ ಮಾಡ ಬೇಕು, ಅಲ್ಲವೆ? ನಿಮ್ಮ ಹೊಟ್ಟೆ ತಣ್ಣಗಿರಲಿ ತಾಯಿ........ಎಲ್ಲಿ, ಶಾಮಣ್ಣ, ರಾಜು ಇಬ್ಬರೂ ಕಾಣೋದಿಲ್ಲ? ಅಂದಹಾಗೆ, ಅವರ 'ರಿಸಲ್ಟ್' (ಪರೀಕ್ಷೆಯ ಫಲಿತಾಂಶ) ಏನಾಯಿತು? ನಿನ್ನೇನೇ ಬಂತಲ್ಲ?" ಎಂದು ರಘುರಾಂ ಅತ್ಯಂತ ಕುತೂಹಲದಿಂದ ಕೇಳಿದರು.

"ಯಾಕೆ, ಕೆಂಚಪ್ಪ ಹೇಳಲಿಲ್ಲವೆ?"

"ಇಲ್ಲವಲ್ಲ!" ಎಂದರು ರಘುರಾಂ, ಆಶ್ಚರ್ಯದಿಂದ.

ಅದೇ ತಾನೆ ಕೆಂಚಪ್ಪ ಒಳಗಿನಿಂದ ಹೊರಗೆ ಹೋಗಲು ಹಜಾರವನ್ನು ಹಾದುಹೋಗುತ್ತಿದ್ದ. ಸುಂದರಮ್ಮನವರು, "ಲೋ, ಸ್ವಲ್ಪ ಬಾರೋ ಇಲ್ಲಿ" ಎಂದು ಕೂಗಿದರು. ಅವನು ನಿಂತಲ್ಲಿ ನಿಂತ, ಒಡತಿಯ ಅಪ್ಪಣೆಯನ್ನು

ಎದುರುನೋಡುತ್ತ.

"ಶಾಮಣ್ಣನಿಗೆ 'ಫಸ್ಟ್ ಕ್ಲಾಸಿ'ನಲ್ಲಿ ಪ್ಯಾಸಾಯಿತು, ರಾಜುವಿಗೆ ಪ್ಯಾಸಾಯಿತು, ರತ್ನಮ್ಮನಿಗೂ ಪ್ಯಾಸಾಯಿತು ಅಂತ ತಿಳಿಸಿ, ಸ್ವಲ್ಪ 'ಅರ್ಜೆಂಟಾ'ಗಿ ಮಾತನಾಡುವುದಿದೆ ಅಂತ ಹೇಳಿ ಕೂತಿದ್ದು ಕರೆದು ಕೊಂಡು ಬಾ ಅಂತ ಹೇಳಲಿಲ್ಲವೇನೋ?" ಎಂದು ಸುಂದರಮ್ಮನವರು ಹುಸಿಕೋಪವನ್ನು ನಟಿಸಿ, ಭೃತ್ಯಶ್ರೇಷ್ಠನನ್ನು ಝುಂಕಿಸಿದರು.

ಕೆಂಚಪ್ಪ ಬೆಪ್ಪುನಗೆ ನಗುತ್ತ ತಲೆಗೆ ಸುತ್ತಿದ್ದ ಚೌಕವನ್ನು ಬಿಚ್ಚಿ ಮತ್ತೆ ಕಟ್ಟಿಕೊಳ್ಳುತ್ತ ನಿಂತ. ಭಟ್ಟರು ತಂದಿತ್ತ ಓವಲ್‌ಟ್ಯೆನ್ ಕುಡಿಯುತ್ತ–

"ಸುಮಾರು ಹೊತ್ತು ಕೂತಿದ್ದೇ ನನ್ನ ಕರೆದುಕೊಂಡು ಬಂದಿದ್ದಾನೆ. ಹೇಳೋದನ್ನ ಮರೆತ, ಅಷ್ಟೆ. ಅರ್ಧ ಕೆಲಸ ಮಾಡಿದ ಹಾಗಾಯಿತಲ್ಲ. ಪಾಪ, ಅವನಿಗೂ ವಯಸ್ಸಾಗುತ ಬಂತು. ನಾನು ನಿಮ್ಮ ಮನೆಗೆ ಬಂದಾಗ ಇಲ್ಲಿ ಮಾಲಿಯಾಗಿ ಕೆಲಸಕ್ಕೆ ಸೇರಿದೋನು. ಪೂರ್ತ 'ಸರ್ವಿಸ್' (ಉದ್ಯೋಗ) ಆಗಿದೆ. ಕೆಂಚಪ್ಪನಿಗೆ ಇನ್ನು ಪಿಂಚಿನ್ನು ಮಾಡಿಬಿಡಿ. ನನ್ನ ಷಾಪಿನಲ್ಲಿ ಸದಾ ಕೂತಿರೋ ಕೆಲಸಾನೇ ಕೊಟ್ಟುಬಿಡುತೀನಿ" ಎಂದು ಡಾಕ್ಟರು ನಕ್ಕರು.

ಕೆಂಚಪ್ಪ ವಿವರಣೆ ಕೊಟ್ಟ:

"ಇವರ ನಾಪಿನಲ್ಲಿ ಬಾಯಿಲೆಯೋರ ಮುಖ ನೋಡುತಾ, ಅವರ ಕಥೆ ಇವರ ತಮಾಷೆ ಮಾತುಗಳನ್ನ ಕೇಳುತಾ ಕುಂತಿದ್ದರೆ, ಎಲ್ಲಾ ಮರೆತು ಹೋಗೋದೇ ಮತ್ತೆ! ನಾನೇನು ಮಾಡೋಕಾಗುತ್ತೆತೆ" ಎಂದು ಅವನೂ ನಗೆಬೆರೆತ ಕೆಮ್ಮಿನೊಂದಿಗೆ ಹೊರಕ್ಕೆ ಹೊರಟುಹೋದ.

"ಅಂತೂ ಸಂತೋಷ, ಅಮ್ಮಾ, ಎಲ್ಲರಿಗೂ ಪ್ಯಾಸಾದದ್ದು. ರತ್ನ ಇದ್ದರೆ 'ಸ್ವೀಟ್ಸ್' (ಸಿಹಿ ತಿಂಡಿ) ಎಲ್ಲಿ ಅಂತ ಪೀಡಿಸಬಹುದಾಗಿತ್ತು. ಎಲ್ಲಿ, ಅವಳೂ ಕಾಣೋದಿಲ್ಲವಲ್ಲ?"

"ಪ್ಯಾಸಾದ ಹಿಗ್ಗಿನಲ್ಲಿ ಅವರು ಮನೆಯಲ್ಲಿ ಎಲ್ಲಿ ಇರುತ್ತಾರೆ? ಯಾರು ಯಾರೋ ಸ್ನೇಹಿತೆಯರು ಇವಳನ್ನ ನೋಡೋಕೆ ಬಂದಿದ್ದರು. ಇವಳೂ ಮುಂದಿನ ಬೀದಿಗೆ ಯಾರದೋ ಸ್ನೇಹಿತೆ ಮನೆಗೆ ಹೋಗಿದಾಳೆ ಅಂತ ಕಾಣುತ್ತೆ."

"ನಿಮ್ಮ ಶಾಮಣ್ಣನಿಗೆ ಫಸ್ಟ್ ಕ್ಲಾಸಿನಲ್ಲಿ ಪ್ಯಾಸಾದ್ದು ಹೆಚ್ಚಲ್ಲ. ರಾಜುವಿಗೆ ಪ್ಯಾಸಾದ್ದು ನನಗೆ ನಿಜವಾಗಲೂ ತುಂಬ ಸಂತೋಷ. ಮುಂದಕ್ಕೆ ಏನು ಮಾಡಬೇಕೂ ಅಂತ ಅವರ ಇಷ್ಟ?"

"ಅವರ ಇಷ್ಟ ನನ್ನ ಇಷ್ಟ ಅಂತ ನೋಡುವುದಕ್ಕೆ ಹೋದರೆ ಆಗುತ್ತೆಯೇ? ಅವರ ಇಬ್ಬರದೂ ಒಂದೊಂದು ದಾರಿ. ಒಬ್ಬ ಬೆಟ್ಟಕ್ಕೆ ಹಾರುತೀನಿ ಅಂದರೆ ಇನ್ನೊಬ್ಬ ಆಕಾಶಕ್ಕೇ ಏಣಿ ಹಾಕುತಾನೆ. ಬದುಕೋ ದಾರಿ ಅವರಿಗೇನು ಗೊತ್ತಾಗುತ್ತೆ? ನಿಮ್ಮಂಥ ತಿಳಿದವರು ಬುದ್ಧಿವಾದ ಹೇಳಿದರೆ, ಏನಾದರೂ ಕೇಳುತ್ತಾರೋ ಏನೋ."

"ಹೋಗಲಿ. ನಿಮ್ಮ ಇಷ್ಟ ಏನು?" ಎಂದು ಡಾಕ್ಟರ್ ಕೇಳಿದರು.

"ನನ್ನ ಇಷ್ಟ ನನ್ನ ಬಯಕೆ ಇದನ್ನೆಲ್ಲಾ ಯಾರು ಕೇಳುತ್ತಾರೆ? ಶಾಮಣ್ಣ ಬೊಂಬಾಯಿಗೋ ಮದರಾಸಿಗೋ ಹೋಗಿ 'ಲಾ' (ನ್ಯಾಯ ಶಾಸ್ತ್ರ) ಪರೀಕ್ಷೆಗೆ ಓದಲಿ ಅಂತ ನನ್ನ ಹಂಬಲ. ಎಂ.ಎ. ಮಾಡಿಕೊಂಡು ಇಂಗ್ಲೆಂಡಿಗೋ ಅಮೆರಿಕಾಕ್ಕೋ ಹೋಗಿ, ಹಾಲು ಕೊಡವೆ ಇರೋ ಬರಡು ಹಸು ಇರೋದಿಲ್ಲವೆ, ಹಾಗೆ, ಅದೇನೋ ಔಷಧಿ ಕೊಡವೆ ಇರೋ ಪಿಹೆಚ್.ಡಿ. (Ph. D.) ಡಾಕ್ಟರಾಗುತಾನಂತೆ!"

"ನೀವು ಹೇಳೋದು ದಿಟ ಅನ್ನಿ. ಅವನು ಪಿಹೆಚ್. ಡಿ. ಮಾಡಿ ಕೊಂಡು ಬಂದರೆ ಇಲ್ಲಿ ಅವನಿಗೆ 'ಪ್ರೊಫೆಸರ್' ಕೆಲಸ ಕೊಡುವುದಕ್ಕೆ ಯಾರು ಕಾದಿದ್ದಾರೆ? ನಿಮ್ಮ ಯೋಚನೆಯೇ ಸರಿ. ರಾಜೂದು ಏನಂತೆ?"

"ಅವನಿಗೆ ಮೂರು ಸಲ ಎಸ್.ಎಸ್.ಎಲ್.ಸಿ.ಯಲ್ಲಿ ಫೇಲಾಗಿರೋದೆ ಸಾಕಂತೆ. 'ಇಂಟರ್ ಮೀಡಿಯಟ್'ನಲ್ಲಿ ಆರು ಸಲ 'ನಾಪಾಸಾ'ಗು ವುದಕ್ಕೆ ಇಷ್ಟವಿಲ್ಲವಂತೆ. ಅವನೇನೋ ಬೊಂಬಾಯಿಗೆ ಹೋಗಿ 'ಫಿಲ್ಮ್ ಆ್ಯಕ್ಟರ್' (ಚಲನಚಿತ್ರ ನಟ) ಆಗ್ತಾನಂತೆ."

ಡಾಕ್ಟರು ಮೌನವಾಗಿಯೇ ಕುಳಿತಿದ್ದರು. ಸುಂದರಮ್ಮನವರು ಮುಂದುವರಿಸಿದರು:

"ನೋಡಿದಿರಾ ರಘುರಾಮಯ್ಯನವರೇ," (ಅವರ ಹೆಸರು ಹಾಗೆಯೆ. ಡಾಕ್ಟರ್ ಪರೀಕ್ಷೆಯಾದ ಮೇಲೆ ರಘುರಾಂ ಎಂದು ಮಾರ್ಪಾಟು ಮಾಡಿ

ಕೊಂಡಿದ್ದರು.) ವಿಚಾರ ಹೀಗೆ. ಅವನು ಸೀಮೆಗೆ ಹೋಗೋದಕ್ಕೆ ಅಂತ ಹತ್ತು ಹನ್ನೆರಡು ಸಾವಿರ ಖರ್ಚು ಮಾಡೋದಕ್ಕೆ ಇಷ್ಟಪಟ್ಟರೆ, ಹೇಗೆ ಪೂರೈಸೋದು? ಏನೋ ಲಕ್ಷಾಂತರ ರೂಪಾಯಿ ಆಸ್ತಿ ಇಟ್ಟು ಹೋಗಿರುವ ಹಾಗೂ, ನಾನು ಅವರಿಗೆ ಸರಿಯಾಗಿ ತಿಳಿಸದೆ ಕಾರ್ಪಣ್ಯದ ಜೀವನ ಮಾಡುತ್ತ ಇರುವ ಹಾಗೂ ಅವರು ಭಾವಿಸಿಕೊಂಡಿದಾರೆ. ನೀವು ಅವರಿಗೆ ಸರಿಯಾಗಿ ತಿಳಿವಳಿಕೆ ಕೊಡಬೇಕು, ಎಲ್ಲ ಬಲ್ಲೋರು."

"ರಾಜು ಏನು ಮಾಡಬೇಕು ಅಂತ ನಿಮ್ಮ ಇಷ್ಟ ?"

• "ಅವನು ಡಾಕ್ಟರಾಗಲಿ ಅಂತ."

"ಏನು. ನನ್ನ ವಜಾ ಮಾಡಿಬಿಡಬೇಕು ಅಂತಲೋ, ನಿಮ್ಮ ಮನಸ್ಸಿನಲ್ಲಿ?" ಎಂದು ಡಾಕ್ಟರು ನಕ್ಕರು.

"ಅಷ್ಟಲ್ಲವೆ ಇನ್ನೇನು? ಮಗ ಡಾಕ್ಟರಾದರೆ ಬಿಟ್ಟಿ ಭೇದಿಯ ಉಪ್ಪು ಸಿಕ್ಕುತ್ತೋ ಇಲ್ಲವೊ?" ಎಂದು ಸುಂದರಮ್ಮನವರೂ ಪ್ರತಿಯಾಗಿ ನಕ್ಕರು.

ಇಬ್ಬರೂ ಎರಡು ಮೂರು ನಿಮಿಷ ಅವೇ ವಿಷಯದ ಆಲೋಚನೆಯಲ್ಲಿ ಮುಳುಗಿ, ಮೌನವಾಗಿದ್ದರು.

"ನನ್ನ ತೀರ್ಮಾನವನ್ನು ಹೇಳಿಬಿಡಲೋ?" ಎಂದು ಡಾಕ್ಟರು ಕೇಳಿದರು.

"ಅದಕ್ಕೇ ನಿಮ್ಮನ್ನು ಕರೆಸಿದ್ದು. ಅಗತ್ಯವಾಗಿ ಹೇಳಿ" ಎಂದರು ಸುಂದರಮ್ಮನವರು.

"ಸದ್ಯಕ್ಕೆ ರಾಮಣ್ಣ ನಿಮ್ಮ ಕಣ್ಣೆದುರಿಗೆ ನಮ್ಮ ಮೈಸೂರು ದೇಶದಲ್ಲೇ ಇರಲಿ. ಅವನ ಇಷ್ಟದ ಪ್ರಕಾರ ಎಂ.ಎ. ಗೇ ಓದಲಿ. ಎರಡು ವರ್ಷದ ಕಾಲದಲ್ಲಿ ಸೀಮೆಗೆ ಹೋಗಬೇಕು ಅನ್ನುವ ಹುಚ್ಚು ಬಿಡಿಸೋಣ. ಎಂ.ಎ. ಮಾಡಿಕೊಂಡು ಎಲ್‌ಎಲ್.ಬಿ. ಮಾಡಲಿ ಬೇಕಾದರೆ. ರಾಜುವನ್ನು ಈಗಲೇ ಎಲ್.ಎಂ.ಪಿ. (ವೈದ್ಯ ಪರೀಕ್ಷೆ)ಗೆ ಸೇರಿಸೋದು ಬೇಡ. ಬರಿಯ ಎಸ್. ಎಸ್. ಎಲ್. ಸಿ.ಗೆ 'ಸೀಟು' ಸಿಕ್ಕುವುದೂ ಕಷ್ಟ. ಸಿ. ಬಿ. ಜಡ್. ತೆಗೆದುಕೊಂಡು 'ಇಂಟರ್' ಮಾಡಲಿ. ಆಮೇಲೆ ಬೇಕಾದರೆ, ಅವನನ್ನೂ ಎಂ.ಬಿ.ಬಿ.ಎಸ್. (ವೈದ್ಯ ಪರೀಕ್ಷೆ)ಗೆ ಓದಿಸಬಹುದು. 'ಮ್ಯಾಗ್‌ಸಲ್ಫ್', 'ಕ್ವಿನೈನು', 'ಕ್ಯಪಾಟಿಕ ಮಿಕ್ಸ್‌ಚರ್' ಕೊಡೋದಕ್ಕೆ ಎಲ್.ಎಂ.ಪಿ.

ಆದರೇನು? ಎಂ.ಬಿ.ಬಿ.ಎಸ್. ಆದರೇನು? ಆದರೆ ಬೆಂಗಳೂರಿನ ಜನ ಡಾಕ್ಟರ ಬೋರ್ಡ್ ನೋಡುತ್ತಾರೆ, ಮುಖ ಕೂಡ ನೋಡೋದಿಲ್ಲ: ಬಿ.ಎಸ್‌ಸಿ., ಎಂ.ಬಿ.ಬಿ.ಎಸ್. ಅಂದರೆ 'ಬಡಾ' ಡಾಕ್ಟರು, ಎಲ್.ಎಂ.ಪಿ. ಅಂದರೆ 'ಛೋಟಾ' ಡಾಕ್ಟರು. ಆದ್ದರಿಂದ, ರಾಜುವಿಗೆ ಇಂಟರ್, ಶಾಮಣ್ಣನಿಗೆ ಎಂ.ಎ.—ಇದು ನನ್ನ ತೀರ್ಮಾನ."

"ಶಾಮಣ್ಣನ ಇಷ್ಟ ನೆರವೇರಿದ ಹಾಗಾಯಿತು. ರಾಜು ಏನನ್ನು ತಾನೆಯೋ?"

"ಏನನ್ನುತ್ತಾನೋ ಅಂದರೆ ಆಗುತ್ತೆಯೇ? ಬಲವಂತ ಮಾಡಬೇಕು."

"ನೋಡೋಣ. ಇನ್ನು ರತ್ನನ ವಿಷಯ. ತಮ್ಮನ ಮಗಳು, ತಬ್ಬಲಿ ಹುಡುಗಿ ಅಂತ ಮನೆಯಲ್ಲಿ ಇರಿಸಿಕೊಂಡು ಓದಿಸಿದ್ದಾಯಿತು. ಅವಳು ಜಾಣೆ, ಬುದ್ಧಿವಂತೆ. ನೋಡಿ, ಮೊದಲನೇ ಸಲಕ್ಕೇನೇ ಎಸ್. ಎಸ್.ಎಲ್.ಸಿ. ಪ್ಯಾಸ್ ಮಾಡಿಬಿಟ್ಟಳು! ಮಕ್ಕಳ ಮದುವೆಯ ಯೋಚನೆ ಮಾಡುವುದಕ್ಕೆ ಶಾಮುವಿಗೇ ಆಗ ವಯಸ್ಸಾಗಿರಲಿಲ್ಲ. ಆದರೆ, ನನ್ನ ತಮ್ಮನೇನೋ ಸದಾ ಹೇಳುತಾನೇ ಇದ್ದ, ರತ್ನನ್ನ ತಂದುಕೊಳ್ಳಬೇಕು ಅಂತ. ನನ್ನ ಮನಸ್ಸಿನಲ್ಲೂ ಅದೇ ಆಸೆ ಇದ್ದರೂ, ನೋಡೋಣ ನೋಡೋಣ ಅಂತಲೇ ಇದ್ದೆ. ಅಷ್ಟು ಬೇಗ ಕಣ್ಣು ಮುಚ್ಚಿಕೊಂಡು ಒಬ್ಬಳೇ ಮಗಳನ್ನು ತಬ್ಬಲಿ ಮಾಡಿ ಹೋಗುತ್ತಾನೆ ಅಂತ ಯಾರು ಕಂಡಿದ್ದೋರು? ಅವನ ಹೆಂಡತಿ ತವರುಮನೆ ಸೇರಿಕೊಂಡಳು. ಪಾಪ, ಅವರೂ ಬಡವರು. ಚೆನ್ನಾಗಿ ಬಿದ್ದ ತಮ್ಮನ ವಂಶದ ಒಂದೇ ಕುಡಿ, ಹೆಣ್ಣಾದರೇನು ಗಂಡಾದರೇನು, ಸೀದುಹೋಗಬಾರದು, ಚೆನ್ನಾಗಿ ಬೆಳೆಯಲಿ ಅಂತ ಸಾಕಿಕೊಂಡು ಬಂದದ್ದಾಯಿತು. ಹೊರಗಿನ ಹೆಣ್ಣುಗಳು ಬರುವುದಕ್ಕೆ ಮುಂಚೆಯೇ ನಮ್ಮ ಶಾಮುವಿಗೆ ಅವಳನ್ನ ಕೊಟ್ಟು ಮದುವೆ ಮಾಡಿಬಿಡಬೇಕು ಅಂತ ನನ್ನ ಬಯಕೆ. ಮದುವೆ ಮಾಡೋದಾದರೆ, ಅವಳಿಗೆ ಇಷ್ಟೇ ಓದು ಸಾಲದೆ ಅಂತ? ನಿಮ್ಮ ಅಭಿಪ್ರಾಯ ಏನು?"

ಸುಂದರಮ್ಮನವರು ಹೇಳಿದ್ದನ್ನೆಲ್ಲಾ ಚೆನ್ನಾಗಿ ಮಥನಮಾಡಿ ತಮ್ಮ ತೀರ್ಪುಕೊಡುವ ರೀತಿಯಲ್ಲಿ ರಘುರಾಂ ಕೆಲಹೊತ್ತು ಮೌನವನ್ನವಲಂಬಿಸಿದರು.

"ಏಕೆ, ಸುಮ್ಮನೆ ಕುಳಿತುಬಿಟ್ಟಿರಿ? ಅವಳನ್ನು ಮುಂದಕ್ಕೆ ಓದಿಸೋದು ನಿಮಗೆ ಇಷ್ಟ ಇಲ್ಲವೋ?" ಎಂದು ಸುಂದರಮ್ಮನವರು ಪ್ರಶ್ನಿಸಿದರು.

ಡಾಕ್ಟರ್ ಬಾಯಿ ಬಿಟ್ಟರು:

"ನಿಮ್ಮ ಶಾಮಣ್ಣನಿಗೇ ಕೊಟ್ಟು ಮದುವೆ ಮಾಡುವುದಾದರೆ ಓದು ಯಾಕೆ? ಬೇರೇ ಕಡೆ ಕೊಡುವುದಾದರೆ, ಓದಿಸಬೇಕು. ಈಗಿನ ಕಾಲದಲ್ಲಿ ನಿಮ್ಮ ಮಗಳಿಗೆ ಇಂಟರ್‌ಮೀಡಿಯೆಟ್ ಆಗಿದೆಯೇ, ಬಿ. ಎಸ್‌ಸಿ. ಆಗಿದೆಯೇ ಅಂತ ಕೇಳುವುದು ರೂಢಿಯಾಗಿ ಹೋಗಿದೆ. ನಿಮ್ಮ ರತ್ನಂಗೆ ರೂಪೇ 'ಕ್ವಾಲಿಫಿಕೇಷನ್ನು' (ಅರ್ಹತೆ). ಬೇರೆ 'ಕ್ವಾಲಿಫಿಕೇಷನ್ನು' ಯಾಕೆ? ಶಾಮಣ್ಣನಿಗೆ ತಂದುಕೊಳ್ಳದೆ ಹೋದರೂ, 'ಮ್ಯಾರೇಜ್ ಮಾರ್ಕೆಟ್'ನಲ್ಲಿ (ಮದುವೆಯ ಸಂತೆ) ಅವಳಿಗೆ ವರ ಸಿಕ್ಕುವುದೇನೂ ಅಷ್ಟು ಕಷ್ಟವಾಗೋದಿಲ್ಲ."

"ನಿಮಗೆ ಭ್ರಾಂತು ಡಾಕ್ಟರೆ. ಅವಳ ರೂಪ ನೋಡಿ ಯಾರು ಮದುವೆಯಾಗ್ತಾರೆ, ತಬ್ಬಲಿ ಹುಡುಗಿಯನ್ನ? ಬಂಡವಾಳ ಅಷ್ಟಕ್ಕಷ್ಟೇ ಆದರೂ ನಮ್ಮ ಬಂಗ್ಲೆ ನೋಡಿ, ಎರಡು ಸಾವಿರ ಕೊಡುತ್ತೀರ, ಮೂರು ಸಾವಿರ ಕೊಡುತ್ತೀರ ಅಂತ ಕೇಳುತ್ತಾರೆ. ಮದುವೆ ಅನ್ನುವುದು ಒಂದು ವ್ಯಾಪಾರ ಆಗಿಹೋಗಿದೆ. ಏನೂ ಅಂತ ವರದಕ್ಷಿಣೆ ಕೇಳುತ್ತಾರೆಯೋ ಬಾಯಿ ಬಿಟ್ಟು, ಮಾನ ಮರ್ಯಾದೆ ಇಲ್ಲದೆ........"

"ಅಂತೂ ರತ್ನನ ಮದುವೆ ಭಾರವೂ ನಿಮ್ಮದೇ ಅನ್ನಿ, ಹಾಗಾದರೆ?"

"ಏನು ಮಾಡಲಿ ಹೇಳಿ. ಸೊಸೇನೂ ಅವಳೇ, ಅವಳೇ ಮಗಳೂ, ತಂದುಕೊಳ್ಳದೆ ಹೋದರೆ, ಆ ತಬ್ಬಲಿ ಹೆಣ್ಣಿಗೆ ಗತಿ?"

"ಅದು ದಿಟ. ಆದರೆ, ನನ್ನದೊಂದು ಸಂದೇಹ ಇದೆ."

"ಏನು?"

"ನಿಮ್ಮ ಶಾಮು ಉಪ್ಪರಕ್ಕೂ ಫಸ್ಟ್ ಕ್ಲಾಸಿನಲ್ಲೇ ಪ್ಯಾಸ್ ಮಾಡಿ ಕೊಂಡು ಬಂದಿದ್ದಾನೆ. ಅವನಿಗೆ ಯಾರಾದರೂ ದಮ್ಮಯ್ಯ ಅಂತ ಹೆಣ್ಣು ಕೊಡುತ್ತಾರೆ. ರತ್ನನ್ನ........"

"ಇದೇನು ಡಾಕ್ಟರೆ ನೀವು ಹೇಳುವುದು? ನಾವು ಸಾಕಿದ ಹೆಣ್ಣು, ತಬ್ಬಲಿ ಮಗು, ಸೋದರ ಸಂಬಂಧ—ಇದನ್ನು ಬಿಟ್ಟು ಹೊರಕ್ಕೆ

ಹೋಗೋದೇ, ಹೆಣ್ಣನ್ನ ಹುಡುಕಿಕೊಂಡು? ಹೊರಗಿನ ಹೆಣ್ಣು ತಂದು ಕೊಳ್ಳೋದಕ್ಕೆ ನಮಗೇನೂ ವರದಕ್ಷಿಣೆಯ ಆಸೆ ಇಲ್ಲ. ಅಲ್ಲದೆ, ರತ್ನ ಏನಾಗಿದಾಳೆ? ಅವಳ ಹೆಸರು ಒಂದಲ್ಲ, ಇರೋದು ಒಂದಲ್ಲ. ರೂಪ ಗುಣ, ವಿದ್ಯೆ, ನಯ, ನಾಜೂಕು—ಎಲ್ಲದರಲ್ಲೂ ನಿಜವಾಗಿ ರತ್ನದಂಥ ಹುಡುಗಿ........"

"ಅದೇ ಅಮ್ಮ, ಸ್ವಲ್ಪ ಯೋಚಿಸಬೇಕಾದ ವಿಚಾರ" ಎಂದು ಡಾಕ್ಟರು ಗಲ್ಲದ ಮೇಲೆ ಬೆರಳಾಡಿಸಿದರು.

ಡಾಕ್ಟರ ಅಭಿಪ್ರಾಯ ಏನೆಂದು ಸುಂದರಮ್ಮನವರಿಗೆ ಅರ್ಥವಾಗ ಲಿಲ್ಲ. ಬೆರಗುಗಣ್ಣಿನಿಂದ ಅವರ ಮುಂದಿನ ವಿವರಣೆಯನ್ನು ನಿರೀಕ್ಷಿಸುತ್ತ ಕುಳಿತರು. ಅವರ ಮೌನವೇ ಪ್ರಶ್ನೆಯಂತಿತ್ತು: "ಏನು ನಿಮ್ಮ ಅಭಿ ಪ್ರಾಯ?" ಎಂದು.

"ನೀವು ಏನು ಬೇಕಾದರೂ ಹೇಳಿ, ಶಾಮಣ್ಣನಿಗೂ ರತ್ನನಿಗೂ ವರಸಾಮ್ಯವಾಗುವುದಿಲ್ಲ. ಅವಳು ರಾಜುವಿಗೆ ಹೇಳಿ ಸೃಷ್ಟಿಸಿದ ಹಾಗಿ ದ್ದಾಳೆ........"

"ಇದೇನು ಡಾಕ್ಟರೆ, ನೀವು ಹೇಳುವುದು? ರತ್ನನಿಗೆ ಹದಿನೇಳು ತುಂಬಿತು; ರಾಜುವಿಗೆ ಹದಿನೆಂಟು ಕೂಡಾ ತುಂಬಿಲ್ಲ. ಅವಳಿಗೂ ಶಾಮುವಿಗೂ ಆದರೆ ಸರಿಹೋಗುತ್ತೆ. ಐದಾರು ವರ್ಷ ವ್ಯತ್ಯಾಸವಿದೆ. ಅವಳನ್ನು ತಂದುಕೊಳ್ಳುವುದೇ ಆದರೆ ನಿಮ್ಮ ಶಾಮುವಿಗೆ ಅಂತ ನನ್ನ ತಮ್ಮ ಯಾವಾಗಲೂ ಹೇಳುತ್ತಿದ್ದ. ನಾನೂ ಒಪ್ಪಿಕೊಂಡಿದ್ದೆ. ನೀವು ಹೀಗೆ ಹೇಳುತ್ತೀರಲ್ಲ?"

"ರತ್ನನಿಗೂ ರಾಜುವಿಗೂ ಮದುವೆ ಮಾಡಬೇಕು ಅಂತ ನನ್ನ ಅಭಿಪ್ರಾಯವಲ್ಲ. ರಾಜುವಿಗೆ ಇನ್ನು ಒಂದೆರಡು ವರ್ಷವಾದರೂ ಹೆಚ್ಚಾ ಗಿದ್ದರೆ ಆ ಯೋಚನೆ ಮಾಡಬಹುದಾಗಿತ್ತು. ಶಾಮುವಿಗೂ ಅವಳಿಗೂ ಕೂಡಿ ಬರುತ್ತೆಯೋ ಇಲ್ಲವೋ ಅಂತ ನನ್ನ ಸಂದೇಹ, ಅಷ್ಟೆ. ಮುಂದೆ ಅವರು ಅನ್ಯೋನ್ಯವಾಗಿರಬೇಕೋ ಇಲ್ಲವೊ?"

"ಏನು ಡಾಕ್ಟರೆ, ನೀವು ಹೇಳೋ ಮಾತು! ನಮ್ಮ ಶಾಮಣ್ಣ ಸ್ವಲ್ಪ ತಂದೆಯನ್ನ ಹೋತುಕೊಂಡಿದ್ದಾನೆ. ಬಣ್ಣ ಕಪ್ಪು, ಸ್ವಲ್ಪ ಕುಳ್ಳು.

ಆದರೆ ಅವನ ಗುಣ ನೋಡಿ, ಯಾವುದರಲ್ಲೂ ಆಕ್ಷೇಪಣೆ ಮಾಡುವ ಹಾಗಿಲ್ಲವೋ? ಹೆತ್ತ ಮಗ ಅಂತ ಬರಿ ರೂಪನ್ನೇ ಮೋಹಿಸುವುದಕ್ಕಾಗುತ್ತೆಯೆ? ರಾಜು ಕೆಟ್ಟ ಗುಣದವನು ಅಂತ ನಾನು ಹೇಳುವುದಿಲ್ಲ. ಆದರೂ ಅವನ ನಡತೆ ನನಗೆ ಸರಿಬೀಳಲಿಲ್ಲ. ಓದಿನ ಮೇಲೆ ಗಮನವೇ ಇಲ್ಲ. ಸದಾ ಸಿನಿಮಾ, ಕ್ರಿಕೆಟ್—ಇದರ ಮಾತೇ. ಬಟ್ಟೆ ಬರೆಯಲ್ಲೇ ನೋಡಿ, ಅವನಿಗೂ ಇವನಿಗೂ ಎಷ್ಟು ವ್ಯತ್ಯಾಸ? ಯಾಕೆ ಹೇಳಿದೆ ಅಂದ್ರೆ, ಗುಣ ಮುಖ್ಯವೇ ಹೊರತು ರೂಪು ಮುಖ್ಯವಲ್ಲ ಅನ್ನೋದಕ್ಕೆ. ನಾನು ಅವರಲ್ಲಿ ಪ್ರೀತಿ ಭಕ್ತಿ ಇಟ್ಟುಕೊಂಡಿರಲಿಲ್ಲವೆ? ರತ್ನ ಶಾಮು ಅನ್ಯೋನ್ಯವಾಗಿರುವುದಿಲ್ಲ ಅಂತ ಯಾಕೆ ಭಾವಿಸಬೇಕು?"

"ಇಷ್ಟರ ಮೇಲೆ ನಿಮ್ಮ ಇಷ್ಟ. ನನಗೆ ತೋರಿದ್ದನ್ನ ನಾನು ಹೇಳಿದೆ. ಆದರೆ ಇಷ್ಟು ಮಾತ್ರ ನೀವು ಖಂಡಿತ ನೋಡಲೇಬೇಕು........"

"ಏನು?"

"ಅವರಿಬ್ಬರ ಇಷ್ಟವನ್ನೂ ಅರಿತುಕೊಂಡು ಮುಂದಿನ ಪ್ರಯತ್ನ ಮಾಡುವುದು ಒಳ್ಳೆಯದು. ಇಬ್ಬರಲ್ಲಿ ಒಬ್ಬರು ಒಲ್ಲೆ ಎಂದರೂ ಬಲವಂತ ಮಾಡಬೇಡಿ. ನಿಮ್ಮ ಕಾಲದ ಹಾಗಲ್ಲ ಈಗಿನ ಕಾಲ. ನಾನೇ ಈಗ ಹಳೆಯ ಕಾಲದವನಾಗಿಬಿಟ್ಟಿದ್ದೇನೆ."

"ನೀವು ಹೇಳುವುದು ಸರಿ ಅನ್ನಿ. ಅವರ ಮನಸ್ಸಿನಲ್ಲಿ ಹೇಗೆ ಹೇಗೆ ಇದೆಯೋ ಅದನ್ನು ದೇವರೇ ಬಲ್ಲ. ಆದರೆ, ನನ್ನ ಇಷ್ಟಕ್ಕೆ ಅವರಿಬ್ಬರೂ ವಿರೋಧವಾಗಿ ನಡೆಯುವುದಿಲ್ಲ ಅನ್ನುವ ಭರವಸೆ ನನಗಿದೆ."

"ಹಾಗಿದ್ದಮೇಲೆ ಸರಿಯೇ ಮತ್ತೆ. ನನಗೂ ಬೇಗ ಲಾಡು ಚಿರೋಟಿ ಊಟ ಹಾಕಿಸಿಬಿಡಿ" ಎಂದು ಡಾಕ್ಟರು ಸುಂದರಮ್ಮನವರ ಆಲೋಚನೆಗೆ ಅರ್ಧ ಅನುಮೋದನೆಯನ್ನು ನೀಡುವ ರೀತಿ ನುಡಿದು, ಮುಗುಳುನಗೆಯೊಡನೆ ಮೇಲಕ್ಕೆದ್ದರು.

"ನಿಮಗೆ ಊಟಕ್ಕೆ ಹೊತ್ತಾಯಿತು ಅಂತ ಕಾಣುತ್ತೆ" ಎಂದು ಸುಂದರಮ್ಮನವರು ಕ್ಷಮೆ ಕೇಳುವ ರೀತಿ ಹೇಳಿ, "ಲೋ, ಕೆಂಚಾ" ಎಂದು ಕೂಗಿದರು. ಕೆಂಚಪ್ಪ ಧಾವಿಸಿ ಬಂದ. "ಆ ಮಾವಿನ ಹಣ್ಣಿನ ತಟ್ಟೆ ತಗೊಂಡು ಬಾರೋ" ಎಂದು ಒಡತಿ ಅಪ್ಪಣೆಯಿತ್ತರು. "ನೀವು ಆ [illegible]

ಯೇಳಿದ್ರಲ್ಲ. ಅವರ ಮೋಟಾರ್ನೊಳಗೆ ಹಿಂದುಗಡೆ ಸೀಟಿನ ವ್ಯಾಗೆ ಮಡಗಿವ್ನಿ", ಎಂದು ಹೇಳಿದ ಕೆಂಚಪ್ಪ. "ಹಾಗಿದ್ದರೆ ಸರಿ" ಎಂದರು ಸುಂದರಮ್ಮನವರು.

"ಇದೇನು, ಮಾವಿನ ಹಣ್ಣಿನ ಸರಬರಾಯಿ?"

"ನಮ್ಮ ಹುಡುಗರು ಪ್ಯಾಸಾದದ್ದಕ್ಕೆ."

"ಇಷ್ಟರಲ್ಲೇ ಮುಗಿಸಿಬಿಡುತ್ತೀರೇನು ?" ನಕ್ಕರು ಡಾಕ್ಟರು.

"ಭಾನುವಾರ ಮಧ್ಯಾಹ್ನ ಏನೋ ಊಟದ ಏರ್ಪಾಡು ಇಟ್ಟು ಕೊಂಡಿದ್ದೇನೆ. ಮತ್ತೆ ಹೇಳಿಕಳಿಸುತ್ತೇನೆ. ದಯವಿಟ್ಟು ಬರಬೇಕು, ಮನೆಯವರನ್ನೂ ಕರೆದುಕೊಂಡು."

"ಅಗತ್ಯವಾಗಿ. ಕಾರ್ಮಿನೇಟಿವ್ ಮಿಕ್ಸ್‌ಚರ್ ಕುಡಿದುಕೊಂಡು ಬರುತ್ತೇನೆ" ಎಂದು ಡಾಕ್ಟರ್ ರಘುರಾಂ ನಗುನಗುತ್ತ ಬೀಳ್ಕೊಂಡರು.

೬

ಡಾಕ್ಟರ್ ರಘುರಾಂ ಹೊರಟುಹೋದ ಮೇಲೆ ಸುಂದರಮ್ಮನವರು ಹಾಗೆಯೇ ಸೋಫಾ ಒರಗಿಕೊಂಡು, ಕಾಲುನೀಡಿಕೊಂಡು, ಕೆಂಚನನ್ನು ಕರೆದು ಶಾಲನ್ನು ಈಸಿಕೊಂಡು ಅದನ್ನು ಕಾಲುಮುಚ್ಚ ಹೊದೆದು ಕೊಂಡು, ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಅನುವಾದರು. ಶಾಮಣ್ಣ — ರತ್ನ ಇವರ ಮದುವೆ, ಡಾಕ್ಟರು ಅವರಿಬ್ಬರಿಗೆ ವರಸಾಮ್ಯವಾಗುವುದಿಲ್ಲ ವೆಂದದ್ದು, ಈಚಿನ ದಿನಗಳಲ್ಲಿ ಅವರಿಬ್ಬರು ಒಬ್ಬರೊಬ್ಬರ ವಿಚಾರದಲ್ಲಿ ನಡೆದುಕೊಳ್ಳುತ್ತಿದ್ದ ರೀತಿ, ಶಾಮಣ್ಣನಲ್ಲಿ ತೋರದೆ ಇದ್ದ ಸಲಿಗೆಯನ್ನು ರಾಜುವಿನಲ್ಲಿ ಅವಳು ತೋರುತ್ತಿದ್ದುದು—ಈ ಎಲ್ಲ ಆಲೋಚನೆಗಳು ಅವರ ಮನಸ್ಸಿನಲ್ಲಿ ಹಾದುಹೋದುವು.

ಅವರು ಹಾಗೆ ಆಲೋಚನೆಯಲ್ಲಿ ಮುಗಿದ್ದಾಗ, ತನ್ನ ಸ್ನೇಹಿತೆಯ ಮನೆಗೆ ಹೋಗಿದ್ದ ರತ್ನ ಹಿಂದಿರುಗಿದಳು.

ಭಾವನೆಯ ಭರದಲ್ಲಿ ಕಣ್ಣು ಮುಚ್ಚಿದ್ದ ಸುಂದರಮ್ಮನವರು

ಸೋದರ ಸೊಸೆಯ ಬರವಿನ ಕಾಲು ಸಪ್ಪಳದಿಂದ ಎಚ್ಚರಗೊಂಡವರಾಗಿ ಕಣ್ಣು ಬಿಟ್ಟರು. ಅವಳ ಕೈಯಲ್ಲಿ ತಾಂಬೂಲ, ಹೂವು, ಮಾವಿನ ಹಣ್ಣು, ಬಾಳೆಯ ಹಣ್ಣು ಇದ್ದುವು. ತೇರ್ಗಡೆಯಾದ ಗೆಳತಿಯೊಬ್ಬಳು ಇವಳಿಗೆ ಕೊಟ್ಟಿರಬೇಕೆಂದು ಅವರು ಸಹಜವಾಗಿಯೇ ಊಹಿಸಿದರು.

"ಬಾರಮ್ಮ ರತ್ನ" ಎಂದು ಸುಂದರಮ್ಮನವರು ಕರೆಯಬೇಕೆಂದಿರುವಷ್ಟರಲ್ಲಿಯೇ, ರತ್ನನೇ ಹೋಗಿ ಅವರ ಮುಂದೆ ನಿಂತಳು; ಕೈಯಲ್ಲಿದ್ದ ಫಲ ತಾಂಬೂಲವನ್ನು ಸೋಫಾದ ಮೇಲೆ ಒಂದು ಕಡೆ ಇರಿಸಿದಳು.

ಸೆರಗಿನ ಕೊನೆಯನ್ನು ಬೆರಳಿಗೆ ಸುತ್ತಿಕೊಳ್ಳುತ್ತ, ಹೆಬ್ಬೆರಳಿನಿಂದ ನೆಲವನ್ನು ಕೆರೆಯುತ್ತ, ಗೋಗರೆಯುವ ದನಿಯಲ್ಲಿ ರತ್ನ ಬಾಯಿ ಬಿಟ್ಟಳು.

"ಅತ್ತೆ....?"

"ಏನು ರತ್ನ?"

"ಇವೊತ್ತು....ನಮ್ಮ ಸ್ನೇಹಿತೆಯರೆಲ್ಲ...."

"ಅದೇನು ಹೇಳು, ಸಂಕೋಚ ಯಾಕೆ...."

"....ನಮ್ಮ ಸ್ನೇಹಿತೆಯರೆಲ್ಲ........ಪಾಸಾಯಿತಲ್ಲ, ಅದಕ್ಕೋಸ್ಕರ, ಸಿನಿಮಾಕ್ಕೆ ಹೋಗಬೇಕು ಅಂತ ಮಾಡಿಕೊಂಡಿದ್ದಾರೆ. ನೀವು ಒಪ್ಪಿ ಕಳಿಸಿಕೊಟ್ಟರೆ....ಹೋಗೋಣ ಅಂತ ಆಸೆ...."

"ಏನು, ಸಿನಿಮಾಕ್ಕೇ, ನೀವು ನೀವೇ !" ಎಂದು ಸ್ವಲ್ಪ ಆಶ್ಚರ್ಯದಿಂದಲೇ ಕೇಳಿದರು, ಸುಂದರಮ್ಮನವರು.

ಹಿಂದೆ ಎಂದೂ ರತ್ನ ಈ ಬಗೆಯ, ಅಥವಾ ಯಾವುದೇ ಬಗೆಯ, ಬೇಡಿಕೆಯನ್ನೂ ಬೇಡಿದವಳಲ್ಲ. ಒಂದು ಸಲವೋ ಎರಡು ಸಲವೋ ಅವರೇ ಶಾಮಣ್ಣ ಮತ್ತು ರಾಜುವಿನೊಂದಿಗೆ ಚಲನಚಿತ್ರಕ್ಕೆ ತಾವಾಗಿ ಕಳಿಸಿಕೊಟ್ಟದ್ದೂ ಉಂಟು. ರತ್ನ ಚಲನಚಿತ್ರವನ್ನು ನೋಡಹೋಗುವುದರಲ್ಲಿಯೇ ಅವರಿಗೆ ಯಾವ ಬಗೆಯ ಆಕ್ಷೇಪಣೆಯೂ ಕಂಡುಬರಲಿಲ್ಲ. ಆದರೆ, ಗಂಡಸರ ಜೊತೆಯಿಲ್ಲದೆ ಹೆಣ್ಣುಮಕ್ಕಳು ತಾವು ತಾವೇ ಚಲನಚಿತ್ರ ಮಂದಿರಕ್ಕೆ ಹೋಗಲಿದ್ದಾರೆಂದು ಅವರು ಊಹಿಸಿ ಆಕ್ಷೇಪದ ಸ್ವರವೆತ್ತಿದರು.

"ಕು ಸು ಮಾ, ಶ್ಯಾಮ ಲಾ, ನಾ ನು—ಮೂರೇ ಜನ, ಅಷ್ಟೇ. ಶಾಮಣ್ಣ, ರಾಜು ಜೊತೆಗೆ ಬರುವುದಕ್ಕೆ ಒಪ್ಪಿಕೊಂಡಿದ್ದಾರೆ. ನಾನು ಒಲ್ಲೆ ಅಂದರೆ, ಅವರಿಗೂ ತಪ್ಪಿಸಿದ ಹಾಗಾಗುತ್ತೆ, ಪಾಪ. ನೀವು ಬೇಡ ಅಂದರೆ ಹೋಗೋದಿಲ್ಲ...."ಎಂದು ರತ್ನ ತಡೆದು, ನುಂಗಿ ನುಂಗಿ, ನುಡಿಗಳನ್ನು ಹೊರಕ್ಕೆ ಬಿಟ್ಟಳು; ಮಕ್ಕಳು ಮುದ್ದುಗರೆಯುವ ಮೋಡಿಯಿತ್ತು ಮಾತುಗಳಲ್ಲಿ.

ಹೆಣ್ಣು ಕೂಸನ್ನು ಹಡೆಯದ ಸುಂದರಮ್ಮನವರಿಗೆ ರತ್ನನ ವಿಷಯದಲ್ಲಿ ಎಂದೂ ಮಗಳ ಮಮತೆ; ಈಗಂತೂ ಸೊಸೆಯಾಗಲಿರುವವಳು; ಸೀರೆಯ 'ಫ್ಯಾಷನ್ನಿ'ನಂತೆ 'ಸಿನಿಮಾ' ನೋಡುವುದೂ ಕೇವಲ 'ಫ್ಯಾಷನ್' ಮಾತ್ರವಾಗದೆ, ಯುವಕ ಯುವತಿಯರಲ್ಲಿ ಕಾಫೀ ಕುಡಿಯುವ ಹಾಗೆ ನಿತ್ಯ ಜೀವನದ ದಿನಚರ್ಯೆಯಲ್ಲಿ ಸೇರಿಹೋಗಿದೆ. ಇದನ್ನು ಸುಂದರಮ್ಮನವರೂ ಕಂಡು ಕೇಳಿ ಬಲ್ಲರು. ರತ್ನನ ಬೇಡಿಕೆ ವಿಚಿತ್ರವಾದುದೇನಲ್ಲ. ಅವರ ಮನಸ್ಸಿನಲ್ಲಿಯೂ ಇಂಥ ಸಂದರ್ಭಗಳ ಸದುಪಯೋಗದ ಆಲೋಚನೆಯೊಂದು ತಟ್ಟನೆ ಮೂಡಿ ಮಾಯವಾಯಿತು: ಎಂದಿನಂತಲ್ಲದೆ ರತ್ನ ಶಾಮಣ್ಣ ಇಬ್ಬರನ್ನೇ ಜೊತೆಮಾಡಿ ಕಳಿಸಿದರೆ, ಅವರಲ್ಲಿ ಹೆಚ್ಚಿನ ಸಲಿಗೆ ಬೆಳಸಿ ಇಬ್ಬರೂ ಮದುವೆಗೆ ಒಪ್ಪುವಂತೆ ಮಾಡಬಹುದಲ್ಲವೆ?

ಸುಂದರಮ್ಮನವರು ತಮ್ಮ ಮನದ ಬಯಕೆಗೆ ನುಡಿಗೊಟ್ಟರು:

"ಅದಕ್ಕೇನು ತಾಯಿ, ಹೋಗಿಬಿಟ್ಟು ಬಾ. ಅಂದರೆ, ಅದನ್ನೇ ಒಂದು ಅಭ್ಯಾಸ ಮಾಡಿಕೊಳ್ಳಬೇಡಿ, ಅಷ್ಟೆ...."

"ಇಲ್ಲ ಅತ್ತೆ...."

"ಸರಿ. ಕುಸುಮಾ ಗಿಸುಮಾ ಅವರೆಲ್ಲಾ ಯಾಕಮ್ಮಾ? ನಿಮ್ಮ ಪಾಡಿಗೆ ನೀವು ಹೋಗಿಬಿಟ್ಟು ಬನ್ನಿ. ನಮ್ಮ ಬಂಡವಾಳ ಅಷ್ಟಷ್ಟೇ ಆದರೂ, ನಾವು ಅನುಕೂಲಸ್ಥರು ಅಂತ ಎಲ್ಲರೂ ತಿಳಿದುಕೊಂಡುಬಿಟ್ಟಿದ್ದಾರೆ. ನಾವು ಅವರಿಗೆ ಟಿಕೆಟ್ಟು ತೆಗೆದುಕೊಳ್ಳದೆಹೋದರೆ ಚೆನ್ನಾಗಿರೋದಿಲ್ಲ........"

"ಅವರವರ ದುಡ್ಡು ಅವರವರು ಹಾಕಿಕೊಳ್ಳುವುದು ಅಂತ ತೀರ್ಮಾನವಾಗಿಹೋಗಿದೆ, ನಮ್ಮ ನಮ್ಮಲ್ಲಿ. ನಾವು ದುಡ್ಡು ಕೊಟ್ಟರೂ ಅವರು ಒಪ್ಪೋದಿಲ್ಲ....."

"ಹ್ಞೂ, ಹೋಗಲಿ ಬಿಡು. ಶಾಮಣ್ಣ ನನ್ನೇ ಜೊತೆಮಾಡಿಕೊಂಡು ಹೋಗಿ. ರಾಜು ಎಲ್ಲಿ ಸಿಕ್ಕುತಾನೆ. ಕ್ರಿಕೆಟ್ಟೋ ಪಕೆಟ್ಟೋ ಎಲ್ಲೋ ಹೋಗಿರುತ್ತಾನೆ."

"ಇಬ್ಬರೂನೂ ಬರೋದು ಅಂತ ಮಾಡಿಕೊಂಡಿದ್ದರು. ಶಾಮಣ್ಣ ನಾನು ಬರೋದಿಲ್ಲ ಅಂತ ಬೆಳಗ್ಗೇನೇ ಹೇಳಿಬಿಟ್ಟ. ಅವನು ಪಬ್ಲಿಕ್ ಲೈಬ್ರರಿಗೆ ಹೋಗಿದ್ದಾನೆ. ಯಾವುದೋ ಹೊಸ ಪುಸ್ತಕ ಬಂದಿದೆಯಂತೆ, ಬೇರೆಯವರು ತಗೊಳ್ಳೋದಕ್ಕೆ ಮುಂಚೆ ತಗೊಂಡುಬಿಡಬೇಕಂತೆ. ಹೊಸ 'ಜರ್ನಲ್ಸ್' (ಪತ್ರಿಕೆಗಳು) ಬೇರೆ ಬಂದಿವೆಯಂತೆ; ಅವನ್ನ ಓದಬೇಕಂತೆ. ಕ್ರಿಕೆಟ್‌ನಿಂದ ಎರಡು ಗಂಟೆ ಹೊತ್ತಿಗೆ ಬರುತೀನಿ ಅಂತ ರಾಜು ಹೇಳಿದ್ದಾನೆ....."

"ಸರಿ, ಯಾರಾದರೇನು? ಅಂತೂ ಅವನೋ ಇವನೋ ಜೊತೆ ಗಿದ್ದರೆ ಸರಿ. ಒಂದು ಒಂದೂವರೆ ಇರಬೇಕು, ಈಗ. ಇನ್ನೇನು ಅವನೂ ಬರುವ ಹೊತ್ತಾಯಿತು........ಹಾಗೇ ಹೋಗಬೇಡಿ. ತಿಂಡಿ ಕಾಫಿ ಮಾಡಿ ಕೊಂಡು ಹೋಗಿ. ಬೇಕಾದರೆ ಫ್ಲಾಸ್ಕಿನಲ್ಲೂ ಕಾಫಿ ತೆಗೆದುಕೊಂಡು ಹೋಗಿ. ನಾನು ಇಲ್ಲೇ ಸ್ವಲ್ಪ ಹೊತ್ತು ಹಾಗೇ ಮಲಗಿಕೊಳ್ಳುತ್ತೇನೆ. ಆ ಸೋಫಾದ ಮೇಲಿದೆಯಲ್ಲ, ಆ ದಿಂಬನ್ನು ಸ್ವಲ್ಪ ಕೊಡು ಇಲ್ಲಿ."

ರತ್ನ ದಿಂಬನ್ನು ತಂದುಕೊಟ್ಟಳು. ಸುಂದರಮ್ಮನವರು ದಿಂಬಿನ ಮೇಲೆ ದಿಂಬನ್ನು ಇಟ್ಟು, ಒರಗಿಕೊಂಡು, ಶಾಲನ್ನು ಸ್ವಲ್ಪ ಮೇಲೆಳೆದು ಕೊಂಡು ಮಲಗಿದರು. ರತ್ನ ಮುಂದುಗಡೆಯ ಬಾಗಿಲನ್ನು ಮುಚ್ಚಿ, ಭಟ್ಟರಿಗೆ ಕಾಫಿ ತಿಂಡಿಯ ವಿಷಯ ಹೇಳಲು ಅಡಿಗೆ ಮನೆಗೆ ಹೋದಳು.

೫

ಕುಸುಮಾ ಶ್ಯಾಮಲಾ ಇಬ್ಬರೂ ರತ್ನನ ನಚ್ಚಿನ ಗೆಳೆಯರು; ಮೂವರೂ ಸಹಪಾಠಿಗಳು; ಈಗ ಮೂವರೂ ಒಟ್ಟಿಗೆ ಎಸ್.ಎಸ್.ಎಲ್.ಸಿ. ಯಲ್ಲಿ ತೇರ್ಗಡೆಯಾಗಿದ್ದರು.

ಕುಸುಮಾ ಶ್ಯಾಮಲಾ ಇಬ್ಬರೂ ಶ್ರೀಮಂತ ಪುತ್ರಿಯರು. ಹಣದ ಹೆಮ್ಮೆ, ರೂಪಿನ ಬಿಂಕ, ಅಲಂಕಾರ ಪ್ರಿಯತೆ, ಯುವಕರೊಡನೆ ಸರಿ ಸಮಾನಸ್ಕಂಧತೆಯಿಂದ ಓಡಾಡಿ ಅವರೊಂದಿಗೆ ಸರಸದಲ್ಲಿ ಬೆರೆಯ ಬೇಕೆಂಬ ಚಪಲ—ಇವೆಲ್ಲ ಕೂಡಿ, ಸೊಗಸುಗಾತಿಯರ ಹಾದಿ ಹಿಡಿ ದಿದ್ದರು ಅವರು. ಅಪ್ಪಕವಾದ ತುದಿ ಬಿಚ್ಚಿದ ಜಡೆ, ಮುಖಕ್ಕೆ 'ಸ್ನೋ ಪೌಡರ್,' ಕಂಡೂ ಕಾಣದ ಕುಂಕುಮದ ಚುಕ್ಕಿ, ಮೊಳೆಯುವ ಯೌವನ ವನ್ನು ಬಹಿರಂಗಪಡಿಸಲು ನೆರವಾಗುವ ಪೊರೆನವಿರ ಸೀರೆಕುಪ್ಪಸ, ಒಂದು ಕೈಗೆ ಬಳೆ ಒಂದು ಕೈಗೆ ಅದೇತಾನೆ ಕೊಂಡ ಕಿರು ಕೈಗಡಿಯಾರ, ಕಾಲಿಗೆ ಹೂವೆತ್ತಿದ ಮಖಮಲ್ ಅಲಂಕಾರದ ಚಪ್ಪಲಿ—ಇವು ಅವರ ರಸಿಕ ಶ್ರೀಮಂತ ಕುಲವನ್ನು ಸಾರಿ ಹೇಳುತ್ತಿದ್ದುವು.

ಇವರಿಬ್ಬರ ಪಕ್ಕದಲ್ಲಿ, ರತ್ನ ಕುಂದಣ ಕಟ್ಟಿಲ್ಲದ ರತ್ನ. ಎಂದರೆ, ಅವಳಿಗೆ ಉಡಿಗೆ ತೊಡಿಗೆಯ ಮೆರುಗೇ ಇರಲಿಲ್ಲವೆಂದು ಅರ್ಥವಲ್ಲ. ತಬ್ಬಲಿ ಹೆಣ್ಣಾದರೂ ಅವಳು ತನ್ನ ಸೋದರತ್ತೆಯ ಮನೆಯಲ್ಲಿ ಯಾವ ಬಗೆಯ ಸುಖಭೋಗ ಭಾಗ್ಯಗಳಿಂದಲೂ ವಂಚಿತಳಾಗಿರಲಿಲ್ಲ. ಚೆನ್ನ ಕೇಶವಯ್ಯನವರು ಕೇವಲ ಸಾಮಾನ್ಯ ಸ್ಥಿತಿಯಲ್ಲಿದ್ದವರು ಸಿರಿವಂತರ ಪದವಿಗೇರಿದ್ದರಿಂದ, ಕೆಲವು ಕಾಲ ಬಡತನದಲ್ಲಿಯೂ ತೊಳಲಿದ್ದರಿಂದ, ಹಣದ ಬೆಲೆಯನ್ನು ಬಲ್ಲವರಾಗಿದ್ದರು. ಚೆನ್ನಾಗಿ ಉಂಡು ಉಟ್ಟು ಸುಖಪಡುವ ಮಟ್ಟಿಗೆ ಸಿರಿಯನ್ನು ಬಳಸಿಕೊಳ್ಳಹೊರಟರೇ ಹೊರತು, ವಸಂತ ವೈಭವದ ಸೋಗೆ ನವಿಲು ಜಾಗರವಾಡುವಂತೆ ತಮ್ಮ ಸಿರಿಯ

ಮೆರೆತಕ್ಕೆ ಮನ ಸೋತವರಲ್ಲ. ಇಂಥವರ ಕೈ ಹಿಡಿದ ಸುಂದರಮ್ಮನವರಿಗೆ, ಬಹು ಕಾಲ ಪಾತಿವ್ರತ್ಯ ಧರ್ಮದಲ್ಲಿ ಸೊರಗಿದ ಅವರಿಗೆ, ಬಡತನಕ್ಕೆ ಬೇಗುದಿಗೊಳ್ಳದೆ ಬಿಗುಮಾನದ ಬದುಕನ್ನು ನಡಸಿದ ಸಂಪ್ರದಾಯ ನಿಷ್ಠೆಯುಳ್ಳ ತವರುಮನೆಯ ನೆನಪುಳ್ಳ ಸುಂದರಮ್ಮನವರಿಗೆ, ನವನಾಗರಿ ಕತೆಯ ನಲಿದಾಟಕ್ಕೆ ಮನಸ್ಸು ಪರಿವರ್ತನೆಗೊಳ್ಳಲಿಲ್ಲ. ರೇಷ್ಮೆಯ ಸೀರೆಯನ್ನೇ ಉಟ್ಟರೂ ಅದು ಹಳೆಯ ಕಾಲದ ಧರ್ಮಾವರದ ಸೀರೆ; ಕುಂಕುಮಕ್ಕೆ ಕಾರ್ಪಣ್ಯವಿಲ್ಲ, ಅರಿಶಿನಕ್ಕೆ ಬರವಿಲ್ಲ; ಅಂಗಳದ ತುಂಬ ಬೆಳೆದ ಹೂವು ಮಂಗಳದ ಕುರುಹಾಗಿ ಅವರ ಮುಡಿಗೇರುತ್ತಿತ್ತು.— ದೇವರ ಪ್ರಸಾದವೆನ್ನಿಸಿ. ವಿಧಿ ಮಾತ್ರ ಮುನಿದು ಅವರಿಗೆ ಅಮಂಗಳದ ಹೆಸರಿಟ್ಟು ಹೋಯಿತು. ಒಂದಂಶದಲ್ಲಿ ಮಾತ್ರ ಅವರು ಸಂಪ್ರದಾಯ ವನ್ನು ಮುರಿದರು—ಪತಿ ಕಣ್ಣು ಮುಚ್ಚಿದ ಮೇಲೆ, 'ಮಡಿ' ಹಿಡಿಯಲಿಲ್ಲ ಅಷ್ಟೆ. ಇಂಥ ತಾಯಿಯ ಪೋಷಣೆಯಲ್ಲಿ ಬೆಳೆದ ರತ್ನನಿಗೆ ಆಧುನಿಕ ಯುವತಿಯ ಭ್ರಾಮಕ ಅಲಂಕಾರ ಶೈಲಿಯ ಪಾಠ ಹೇಗೆ ಆಗಬೇಕು?

ಸುಂದರಮ್ಮನವರು ತಾವು ರೇಷ್ಮೆ ಸೀರೆ ಉಟ್ಟು, ಮಗಳಾಗಿ ಮುಂದಿನ ಸೊಸೆಯಾಗಿ ಮಾಡಿಕೊಂಡ ರತ್ನನಿಗೆ ನೂಲಿನ ಸೀರೆ ಉಡಿಸು ತ್ತಿರಲಿಲ್ಲ. ಮನೆಯೊಳಗೆ ಉಡಲು ನೂಲಿನ ಚೀಟಿಯಾದರೂ, ಹೊರಗೆ ಉಡಲು ಕಾಲಕ್ಕೆ ತಕ್ಕಂತಹ ರೇಷ್ಮೆಯ ಸೀರೆಗಳನ್ನೇ ತೆಗೆದುಕೊಟ್ಟಿದ್ದರು. ತಾವೇ ಅವಳಿಗೆ ಬಾಚಿ, ಹೆರಳು ಹಾಕಿ, ಹೂ ಮುಡಿಸುವರು. "ಮುತ್ತೈದೆ ಕುಂಕುಮ ಮೂರು ಮೈಲಿಗಾಚೆಗೆ ಕಾಣಬೇಕಿಲ್ಲದಿದ್ದರೂ ಮೂರು ಮಾರಿಗಾದರೂ ಕಾಣಬೇಕಮ್ಮ" ಎಂದು ಅವರು ರತ್ನನಿಗೆ ಒಮ್ಮೆ ಹೇಳಿದ ಉಪದೇಶ. "ಸ್ವರ್ಣಗೌರಿಯ ಹಾಗೆ ಕಾಣುತ್ತೀಯೆ, ಅರಿಸಿನ ಹಚ್ಚಿಕೊಳ್ಳಬಾರದೆ?" ಎಂದು ಅವರು ಸೋದರ ಸೊಸೆಗೆ ನಾಜೂಕಾಗಿ ಅರಿಶಿನ ಹಚ್ಚುವುದನ್ನು ಕಲಿಸಿ, ಅವಳ ಸಹಜವಾದ ಹೊಂಬಣ್ಣಕ್ಕೆ ಹೊಗರೇರುವಂತೆ ಮಾಡಿದ್ದರು. ಆದರೂ, ಕೆಲವಂಶಗಳಲ್ಲಿ ಈಗಿನ ಕಾಲದ ಯುವತಿಯರ ಸಾರ್ವತ್ರಿಕ ಶೈಲಿಯ ಅನುಸರಣೆಗೂ ಅವಕಾಶ ಕೊಟ್ಟಿದ್ದರು: ಸೀರೆ ಕುಪ್ಪಸಗಳನ್ನು ಜೊತೆಗಾತಿಯರಂತೆಯೇ ಉಟ್ಟು ತೊಡಲು ಅವಕಾಶ ಕೊಟ್ಟಿದ್ದರು.

ಇಂತು, ರತ್ನನನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಲು, ರತ್ನಕ್ಕೆ ಸಾಣೆ ಹಿಡಿದಂತೆ, ತೋಟಗಾರನು ತಾನು ಬಯಸಿದ ರೀತಿ ಬಳ್ಳಿಯನ್ನು ತಿರುಗಿಸಿಕೊಳ್ಳುವಂತೆ, ತಮ್ಮ ಕಲ್ಪನೆಗೆ ತಕ್ಕಂತೆ ಅವಳನ್ನು ಬಗೆಬಗೆಯಲ್ಲಿ ತಿದ್ದಿಕೊಳ್ಳುತ್ತಿದ್ದರು. 'ಮನೆಯ ಸೊಸೆ' ಎಂಬ ಅಂಶ ಮಾತ್ರ ಈವರೆಗೂ ಅವರ ಮನದ ಬಯಕೆಯಾಗಿತ್ತೆ ಹೊರತು, ನಾಲಗೆಯ ನುಡಿಯಾಗಿ ಹೊಮ್ಮಿರಲಿಲ್ಲ. ಶಾಮಣ್ಣನಿಗಾಗಲಿ ರಾಜುವಿಗಾಗಲಿ ತಮ್ಮ 'ತಾಯ ಬಯಕೆ' ಬಹಿರಂಗವಾಗಿ ಸ್ಪಷ್ಟವಾಗಿರಲಿಲ್ಲ. ಪ್ರಾಪ್ತವಯಸ್ಕನಾದ ಶಾಮಣ್ಣನ ಅಂತರ್ಮುಖಿಯಾದ ಮನಸ್ಸು ಸದಾ ಪುಸ್ತಕ ಪ್ರಪಂಚ ಪ್ರವಾಸಿಯಾಗಿ, ತನ್ನ ಹಾದಿಯ ಪಕ್ಕದಲ್ಲಿ ಒಂದು ಹೂ ಅರಳಿ ಬಳಿಗೆ ಕರೆಯುತ್ತಿದೆ ಎಂಬುದನ್ನು ಗಮನಿಸಿಯೇ ಇರಲಿಲ್ಲ. ಓದಿನಲ್ಲಿ ಮುಳುಗದೆ ಯಾವಾಗಲೂ ಕ್ರೀಡಾಸಕ್ತನಾದ, ಸಿನಿಮಾ ಪ್ರಪಂಚದ ಉನ್ಮಾದಕ ಸೌಂದರ್ಯ ಮಧುವನ್ನು ಹೀರಿ ಅದನ್ನು ವಾಸ್ತವ ಪ್ರಪಂಚದಲ್ಲಿಯೂ ಅನುಭೋಗಿಸಬೇಕೆಂಬ ಬಹಿರ್ಮುಖಿಯಾದ ರಾಜುವಿನ ಮನಸ್ಸು, ಕಂಡ ಹೂವಿಗೆಲ್ಲ ಎರಗುವ ಮಧುಕರ ವೃತ್ತಿಯನ್ನು ಅನುಸರಿಸಲು ಹವಣಿಸು ತ್ತಿತ್ತು.

ಕುಸುಮಾ, ಶ್ಯಾಮಲಾ, ರತ್ನ—ಈ ಮೂವರು ಕನ್ಯಾಮಣಿಗ ಳೊಂದಿಗೆ ಮೊತ್ತಮೊದಲು ಚಲನಚಿತ್ರ ಮಂದಿರ ಪ್ರವೇಶ ಮಾಡಿದ ರಾಜಗೋಪಾಲ್ ತನ್ನ ಭವಿಷ್ಯದ ಭೋಗಭಾಗ್ಯದ ಬಾಗಿಲು ತೆರೆಯಿತೆಂದೇ ಭಾವಿಸಿದನು.

೬

ಸುಂದರಮ್ಮನವರು ಗೊತ್ತುಮಾಡಿಕೊಂಡಿದ್ದಂತೆ, ಮುಂದೆ ಬಂದ ಭಾನುವಾರದಂದು, ಮನೆಯ ಮಕ್ಕಳು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ ಸಂತೋಷಾರ್ಥವಾಗಿ ಒಂದು ಸಣ್ಣ ಭೋಜನಕೂಟವನ್ನು ಏರ್ಪಡಿಸಿದ್ದರು. ಅದಕ್ಕೆ, ಡಾಕ್ಟರ ಮನೆಯವರು, ಶಾಮಣ್ಣ ಮತ್ತು ರಾಜುವಿನ ಮೂವರು ನಾಲ್ವರು ಆಪ್ತ ಮಿತ್ರರು, ಕುಸುಮ ಶ್ಯಾಮಲಾ—ಇವರು ಆಹ್ವಾನಿತ ರಾಗಿದ್ದ ಅತಿಥಿಗಳು.

ಸುಂದರಮ್ಮನವರ ದೇಹಪ್ರಕೃತಿ ಬಹು ಸೂಕ್ಷ್ಮ. ಮಕ್ಕಳೆಲ್ಲರೂ ತೇರ್ಗಡೆಯಾದ ಸಂತೋಷ ಒಂದು ಕಡೆ; ಅವರ ಭವಿಷ್ಯದ ಆಲೋಚನೆ ಮತ್ತೊಂದು ಕಡೆ; ಶಾಮಣ್ಣ–ರತ್ನ ಇವರ ಮದುವೆಯ ವಿಚಾರ ಮಗುದೊಂದು ಕಡೆ. ಈ ಭಾವನೆಗಳ ತುಮುಲ ಹಿತಶತ್ರುವಾಗಿ ಪರಿಣಮಿಸಿ, ಮೆದುಳಿನ ವಿಶ್ರಾಂತಿಗೆ ಭಂಗತಂದು, ರಕ್ತದ ಒತ್ತಡವನ್ನು ಹೆಚ್ಚಿಸಿ, ಸಂಧಿವಾತದ ದೆಸೆಯಿಂದ ಮೊದಲೇ ದುರ್ಬಲಗೊಂಡಿದ್ದ ಅವರ ಹೃದಯದ ಮೇಲೆ ತಾತ್ಕಾಲಿಕವಾದರೂ ತೀವ್ರವಾದ ಪರಿಣಾಮವನ್ನುಂಟು ಮಾಡಿತ್ತು. ಡಾಕ್ಟರು ಬಂದು ಹೋದ ಮಾರನೆಯ ದಿನವೇ ಸುಂದರಮ್ಮ ನವರಿಗೆ ತಲೆತಿರುಗಿ, ಅವರು ಪ್ರಜ್ಞೆತಪ್ಪಿ ಕೆಳಕ್ಕೆ ಬಿದ್ದುಬಿಟ್ಟರು. ರತ್ನ ಅಲ್ಲದೆ ಮನೆಯಲ್ಲಿ ಯಾರೂ ಇರಲಿಲ್ಲ. ಅವಳು ತುಂಬಾ ಗಾಬರಿಗೊಂಡು, ಡಾಕ್ಟರ ಷಾಪಿಗೆ ಕೆಂಚಪ್ಪನನ್ನು ಅಟ್ಟಿದಳು. ಕೆಂಚಪ್ಪ ಓಡಿಹೋಗಿ, ಡಾಕ್ಟರನ್ನು ಮುತ್ತಿದ್ದ ರೋಗಿಗಳ ಸುತ್ತುಗೋಡೆಯನ್ನು ಭೇದಿಸಿಕೊಂಡು ಅವರ ಎದುರಿಗೆ ನಿಂತು, "ಡಾಕ್ಟರೇ !" ಎಂದ ಕೂಡಲೇ, ಅವನ ಧ್ವನಿಯೇ ಸಂದರ್ಭವನ್ನು ಸೂಚಿಸಿತು. "ಏನೋ ಸಮಾಚಾರ, ಮನೆಯಲ್ಲಿ ಎಲ್ಲ ನೆಟ್ಟಗೆ ತಾನೆ?" ಎಂದು ಅವರು ಪ್ರಶ್ನಿಸಿದಾಗ, "ಇಲ್ಲ ಬುದ್ಧಿ, ಅಮ್ಮಾ ವರು ಇದ್ದಕ್ಕಿದ್ದಾಗೆ ಸಕತ್ತು ಕಾಯಿಲೆಯಾಗಿ ಮಲಗಿಬಿಟ್ಟವರೆ. ನಿಮ್ಮನ್ನು

ಒಂದಿಗೇನೆ ಕರಕೊಂಡು ಬಾ ಅಂತ ಚಿಕ್ಕವ್ವಾವ್ರು ಹೇಳಿ ಕಳಿಸವರೆ" ಎಂದು ಕೆಂಚಪ್ಪ ತಿಳಿಸಿದನು. ಸಂದರ್ಭವೇನೆಂದು ಕೆಂಚಪ್ಪ ವಿವರಿಸದಿದ್ದರೂ, ತಮ್ಮ ನಿತ್ಯರೋಗಿಯ ರೋಗಗತಿಯನ್ನು ಬಲ್ಲ ವೈದ್ಯರು ಅದು ಏನೆಂಬುದನ್ನು ಸುಲಭವಾಗಿ ಊಹಿಸಿದರು. ಬಳಸಿ ನಿಂತಿದ್ದ ರೋಗಿಗಳಿಗೆ ಐದು ನಿಮಿಷದಲ್ಲಿ ಬರುವುದಾಗಿ ಹೇಳಿ, ತಮ್ಮ ಔಷಧಿಯ ಪೆಟ್ಟಿಗೆಯನ್ನೂ ತೆಗೆದುಕೊಂಡು, ಕೆಂಚಪ್ಪನೊಂದಿಗೆ ಕಾರು ಹತ್ತಿದರು.

ಡಾ|| ರಘುರಾಂ ಸುಂದರಮ್ಮನವರ ಮನೆ ತಲಪುವ ವೇಳೆಗೆ ಅವರು ಚೇತರಿಸಿಕೊಂಡು, ರತ್ನನ ಸಹಾಯದಿಂದ ತಮ್ಮ ಮಲಗುವ ಕೋಣೆಗೆ ಹೋಗಿ, ಮಂಚದ ಮೇಲೆ ಮಲಗಿದ್ದರು. ಡಾಕ್ಟರು ಬಂದಾಗ ಕುಳಿತುಕೊಳ್ಳಲು ಮಂಚದ ಪಕ್ಕದಲ್ಲಿ ಒಂದು ಕುರ್ಚಿ ಸಿದ್ಧವಾಗಿತ್ತು.

ಡಾಕ್ಟರು ಬಂದು ಸುಂದರಮ್ಮನವರನ್ನು ತಮ್ಮ ಎಂದಿನ ಕ್ರಮದಂತೆ ವಿವರವಾಗಿ ಪರೀಕ್ಷೆ ಮಾಡಿದರು. ಸ್ಟೆತೋಸ್ಕೋಪಿನಿಂದ ಹೃದಯದ ಬಡಿತದ ತೀವ್ರಗತಿಯು ಅರಿವಾಯಿತು; ರಕ್ತದ ಒತ್ತಡ ಪರೀಕ್ಷಿಸುವ ಯಂತ್ರ ಸಲಕರಣೆಯಿಂದ ರಕ್ತದ ಒತ್ತಡ ಹೆಚ್ಚಿರುವುದಾಗಿ ಕಂಡು ಬಂದಿತು; ಎದೆಯಂತೂ ಕಮ್ಮಾರನ ತಿದಿಯಂತೆ ಮೇಲಕ್ಕೂ ಕೆಳಕ್ಕೂ ಹೊಯ್ದಾಡುತ್ತಿತ್ತು. ಸುಂದರಮ್ಮನವರ ಮಾನಸಿಕ ಪರಿಸ್ಥಿತಿ ಏರುಪೇರಾದಾಗಲೆಲ್ಲಾ ಇತ್ತೀಚೆಗೆ ಈ ರೋಗ ಲಕ್ಷಣಗಳು ಕಾಣಿಸಿಕೊಳ್ಳುತ್ತಿದ್ದವು. ಈ ಮರ್ಮವನ್ನು ಅರಿತ ರಘುರಾಂ ಅದನ್ನು ಸುಂದರಮ್ಮನವರಿಗೆ ಎಷ್ಟೋ ಬಾರಿ ವಿವರಿಸಿ ಹೇಳಿ, "ನನ್ನ ಔಷಧಿ ನೆಪ ಮಾತ್ರಕ್ಕೆ. ನಿಮ್ಮ ಕ್ಷೇಮ ನಿಮ್ಮ ಕೈಯಲ್ಲೇ ಇದೆ. ಅನಾವಶ್ಯಕವಾಗಿ ಮನಸ್ಸಿಗೆ ಏನನ್ನೂ ಹಚ್ಚಿಕೊಳ್ಳಬೇಡಿ. ನಿಮ್ಮ 'ನರ್ವಸ್ ಸಿಸ್ಟಂ' (ನರಮಂಡಲ) ಜರ್ಜರಿತವಾಗಿ ಹೋಗಿದೆ. ಇದಕ್ಕೆ ಸಂಪೂರ್ಣ ವಿಶ್ರಾಂತಿಯೇ ಪರಮೌಷಧ" ಎಂದು ಎಚ್ಚರಿಕೆ ಕೊಡುತ್ತಲೇ ಇದ್ದರು. ಮರುಕೊಳಿಸಿದ ಎಂದೂ ಎಂದಿನ ರೋಗಕ್ಕೆ ಎಂದೂ ಎಂದಿನ ಚಿಕಿತ್ಸೆಯನ್ನೇ ಡಾಕ್ಟರು ಈ ಸಲವೂ ಕೈಕೊಂಡರು; ಸಂಪೂರ್ಣ ವಿಶ್ರಾಂತಿಯನ್ನು ವಿಧಿಸಿದರು; ಹೃದಯವನ್ನು ಬಲಗೊಳಿಸುವ ಔಷಧವನ್ನೂ ರಕ್ತದ ಒತ್ತಡವನ್ನು ಕಡಮೆ ಮಾಡುವ ಮಾತ್ರೆಗಳನ್ನೂ ಎಂದಿನಂತೆ ಸೇವಿಸಬೇಕೆಂದು ಹೇಳಿ, ಮಾರನೆಯ ದಿನದಿಂದ ಒಂದು

'ಕೋರ್ಸ್' (ಮಂಡಲ) 'ಇಂಜೆಕ್ಷನ್' ಕೊಡುವುದಾಗಿ ತಿಳಿಸಿದರು. ಆಹಾರವನ್ನು ಅರ್ಧಕ್ಕೆ ಇಳಿಸಿದರು. ಹೆಚ್ಚು ಮಾತನಾಡಬೇಡಿ ಎಂದು ಹೇಳಿ, ತಾವೇ ಮಾತನಾಡತೊಡಗಿದರು :

"ನೀವು ಮಕ್ಕಳ ಭವಿಷ್ಯದ ವಿಚಾರ ತುಂಬ ಮನಸ್ಸಿಗೆ ಹಚ್ಚಿಕೊಂಡಿರುವ ಹಾಗೆ ಕಾಣುತ್ತೆ. ಅವರು ಮುಂದಕ್ಕೆ ಬರುತ್ತಾರೆ. ನೀವು ಯೋಚನೆ ಮಾಡಬೇಡಿ. ಶಾಮಣ್ಣನಂತೂ ತುಂಬಾ ಮೇಧಾವಿ. ಅವನ ವಿಚಾರದಲ್ಲಿ ಯೋಚನೆಗೆ ಕಾರಣವೇ ಇಲ್ಲ, ರಾಜುವೂ ಬುದ್ಧಿವಂತನೇ. ಏನೋ ಹುಡುಗತನ, ಸ್ವಲ್ಪ ಷೋಕಿ ಕಲಿತಿದ್ದಾನೆ ಅಷ್ಟೆ. ಕೈಲಿ ಕಾಸಿದ್ದು, ಬೆಂಗಳೂರಿನಲ್ಲಿ ಷೋಕಿ ಮಾಡದ ತರುಣ ಯಾರು? ಹೆಜ್ಜೆಗೊಂದು ಹೋಟಲು, ಮಾರಿಗೊಂದು ಸಿನಿಮಾ ಮಂದಿರ ಹುಟ್ಟಲು ಅವಕಾಶ ಕೊಟ್ಟು ನಮ್ಮ ಹುಡುಗರು ಕೆಡುತ್ತಾರೆ ಅಂತ ಅವರನ್ನು ನಿಂದಿಸಿದರೆ, ಅದು ಎಲ್ಲಿಯ ನ್ಯಾಯ? ಅಜೀರ್ಣವಾದ ಮೇಲೆ ಅವರೇ ಪಥ್ಯ ಮಾಡುವುದನ್ನು ಕಲಿಯುತ್ತಾರೆ. ನೀವೇನೂ ಯೋಚನೆ ಮಾಡಬೇಡಿ. ಮುಖ್ಯ, ರಾಜು ತಲೆಗೆ ಅಂಟದ ಮ್ಯಾಥಿಮ್ಯಾಟಿಕ್ಸ್, ಸೈನ್ಸ್ ಆಪ್ಷನಲ್ಸ್ ತೆಗೆದುಕೊಳ್ಳಬಾರದಿತ್ತು. ಹೋಗಲಿ, ಅಂತೂ ಪ್ಯಾಸು ಮಾಡಿದನಲ್ಲ ಈ ವರ್ಷ. ಅವನಿಗೆ ಸಿ.ಬಿ.ಜಡ್. ಕೊಡಿಸಿ, ಇಂಟರ್ ಪ್ಯಾಸ್ ಮಾಡಿಬಿಟ್ಟರೆ, ಆ ಮೇಲೆ ಮೆಡಿಕಲ್ ಸ್ಕೂಲಿಗೋ, ಮೆಡಿಕಲ್ ಕಾಲೇಜಿಗೋ ಸೇರಿಸಿಬಿಟ್ಟರಾಯಿತು. ಇದೆಲ್ಲಾ ಒಂದು ಯೋಚನೆ ಮಾಡತಕ್ಕ ವಿಷಯವೇ?" ಎಂದು ಡಾಕ್ಟರು ಸುಂದರಮ್ಮನವರ ಮನಸ್ಸಮಾಧಾನವಾಗುವ ರೀತಿಯಲ್ಲಿ, ಕೃತಕವೆನಿಸಿದರೂ ವೈದ್ಯ ವೃತ್ತಿಗೆ ಅನಿವಾರ್ಯವಾದ ಸುಪ್ರಸನ್ನತೆಯ ಮೊಗವಾಡವನ್ನು ಧರಿಸಿ, ತಮ್ಮ ನಿಶ್ಚಿತಾಭಿಪ್ರಾಯವನ್ನು ಮುಂದಿಟ್ಟರು.

ಸುಂದರಮ್ಮನವರ ಉಸಿರಾಟ ಉದ್ವೇಗದ ಉರುಬನ್ನು ತಪ್ಪಿಸಿಕೊಂಡು ಕ್ರಮ ಕ್ರಮವಾಗಿ ನಿಧಾನಗೊಳ್ಳುತ್ತಿತ್ತು. ಮಾತನಾಡಬೇಕೆಂಬ ಇಚ್ಛೆಯನ್ನು ಕೆಲಹೊತ್ತು ತಡೆಹಿಡಿದು, ಕಡೆಗೆ ಎರಡೇ ಮಾತಾಡಿದರು:

"ಶಾಮಣ್ಣ–ರತ್ನನ್ನ ಮದುವೆ ಆಗುವ ಹಾಗೆ ನೀವು ಒಪ್ಪಿಸಬೇಕು. ಅದೊಂದಾದರೆ ನನಗೆ ನಿಶ್ಚಿಂತೆ........"

ರತ್ನನನ್ನು ಮದುವೆಯಾಗಲು ಶಾಮಣ್ಣ ಒಪ್ಪಲಾರ, ಒಪ್ಪಿದರೂ

ಕೂಡಲೇ ಮದುವೆಯಾಗಲು ಒಪ್ಪಲಾರ ಎಂಬ ಧ್ವನಿಯಿತ್ತು, ಸುಂದರಮ್ಮ ನವರ ಮಾತುಗಳಲ್ಲಿ. ಈ ವಿಚಾರದಲ್ಲಿ ತಮ್ಮ ರಾಯಭಾರ ಅನಿವಾರ್ಯ ಎಂಬುದನ್ನು ಮುಂಗಂಡ ಡಾಕ್ಟರು, ರೋಗಿಯನ್ನು ಬಳಲಿಸಲು ಇಷ್ಟವಿಲ್ಲ ದಿದ್ದರೂ ಒಂದೆರಡು ಪ್ರಶ್ನೆಗಳನ್ನು ಹಾಕಬೇಕಾಯಿತು. ಸಂಗ್ರಹವಾದ ಸ್ಪಷ್ಟವಾದ ನೇರವಾದ ಒಂದೆರಡು ಮಾತಿನ ಉತ್ತರ ಬರುವ ರೀತಿಯಲ್ಲಿ ರಘುರಾಂ ತಮ್ಮ ಪ್ರಶ್ನೆಗಳನ್ನು ರೂಪಿಸಿ, ವೈದ್ಯವೃತ್ತಿಗಿಂತ ಹೆಚ್ಚಾಗಿ ವಕೀಲ ವೃತ್ತಿಯ ಮಾತುಗಾರಿಕೆಯನ್ನು ಉಪಯೋಗಿಸಿದರು. ರೋಗಿ ಯನ್ನು ದಣಿಸದೆ ಅವಶ್ಯವಾದ ವಿಷಯ ಸಂಗ್ರಹ ಮಾಡಬೇಕಾಗಿತ್ತು ಅವರು; ಸುಂದರಮ್ಮನವರ ಸದ್ಯದ ಸ್ಥಿತಿಯಲ್ಲಿ ತಾವು ಅವರಿಗೆ ಕೂಡಲೆ ನೆರವಾಗಬೇಕಾಗಿತ್ತು. ವಿಷಯವು ನಿರ್ಧಾರವಾಗದಿದ್ದರೆ, ಅವರ ದೇಹಸ್ಥಿತಿ ಇನ್ನೂ ಹದಗೆಡಬಹುದೆಂದು ಅವರು ಹೆದರಿದರು.

"ಶಾಮಣ್ಣನಿಗೆ ರತ್ನನ್ನ ಕೊಟ್ಟು ಮದುವೆ ಮಾಡಬೇಕು ಅನ್ನುವ ವಿಚಾರವನ್ನ ಅವರ ಮುಂದೆ ನೀವು ಎಂದೂ ಸ್ಪಷ್ಟವಾಗಿ ಆಡಿಲ್ಲ, ಅಲ್ಲವೆ ?"

"ಇಲ್ಲ."

"ಶಾಮಣ್ಣನಿಗೆ ಈಗ ಹೆಣ್ಣು ಕೊಡಬೇಕು ಅಂತ ಯಾರೂ ಬಂದಿಲ್ಲ ತಾನೆ ?"

"ನಿಮಗೆ ಹೇಳುವುದು ಮರೆತು ಹೋಗಿತ್ತು........"

ಸುಂದರಮ್ಮನವರ ಉತ್ತರ ದೀರ್ಘವಾಯಿತು ; ಇದನ್ನು ಡಾಕ್ಟರ್ ನಿರೀಕ್ಷಿಸಿರಲಿಲ್ಲ. ಉತ್ತರವನ್ನೂ ತಮ್ಮ ಮುಂದಿನ ಪ್ರಶ್ನೆಗಳಲ್ಲಿ ತಾವೇ ಅಳವಡಿಸಿಕೊಂಡು, ನಡುವೆ ಬಾಯಿ ಹಾಕಿದರು.

"ಪರವಾಯಿಲ್ಲ. ಈಚೆಗೆ ಒಬ್ಬರು ಹೆಣ್ಣು ಕೊಡಲು ಬಂದಿದ್ದರು. ದೊಡ್ಡ ಮನುಷ್ಯರು, ಸರ್ಕಾರದಲ್ಲಿ ಆಫೀಸುಗಿರಿ ಮಾಡುವವರು ಅಂತ ಕಾಣುತ್ತೆ. ಅಲ್ಲವೆ ?"

"ಹೌದು."

"ಹುಡುಗಿ ಇಂಟರ್‌ಮೀಡಿಯಟ್ ಪ್ಯಾಸು ಮಾಡಿರಬೇಕೂಂತ ಕಾಣುತ್ತೆ. ಹೌದೋ ?"

"ಹ್ಞೂ."

"ಹುಡುಗಿಯನ್ನ ಜೊತೆಯಲ್ಲಿ ಕರೆದುಕೊಂಡು ಬಂದಿದ್ದರು ಅಂತ ಕಾಣುತ್ತೆ."

"ಇಲ್ಲ."

"ಸರಿ. ಹಾಗಾದರೆ, ರತ್ನನ್ನ ಕಂಡು ನಿಮ್ಮ ಹುಡುಗಿಗಿಂತಲೂ ಚೆನ್ನಾಗಿದ್ದಾಳೆ ನಮ್ಮ ಕನ್ಯಾರತ್ನ ಎಂದು ಅವರು ಹೇಳಿರಬೇಕು."

ಉತ್ತರ ರೂಪವಾಗಿ ಮೃದುಹಾಸವೊಂದು ಸುಂದರಮ್ಮನವರ ಮುಖವನ್ನು ಬೆಳಗಿತು. ಡಾಕ್ಟರ ಊಹಾಶಕ್ತಿಯನ್ನು ಅವರು ಮೆಚ್ಚಿ ಕೊಂಡಿದ್ದರು.

"ಅವರು ಮಗಳಿಗೆ ಸಂಗೀತಪಾಠ ಮಾಡಿಸಿದ್ದಾರೆ ಅಂತ ಕಾಣುತ್ತೆ. ಅಲ್ಲವೆ?"

"ಹೌದು."

"ಯಜಮಾನರ ಹಾಗೇನೇ ನಿಮ್ಮ ಮಕ್ಕಳಿಗೂ ಸಂಗೀತದ ಹುಚ್ಚು. ರಾಜುವಿಗೆ ಫಿಲ್ಮ್ ಹಿಟ್ಸ್, ಶಾಮಣ್ಣನಿಗೆ ಶಾಸ್ತ್ರೀಯ ಸಂಗೀತ. (ಡಾಕ್ಟರು ನಡುವೆ ನಕ್ಕರು.) ಹೆಣ್ಣಿಗಿಂತ ಹೆಚ್ಚಾಗಿ ಹೆಣ್ಣಿನ ಸಂಗೀತ, ಇಂಟರ್ ಮೀಡಿಯಟ್ ಶಾಮಣ್ಣನ ಮನಸ್ಸಿಗೆ ಅಂಟಿರುತ್ತೆ—ಅವನಿಗೆ ಈ ವಿಷಯ ಗೊತ್ತಾಗಿದ್ದರೆ. ಅವರು ಬಂದಾಗ ಅವನು ಮನೆಯಲ್ಲೇ ಇದ್ದ ಅಂತ ಕಾಣುತ್ತೆ."

"ಹ್ಞೂ."

"ಅಂತೂ ಹೆಣ್ಣನ್ನು ಅವನಿನ್ನೂ ನೋಡಿಲ್ಲ?"

"ಇಲ್ಲ."

"ರತ್ನನ ಜೊತೆ ಅವನು ಯಾವಾಗಲೂ ಹೆಚ್ಚು ಸಲಿಗೆಯಿಂದ ಇಲ್ಲ ಅಂತ ಕಾಣುತ್ತೆ...."

"ಇಲ್ಲ."

"ಇದಕ್ಕೆ ನಾನು ಔಷಧಿ ಕಂಡುಹಿಡಿಯುತ್ತೇನೆ, ನೀವೇನೂ ಯೋಚನೆ ಮಾಡಬೇಡಿ. ಅಂತೂ ಶಾಮಣ್ಣ-ರತ್ನ ಇವರ ಮದುವೆ ಬೇಗ ಆಗಿಬಿಡಬೇಕು ಅಂತ ನಿಮ್ಮ ಇಷ್ಟ ತಾನೆ?"

ಮೆಲ್ಲನೆ ತಲೆದೂಗಿದರು ಸುಂದರಮ್ಮನವರು.

"ನೀವು ಸಾಯುವುದರೊಳಗೆ ಇದಾಗಬೇಕು ಅಲ್ಲವೆ?" ಎಂದು ಡಾಕ್ಟರು ಸ್ವಲ್ಪ ಗಟ್ಟಿಯಾಗಿಯೇ ನಕ್ಕರು.

ಉತ್ತರವಾಗಿ ಮೆಲ್ಲನೆ ನಕ್ಕರು ಸುಂದರಮ್ಮನವರು.

"ನೀವು ಯೋಚನೆ ಮಾಡಬೇಡಿ. ನಿಮ್ಮ ಶಾಮಣ್ಣನ ಮದುವೆ ಆಗುವವರೆಗೂ ಯಮಧರ್ಮರಾಯನಿಗೆ ಒಂದು ಮಾರ್ಫಿಯಾ (Morphia) ಇಂಜೆಕ್ಷನ್ ಚುಚ್ಚಿರುತ್ತೇನೆ. ಅವನು ಮೈಮರೆತು ಮಲಗಿರುತ್ತಾನೆ. ಆಮೇಲೆ, ನನ್ನ ಗಿರಾಕಿಗಳಲ್ಲಿ ಕೆಲವರ ಕಡೆಗೆ ಕೈತೋರಿಸಿ ಬಿಡ್ತೇನೆ. ನಿಮ್ಮ ಹತ್ತಿರ ಅವನು ಸುಳಿಯಬೇಕಾದರೆ ಇನ್ನೂ ತುಂಬ ಕಾಲವಾಗಬೇಕು. ಮೊಮ್ಮಗನ್ನ ನೀವು ಕಾಣದೆ ಕಣ್ಣು ಮುಚ್ಕೋದೆ? ಛೇ ಛೇ ಛೇ...." ಎಂದು ಡಾಕ್ಟರ್ ರಘುರಾಂ ಸುಂದರಮ್ಮನವರಿಗೆ ಹಾಸ್ಯದ ಗುಳಿಗೆ ಯೊಂದನ್ನು ತಿನ್ನಿಸಿ, "ನಾನಿನ್ನು ಬರ್ತೀನಿ" ಎಂದು ಹೇಳಿದ್ದರು.

"ಭಾನುವಾರ, ಮರೆಯಬೇಡಿ."

"ಪೋಸ್ಟ್‌ಪೋನ್ ಮಾಡಿಬಿಡಿ. ಈಗ ಯಾಕೆ?

"ಇನ್ನು ಪರವಾಯಿಲ್ಲ. ನಡೆಯೋದು ನಡೆದುಹೋಗಲಿ. ಅಂತೂ ಮರೆಯಬೇಡಿ...."

"ಹೆಚ್ಚಾಯಿತು ಮಾತು, ಸಾಕು. ಅಪ್ಪೊತ್ತು ನೀವು ಹಾಸಿಗೆ ಬಿಟ್ಟು ಏಳೋದಿಲ್ಲ ಅಂತ ಮಾತುಕೊಟ್ಟರೆ ಕುಟುಂಬ ಸಮೇತ ಬರುತೀನಿ."

"ಆಗಲಿ."

ಡಾ|| ರಘುರಾಂ ಸುಂದರಮ್ಮನವರನ್ನು ಬೀಳ್ಕೊಂಡು, ಭಟ್ಟರು ಕೊಟ್ಟ ಓವಲ್‌ಟೈನ್ ಕುಡಿದು, ಕಾರು ಹತ್ತಿ ಹೊರಟರು.

## ೭

ಭಾನುವಾರದ ಹೊತ್ತಿಗೆ ಸುಂದರಮ್ಮನವರಿಗೆ ಬಹಳ ಮಟ್ಟಿಗೆ ಗುಣ ಮುಖವಾಗಿತ್ತು. ಆದರೂ, ಡಾಕ್ಟರ ಆಜ್ಞೆಯನ್ನು ಉಲ್ಲಂಘಿಸದೆ, ಅವರು ಹಾಸಿಗೆಯಮೇಲೆಯೇ ಮಲಗಿದ್ದರು. ಎಲ್ಲರೊಂದಿಗೆ ಊಟಮಾಡದೆ, ತಮ್ಮ ಕೋಣೆಯಲ್ಲೆ ಬೇರೆಯಾಗಿ ಊಟಮಾಡಿದರು. ಉಳಿದವರೆಲ್ಲ ಮನೆಯ ಮುಂದಿನ ಕೈಸಾಲೆಯಲ್ಲಿ ತಾಂಬೂಲಹಾಕಿಕೊಳ್ಳುತ್ತಾ ಸರಸಸಲ್ಲಾಪದಲ್ಲಿ ತೊಡಗಿದ್ದಾಗ, ಸುಂದರಮ್ಮನವರು ಮಲಗಿ ಸ್ವಲ್ಪಹೊತ್ತು ವಿಶ್ರಾಂತಿ ಪಡೆದರು.

ಮಧ್ಯಾಹ್ನ ಹನ್ನೆರಡರ ಹೊತ್ತಿಗೆ ಸರಿಯಾಗಿ ಊಟ ಮುಗಿದಿತ್ತು. ಎರಡುಗಂಟೆಯ ಹೊತ್ತಿಗೆ ಭಟ್ಟರು ಎಲ್ಲರಿಗೂ ಕಾಫಿ ಟೀ ವಿನಿಯೋಗ ಮಾಡಿದರು. ಎಚ್ಚರಗೊಂಡಿದ್ದ ಸುಂದರಮ್ಮನವರೂ ಒಂದು ಬಟ್ಟಲು ಕಾಫಿಯನ್ನು ಸೇವಿಸಿ, ರಾಜುವನ್ನು ತಮ್ಮ ಬಳಿಗೆ ಕರಸಿಕೊಂಡರು.

ರಾಜು ಬಂದವನೇ "ಏನಮ್ಮ ?" ಎಂದ.

"ಇವೊತ್ತು ಸಿನಿಮಾಗಿನಿಮಾಕ್ಕೆ ಹೋಗುವ ಏರ್ಪಾಡಿದೆಯೋ?" ಎಂದು ಸುಂದರಮ್ಮನವರು ಪ್ರಶ್ನಿಸಿದರು.

"ಏನೂ ಇಲ್ಲವಲ್ಲ !"

"ಬೇಕಾದರೆ ಹೋಗಿಬಿಟ್ಟು ಬನ್ನಿ."

"ನಾನು ರತ್ನ ಇಬ್ಬರೇನೇ ಹೋಗಬೇಕು ಹೋದರೆ. ಶಾಮಣ್ಣ ಎಲ್ಲಿ ಬರುತಾನೆ ? ಅವನಿಗೆ ಹಿಂದಿ ಹಾಡುಗಳ ತಲೆ ಕಂಡರೇ ಆಗುವುದಿಲ್ಲ."

"ಅವನು ಬರದೆ ಇದ್ದರೆ ಬೇಡ. ಅವೊತ್ತಿನ ಹಾಗೆ ಕುಸುಮ ಶ್ಯಾಮಲಾ ಬರುತಾರೇ ಇಲ್ಲವೋ ?"

"ಮುಂಚೆಯೇ ತಿಳಿಸಿದ್ದರೆ ಮನೆಯಲ್ಲಿ ಹೇಳಿಬರುತಾ ಇದ್ದರು. ಅಲ್ಲದೆ...."

"ಅದಕ್ಕೇನು? ಬೇಕಾದರೆ ಕೆಂಚಪ್ಪ ಹೇಳಿಬರುತ್ತಾನೆ. ಅವರೇನು ಟಿಕೆಟ್ಟಿಗೆ ಹಣ ತರಬೇಕಾಗಿಲ್ಲ, ಇವೊತ್ತು. ನಮ್ಮ ಮನೆಯಲ್ಲಿ ಔತಣದ ಊಟಹಾಕಿ ಅವರಿಂದ ಹಣ ಕೇಳುವುದೇ?"

ತೂಕಡಿಸುವವರಿಗೆ ಹಾಸಿಗೆ ಹಾಸಿ ಕೊಟ್ಟಂತಾಯಿತು; ರಾಜು ಸಂತೋಷದ ಸಮ್ಮತಿಯನ್ನು ಮೌನದಿಂದ ಸೂಚಿಸಿದ.

"ಸರಿ, ಹಾಗಿದ್ದರೆ. ಹೋಗಿಬಿಟ್ಟು ಬನ್ನಿ. ಆಮೇಲೆ ಕಾಲೇಜು ಬಾಗಿಲು ತೆಗೆದಮೇಲೆ ಸಿನಿಮಾಕ್ಕೆ ಎಲ್ಲಿ ಹೋಗೋದಕ್ಕೆ ಆಗುತ್ತೆ" ಎಂದು ದಿಂಬಿನ ದಸಿಯಿಂದ ತೆಗೆದು, ಮಗನ ಕೈಗೆ ಐದು ರೂಪಾಯಿ ನೋಟನ್ನು ಹಾಕಿದರು.

"ಐದೆಲ್ಲಿ ಸಾಕಾಗುತ್ತಮ್ಮ? ವಿಪರೀತ 'ರಷ್ಷು' (ನೂಕುನುಗ್ಗಲು). 'ಕ್ಯೂನಲ್ಲಿ' ನಿಂತು ಟಿಕೇಟು ತೆಗೆದು ಕೊಳ್ಳಬೇಕಾಗುತ್ತೆ. ಹೋದರೆ 'ಬಾಕ್ಸ್ ಸೀಟಿಗೆ' ಹೋಗಬೇಕು. ಹೋಗುತಾ ಬರುತಾ ಬಸ್ಸು ಚಾರ್ಜು ...." ಎಂದು ರಾಜು ರಾಗ ತೆಗೆದ.

ಸುಂದರಮ್ಮನವರು, "ಹಾಗೇ ? ಸರಿ" ಎಂದು ಇನ್ನೊಂದು ಐದು ರೂಪಾಯಿನ ನೋಟನ್ನು ತೆಗೆದು ಅವನ ಕೈಗೆ ಇಟ್ಟರು.

ರಾಜು ಹೋದ ಸ್ವಲ್ಪ ಹೊತ್ತಿನ ಮೇಲೆ, ಸುಂದರಮ್ಮನವರು ಡಾಕ್ಟರನ್ನು ಕರಸಿಕೊಂಡು, ತಾವು ಮಾಡಿರುವ ಏರ್ಪಾಡನ್ನು ತಿಳಿಸಿದರು.

"....ಇವೊತ್ತು ಹೇಗಿದ್ದರೂ ಭಾನುವಾರ ತಾನೆ. ಸಂಜೆ ಷಾಪಿಲ್ಲ. ಶಾಮಣ್ಣನೂ ಸಂಜೆಯ ವರೆಗೆ ಎಲ್ಲೂ ಹೋಗುವುದಿಲ್ಲ. ನಿಮ್ಮ ಮನೆಯವರನ್ನೂ ಬೇಕಾದರೆ ಬಿಟ್ಟು ಬಂದುಬಿಡಿ. ಶಾಮಣ್ಣನನ್ನು ನೀವು ಮದುವೆಗೆ ಒಪ್ಪಿಸಿಬಿಡಿ, ಹೇಗಾದರೂ ಮಾಡಿ. ಅವನು ಮೈಸೂರಿಗೋ ಬೊಂಬಾಯಿಗೋ ಹೋಗುವುದರೊಳಗೆ, ಇದೇ ಜ್ಯೇಷ್ಠದಲ್ಲೋ ಬರುವ ಶ್ರಾವಣದಲ್ಲೋ ಮದುವೆಯ ಶಾಸ್ತ್ರ ಮಾಡಿಬಿಡೋಣ. ಹೇಗೆ ಯೋಚನೆ ಮಾಡಿದರೂ, ಅವನಿಗೆ ಬೇಗ ಮದುವೆ ಮಾಡುವುದು ಒಳ್ಳೆಯದೆ. ನನಗೋಸ್ಕರ ನೀವು ಸ್ವಲ್ಪ ತೊಂದರೆ ವಹಿಸಬೇಕು...." ಎಂದು ಸುಂದರಮ್ಮನವರು ತಮ್ಮ ಇಂಗಿತವನ್ನು ಡಾಕ್ಟರಿಗೆ ವಿವರಿಸಿದರು.

ರಘುರಾಂ "ಆಗಲಿ" ಎಂದು ಒಪ್ಪಿಕೊಂಡರು.

ರಾಜು, ರತ್ನ, ಕುಸುಮ, ಶ್ಯಾಮಲಾ ನಾಲ್ವರೂ ಚಲನಚಿತ್ರಕ್ಕೆಂದು ಹೊರಟಮೇಲೆ ಡಾ|| ರಘುರಾಂ ತಮ್ಮ ಹೆಂಡತಿ ಮಕ್ಕಳನ್ನು ಮನೆಯಲ್ಲಿ ಬಿಟ್ಟು, ಮತ್ತೆ ಹಿಂದಿರುಗಿದರು.

ಕೆಲವು ಹೊತ್ತು ಮನೆಯಲ್ಲಿ ಯಾರೂ ಇರಲಿಲ್ಲ. ಮನೆಯಲ್ಲಿ ಮೌನ ಸಾಮ್ರಾಜ್ಯದ ಸಾರ್ವಭೌಮನಾಗಿ, ಶಾಮಣ್ಣ ರೇಡಿಯೋ ಮುಂದೆ ಕುಳಿತು ಮದ್ರಾಸ್ ಸ್ಟೇಷನ್ ತಿರುಗಿಸಿದ; 'ರಿಕಾರ್ಡ್' ಆದರೂ ಕರ್ಣಾಟಕದ್ದು; ಮೈಮರೆತು ಕೇಳುತ್ತ ಕುಳಿತಿದ್ದ.

ಮನೆಗೆ ಇದೇ ತಾನೇ ತೆರಳಿದ ಡಾಕ್ಟರು ಅದೇಕೆ ಹಿಂದಿರುಗಿದರು ಎಂದು ಶಾಮಣ್ಣನಿಗೆ ಆಶ್ಚರ್ಯವಾಯಿತು; ಮನೆಯನ್ನು ಹೊಕ್ಕವರೇ, "ಬಾರಯ್ಯ ಒಳಕ್ಕೆ. ನಿಮ್ಮ ತಾಯಿಯ ಕೂಡ ಸ್ವಲ್ಪ ಮಾತಾಡುವುದಿದೆ. ನೀನೂ ಇರಲಿ ಅಂತ ಅವರು ಹೇಳಿದ್ದಾರೆ" ಎಂದಾಗ ಅವನ ಆಶ್ಚರ್ಯ ಇಮ್ಮಡಿಯಾಯಿತು. ಮೌನವಾಗಿ ಡಾಕ್ಟರನ್ನು ಹಿಂಬಾಲಿಸಿದ.

ಕೆಂಚಪ್ಪ ಮಂಚದ ಬಳಿ ಇನ್ನೊಂದು ಕುರ್ಚಿಯನ್ನು ಇಟ್ಟು ಹೋಗಿದ್ದ. ಡಾಕ್ಟರೂ ಶಾಮಣ್ಣನೂ ಕುರ್ಚಿಗಳ ಮೇಲೆ ಕುಳಿತರು.

ಭಟ್ಟರು ಮತ್ತೆ ಎರಡು ಬಟ್ಟಲು ಕಾಫಿ ತಂದು ಇಬ್ಬರ ಕೈಗೂ ಇತ್ತರು.

"ನಾನೇನು ಉ ಪ ನ್ಯಾ ಸ ಮಾಡಬೇಕಾಗಿದೆಯೇ, ಅಮ್ಮಾ" ಎಂದರು, ಡಾಕ್ಟರ್ ನಸುನಗುತ್ತ.

"ಉಪನ್ಯಾಸವಲ್ಲ, ಉಪದೇಶ" ಎಂದರು ಸುಂದರಮ್ಮನವರು.

ತನ್ನ ತಾಯಿ ಡಾಕ್ಟರೊಂದಿಗೆ ಏನೋ ಒಳಸಂಚು ನಡಸಿದ್ದಾರೆ ಎಂದು ಶಾಮಣ್ಣನಿಗೆ ಬೋಧೆಯಾಯಿತು, ತನ್ನ ಮುಂದಿನ ವಿದ್ಯಾಭ್ಯಾಸದ ಬಗೆಗೋ, ಕೆಲವು ದಿನಗಳ ಕೆಳಗೆ ಹೆಣ್ಣು ಕೊಡಬಂದಿದ್ದವರು ಮಾಡಿದ ಮದುವೆಯ ಪ್ರಸ್ತಾಪದ ಕುರಿತೋ ತನ್ನ ಮುಂದೆ ಮಾತುಕತೆಯಾಗಲಿದೆ ಎಂದು ಅವನು ಊಹಿಸಿದನು. ತನ್ನ ಉತ್ತರಗಳಿಂದ ತಾಯಿಯ ಮನಸ್ಸು ನೋಯುವಂತಾಗಿ, ಎಲ್ಲಿ ಅವರ ಆರೋಗ್ಯ ಹದಗೆಡುವುದೋ ಎಂದೂ ಕಳವಳಗೊಂಡನು. ಸಾಧ್ಯವಾದಮಟ್ಟಿಗೂ ಅವರ ಇಷ್ಟಾರ್ಥಗಳನ್ನು ನಡಸುವುದಾಗಿ ಮನಸ್ಸಿನಲ್ಲಿ ತೀರ್ಮಾನಿಸಿಕೊಂಡನು.

ಡಾ|| ರಘುರಾಂ ಅವರೇ ಮಾತನ್ನು ಪ್ರಾರಂಭ ಮಾಡಿದರು. ಅವರ ಧ್ವನಿ ರೋಗಿಯ ಮನಸ್ಸಿನಲ್ಲಿ ಧೈರ್ಯ ನಂಬಿಕೆಗಳನ್ನು ಹುಟ್ಟಿಸುವ, ರೂಢಿಯ ಸ್ಥಾಯಿಯನ್ನು ಹಿಡಿದಿತ್ತು; ಮಾರ್ದವ ಮನವೊಲಿಸಿಕೊಳ್ಳು ವಂತಿತ್ತು; ನೂರಾರು ರೋಗಿಗಳನ್ನು ಪರೀಕ್ಷೆ ಮಾಡಿ ಔಷಧದ ಚೀಟಿ ಗಳನ್ನು ಬರೆದುಕೊಡಬೇಕಾದ ಹೊತ್ತಿನಲ್ಲಿ, ಕಾಲದ ಬೆಲೆಯ ಅರಿವಿ ನಿಂದ ಮಿತಗೊಂಡ ಮಾತಿನ ಖಚಿತತೆಯಿತ್ತು.

"ಏನು ವಿಷಯ ಅಂತ ಗೊತ್ತು ತಾನೆ, ಮಿಸ್ಟರ್ ಶ್ಯಾಮ್?"

"ಶಾಮಣ್ಣ ಅಂತಲೇ ಕೂಗಿ ಡಾಕ್ಟರೇ, ಪರವಾಯಿಲ್ಲ. ಕಾಲೇಜಿಗೆ ಮಾತ್ರ ಶ್ಯಾಮ್, ಅಷ್ಟೆ."

"ಆಗಬಹುದು, ಶಾಮಣ್ಣ. ನಿಮ್ಮ ತಾಯಿಗೆ ಮೌನವ್ರತವನ್ನು ವಿಧಿಸಿರುವವನು ನಾನೆ. ಅವರಿಗೆ ನಾನು ಕ್ಕೊಟ್ಟ ಶಿಕ್ಷೆಗೆ ಈಗ ಪ್ರತಿ ಶಿಕ್ಷೆ ಅನುಭವಿಸಬೇಕಾಗಿ ಬಂದಿದೆ. ಅವರ ಪರವಾಗಿ ನಾನೇ ಮಾತಾಡ ಬೇಕಾಗಿದೆ........"

"ಅವರ ಮನಸ್ಸು ನಿಮಗೆ ಹೇಗೆ ಗೊತ್ತಾಯಿತು?" ಎಂದು ಶಾಮಣ್ಣ ನಕ್ಕ.

"ತಮ್ಮ ಅಭಿಪ್ರಾಯವನ್ನು ನನಗೆ ಬೆಳಗ್ಗೆ ಸೂಕ್ಷ್ಮವಾಗಿ ತಿಳಿ ಸಿದ್ದರು ಅಂತ ಇಟ್ಟುಕೋ. ಇನ್ನೊಂದು ಸಲ ಮಾತನಾಡಿದರೆ ಆಯಾಸವಾಗುವುದಿಲ್ಲವೆ?"

"ಸುಮ್ಮನೆ ಹುಡುಗಾಟಕ್ಕೆ ಹಾಗಂದೆ. ನೀವು ಹೇಳಬೇಕೂ ಅಂತಿರುವುದನ್ನು ಹೇಳಿ."

"ನೋಡಿದೆಯಾ, ಆಗಲೇ ಮಾತು ಎಲ್ಲಿಂದ ಎಲ್ಲಿಗೋ ಹೋಯಿತು, ಇರಲಿ. ಈಗ ನಾನು ಹೇಳುವುದು ಏನೂ ಇಲ್ಲ. ನಾನು ಕೇಳುವ ಪ್ರಶ್ನೆಗಳೆಲ್ಲಾ ನಿಮ್ಮ ತಾಯಿ ಕೇಳಿದ ಪ್ರಶ್ನೆಗಳು, ನಾನು ಹೇಳಿದ ಅಭಿಪ್ರಾಯಗಳೆಲ್ಲ ನಿಮ್ಮ ತಾಯಿಯವರ ಅಭಿಪ್ರಾಯಗಳು ಅಂತ ತಿಳಿಯ ಬೇಕು. ತಿಳಿಯಿತೋ?"

"ಸರಿ."

"ನೀನು ಫಸ್ಟ್ ಕ್ಲಾಸಿನಲ್ಲಿ ಪ್ಯಾಸ್ ಮಾಡಿರುವುದು ನಿಮ್ಮ ತಾಯಿಗೆ

ತುಂಬಾ ಸಂತೋಷವಾಗಿದೆ.”

ಶಾಮಣ್ಣ ಮೌನವಾಗಿಯೇ ಇದ್ದ. ತಾಯಿಗೆ ಸಂತೋಷವಾಗಿದ್ದ ವಿಚಾರ ಅವನಿಗೆ ನಾನಾ ರೀತಿಗಳಲ್ಲಿ ಮನದಟ್ಟಾಗಿದ್ದ ಸಂಗತಿ. ಡಾಕ್ಟರ ಪುನರುಕ್ತಿ ಅನಾವಶ್ಯಕವಾಗಿತ್ತು.

“ನೀನು ತುಂಬಾ ವಿಧೇಯ, ವಿನಯವಂತ, ವಿದ್ಯಾವಂತನಾದರೂ ನಿಗರ್ವಿ ಅಂತ ನಿಮ್ಮ ತಾಯಿ ನನಗೆ ಪದೇ ಪದೇ ಹೇಳಿದ್ದಾರೆ....”

ಈ ಹೊಗಳಿಕೆ ತನಗೆ ಸಲ್ಲುತ್ತದೆ ಎಂದು ಶಾಮಣ್ಣ ಬಲ್ಲನು. ಅದನ್ನು ಕೇಳಿ ಸಂತೋಷವೂ ಆಯಿತು. ಆದರೂ, ಈ ಹೊಗಳಿಕೆಯ ಮಾತುಗಳನ್ನು ಕೇಳಿ ಅವನಿಗೆ ತುಂಬ 'ಮುಜಗರ'ವಾಯಿತು. ತನ್ನಿಂದ ಯಾವುದೋ ಕೆಲಸ ಆಗಮಾಡಿಸಿಕೊಳ್ಳುವುದಕ್ಕೆ ಡಾಕ್ಟರು ಭದ್ರವಾದ ಪೂರ್ವಪೀಠಿಕೆ ಹಾಕುತ್ತಿರುವರೆಂದೂ ಅವನಿಗೆ ವೇದ್ಯವಾಯಿತು.

“ಇದೇನು, ನನ್ನನ್ನ ಹೊಗಳೋದಕ್ಕೆ ಮೊದಲು ಮಾಡಿಬಿಟ್ಟಿರಿ? ವಿಷಯ ಏನೂ ಅಂತ ತಿಳಿಸಲೇ ಇಲ್ಲವಲ್ಲ?''

''ಏನೂ ಅಂದರೆ........'' ಎಂದು ಡಾಕ್ಟರ್ ಸ್ವಲ್ಪ ತಡವರಿಸಿ, ಸುಂದರಮ್ಮನವರ ಮುಖವನ್ನು ನೋಡಿದರು. ಮದುವೆಯ ವಿಷಯ ಮುಂಚೆ ಎತ್ತಬೇಕೋ, ಲಾ ಪರೀಕ್ಷೆಗೆ ಓದನ್ನು ಮುಂದುವರಿಸುವ ವಿಚಾರ ವನ್ನು ಎತ್ತಬೇಕೋ ಎಂದು ಅವರು ಸಂದೇಹದಲ್ಲಿ ಸಿಲುಕಿದ್ದರು. ಎರಡು ವಿಷಯಗಳೂ ಒಂದಕ್ಕೊಂದು ಹೊಂದಿಕೊಂಡಿದ್ದುವು; ಒಂದು ವಿಚಾರ ದಲ್ಲಾದ ನಿರ್ಣಯ ಇನ್ನೊಂದು ವಿಚಾರದ ಮೇಲೆ ಪ್ರಭಾವ ಬೀರು ವಂತಿತ್ತು.

“ಇನ್ನೇನೂ ಇಲ್ಲವಪ್ಪ, ನಿನ್ನ ಮದುವೆಯ ವಿಚಾರ” ಎಂದು ಸುಂದರಮ್ಮನವರು ಹೆಚ್ಚಿನ ಆಯಾಸವನ್ನು ನಟಿಸಿ ನುಡಿದರು; ಡಾಕ್ಟರಿಗೆ ತಪ್ಪಿದ್ದ ಮಾತಿನ ಜಾಡು ಸಿಕ್ಕಿತು.

“ಅದೇ, ನಿನ್ನ ಮದುವೆಯ ವಿಚಾರ. ನನಗೇ ಮದುವೆಯೋ ಏನೋ ಎನ್ನುವಷ್ಟು ಸಂಕೋಚವಾಗಿ ಹೋಯಿತು, ಆ ವಿಚಾರ ಎತ್ತುವುದಕ್ಕೆ. ಆದರೆ, ನೀನು ಮಾತ್ರ ಸಂಕೋಚಪಟ್ಟುಕೊಳ್ಳದೆ ನಿನ್ನ ಅಭಿಪ್ರಾಯ ವನ್ನು ಸ್ಪಷ್ಟವಾಗಿ ತಿಳಿಸಿಬಿಡಬೇಕು, ತಿಳಿಯಿತೋ?''

"ಆಗಲಿ" ಎಂದು ಒಪ್ಪಿಕೊಂಡ ಶಾಮಣ್ಣ.

"ನಾನು ಬೇಡ ಬೇಡ ಅಂದರೂ ನಿಮ್ಮ ತಾಯಿ ನಾನು ಸಾಯುತ್ತೀನಿ ಅಂತ ಹೆದರಿಸುತ್ತಾ ಇದಾರೆ. ಸಾಯುವುದರೊಳಗೆ ನಿನ್ನ ಮದುವೆಯನ್ನು ಕಣ್ಣತುಂಬ ನೋಡಿ ಸಾಯಬೇಕಂತೆ" ಎಂದು ಡಾಕ್ಟರು ಒಮ್ಮೆ ಗೊಳ್ಳನೆ ನಕ್ಕು, ಮುಂದುವರಿಸಿದರು: "ಆದರೆ, ನಾನು ಸಾಯುವು ದಕ್ಕೆ ಬಿಡಬೇಕಲ್ಲ? ಅಂದರೆ, ಅವರು ಬದುಕಿರುತ್ತಾರೆ ನನ್ನ ಇಂಜೆಕ್ಷನ್ನು ಗಳ ಬಲದಿಂದ ಅಂತ ನೀನು ಮದುವೆಗೆ ಒಪ್ಪದೆ ಇರಬೇಡ. ಅವರ ಇಷ್ಟದ ಪ್ರಕಾರ ಈ ವರ್ಷವೋ, ಸರಿಯಾದ ಲಗ್ನ ಸಿಕ್ಕದೆ ಹೋದರೆ ಕಡೆಯ ಪಕ್ಷ ಮುಂದಿನ ವರ್ಷವೋ, ನಿನ್ನ ಮದುವೆಯಾಗದೆ ಹೋದರೆ ಅವರ ಪ್ರಾಣಪಕ್ಷಿ ನನ್ನ ಮಾತು ಕೇಳದೆ ಹೋಗಬಹುದು. ಮುಖ್ಯ ಅವರು ಕೊರಗು ಹಚ್ಚಿಕೊಳ್ಳಕೂಡದು. ಅವರನ್ನ ಇನ್ನೂ ಕೆಲವು ಕಾಲ ಉಳಿಸಿಕೊಳ್ಳಲು ಶಕ್ತನಾದವನು ನೀನು ಕಣಯ್ಯಾ, ನಾನಲ್ಲ."

"ನಾನು ಅವರ ಇಷ್ಟದಂತೆ ಮದುವೆಗೆ ಒಪ್ಪಿಕೊಂಡರೆ, ಅವರು ಬದುಕಿರುವಾಗಲೇ ಇಂಗ್ಲೆಂಡಿಗೆ ಹೋಗಬಹುದಲ್ಲ?"

ಡಾಕ್ಟರು ಸುಂದರಮ್ಮನವರ ಮುಖವನ್ನು ಅರ್ಥಪೂರ್ಣವಾಗಿ ನೋಡಿದರು. ನಿಮ್ಮ ಇಷ್ಟವನ್ನು ಅವನು ನಡಸಿದರೆ ಅವನ ಇಷ್ಟವನ್ನು ನಾವು ನಡಸಬೇಕಾಗುತ್ತದೆ ಎಂಬ ಎಚ್ಚರಿಕೆಯ ಸೂಚನೆಯಿತ್ತು ಅವರ ಕೂರ್‌ನೋಟದಲ್ಲಿ.

"ಈ ವರ್ಷ ಮೈಸೂರಿಗೆ ಹೋಗಿ ಮೊದಲು ಎಂ.ಎ. ಮಾಡಿಬಿಡು. ಆಮೇಲೆ ಇಂಗ್ಲೆಂಡಿಗೋ ಅಮೆರಿಕಾಕ್ಕೋ ಎಲ್ಲಿಗಾದರೂ ಹೋದರಾಯಿತು. ಆಗಬಹುದಲ್ಲ?'' ಎಂದು ರಘುರಾಂ ಸುಂದರಮ್ಮನವರ ಮುಖವನ್ನು ದೃಷ್ಟಿಸಿದರು.

ಡಾಕ್ಟರ ಮಾತಿಗೆ ಸಮ್ಮತಿಯನ್ನು ಸೂಚಿಸುವಂತೆ, ಸುಂದರಮ್ಮ ನವರು ಮೆಲ್ಲನೆ ತಲೆಯೊಲೆದರು.

"ಆಗಬಹುದು'' ಎಂದು ಒಪ್ಪಿಕೊಂಡ, ಶಾಮಣ್ಣ.

''ಅಂದರೆ, ಮದುವೆಗೆ ಒಪ್ಪಿಕೊಂಡ ಹಾಗಾಯಿತು. ತುಂಬ ಸಂತೋಷ ಕಣಯ್ಯ. ಇನ್ನು ನಿಮ್ಮ ತಾಯಿ ಚೇತರಿಸಿಕೊಂಡು ಚಿಗರೆಹಾಗೆ

ಓಡಾಡಿಬಿಡುತ್ತಾರೆ, ನೋಡುತ್ತಿರುವೆಯಂತೆ" ಎಂದು ರಘುರಾಂ ನಿಜವಾದ ಹಿಗ್ಗಿನಿಂದ ನುಡಿದರು.

"ನಮ್ಮ ತಾಯಿಯ ಇಷ್ಟದಂತೆ ನಾನು ನಡೆಯುವುದಾಯಿತಲ್ಲ. ಇನ್ನು ನನ್ನದೊಂದು ಇಷ್ಟ ಇದೆ. ಅದನ್ನು ನಡೆಸುವುದು ಅವರಿಗೇನೂ ಅಷ್ಟು ಕಷ್ಟವಾಗಲಾರದು'' ಎಂದು ತನ್ನ ಮನಸ್ಸನ್ನು ಮುಂದಿಡಬಯಸಿದ ಶಾಮಣ್ಣ.

"ಹ್ಞಾ, ಅದೀಗ ಸರಿ. ಮನಸ್ಸಿನಲ್ಲಿರುವುದನ್ನು ಮುಚ್ಚಿಕೊಳ್ಳದೆ ಹೇಳಿಬಿಡಬೇಕು. ಬಚ್ಚಿಟ್ಟುಕೊಂಡ ಖಾಯಿಲೆ ದೇಹವನ್ನು ತಿಂದರೆ, ಮುಚ್ಚಿಟ್ಟುಕೊಂಡ ಬಯಕೆ ಮನಸ್ಸನ್ನೆ ಕೊರೆಯುತ್ತೆ. ಅದು ಒಳ್ಳೆಯದಲ್ಲ, ಆರೋಗ್ಯಕ್ಕೆ. ಹ್ಞೂ, ಈವಾಗ ಹೇಳು, ಅದೇನು ನಿನ್ನ ಇಷ್ಟ?'' ಎಂದರು ರಘುರಾಂ.

''ಹೆಣ್ಣೇನು ಅಷ್ಟು ರೂಪವತಿಯಾಗಿರಬೇಕಾಗಿಲ್ಲ. ಸಾಮವರ್ಣ ವಾದರೂ ಸಾಕು. ನನಗೇನು ಶ್ರೀಮಂತರ ಮನೆಯ ಹೆಣ್ಣು ಬೇಕಾಗಿಲ್ಲ. ಬಡವರ ಮಗಳಾದರೂ ಸರಿಯೆ. ಆದರೆ, ಕಡೆಯ ಪಕ್ಷ ಇಂಟರ್ ಮೀಡಿಯಟ್ಟಾದರೂ ಪ್ಯಾಸುಮಾಡಿರಬೇಕು. ನನ್ನ ಮನಸ್ಸಿನ ಆಶೆ ಆಕಾಂಕ್ಷೆಗಳನ್ನು ಅರ್ಥಮಾಡಿಕೊಳ್ಳಲು ಸಮರ್ಥಳಾಗಿರಬೇಕು. ನಾನು ಸದಾ ಪುಸ್ತಕ ಹಿಡಿದು ಕೂತಿದ್ದರೆ, ಅದರಲ್ಲಿ ಬೇಸರಪಟ್ಟುಕೊಳ್ಳುವಂತಿರ ಬಾರದು. ನನ್ನ ವ್ಯಾಸಂಗದಲ್ಲಿ ಸಹಾನುಭೂತಿ ಉಳ್ಳವಳಾಗಿರಬೇಕು. ನನಗೆ ನಮ್ಮ ದೇಶದ ಸಂಗೀತದಲ್ಲಿ ಇಷ್ಟ. ಅವಳಿಗೆ ಸಂಗೀತ ಬಂದಿದ್ದರೆ, ನಾನು ಅವಳಲ್ಲಿ ಆಸಕ್ತಿ ತೋರಲು ಸಹಾಯವಾಗುತ್ತೆ. ಇಬ್ಬರೂ ಅನ್ಯೋನ್ಯವಾಗಿರಬಹುದು. ಇದು ನನ್ನ ಮನಸ್ಸಿನ ಆಸೆ. ಇದೇನು ದುರಾಶೆಯಲ್ಲವಲ್ಲ ಡಾಕ್ಟರೆ?"

"ಖಂಡಿತ ಅಲ್ಲ. ಒಂದೇ ಕೊರತೆ: ಏನು ಅಂದರೆ, ನಿಮ್ಮ ತಾಯಿ ಮನಸ್ಸಿನಲ್ಲಿ ಮಾಡಿಕೊಂಡಿರುವ ಹೆಣ್ಣಿಗೆ ಇಂಟರ್‌ಮೀಡಿಯಟ್ಟು, ಸಂಗೀತ ಈ 'ಕ್ವಾಲಿಫಿಕೇಷನ್ನು'ಗಳಿಲ್ಲ. ಆದರೆ, ಅದೇನು ದೊಡ್ಡ ವಿಷಯವಲ್ಲ. ಎಸ್. ಎಸ್. ಎಲ್. ಸಿ. ಆಗಿರುವುದರಿಂದ ಮುಂದಕ್ಕೆ ಓದಿಸಬಹುದು. ಆ ಹುಡುಗಿಗೆ ಕಂಠ ಚೆನ್ನಾಗಿದೆ. , ತಕ್ಕಮಟ್ಟಿಗೆ ಹಾಡಲು ಬರುವುದರಿಂದ,

ಶಾಸ್ತ್ರೀಯವಾಗಿ ಸಂಗೀತವನ್ನೂ ಹೇಳಿಸಬಹುದು.”

“ಶ್ರೀಮಂತರ ಮನೆಯ ಹೆಣ್ಣು ನನಗೆ ಬೇಡ ಅಂತ ಮೊದಲೇ ನಾನು ಹೇಳಿಬಿಟ್ಟೆನಲ್ಲ?”

“ಶ್ರೀಮಂತರ ಮಗಳಲ್ಲವಯ್ಯ, ಬಡವರ ಮಗಳೇ!” ಎಂದರು ರಘುರಾಂ, ಮುಖ ಅರಳಿಸಿ.

ಶಾಮಣ್ಣ ಮೌನವಾಗಿದ್ದ.

“ಏನಯ್ಯಾ, ಮನೆಯಲ್ಲಿ ರತ್ನದೀಪ ಇಟ್ಟುಕೊಂಡು ದೀಪಕ್ಕೆ ಹರಳೆಣ್ಣೆ ಇಲ್ಲ ಅಂತ ಹುಡುಕಿಕೊಂಡು ಹೋದರಂತೆ. ಹಾಗೆ, ಬಡವರ ಮಗಳೇ ಆದರೂ ಭಾಗ್ಯವಂತೆ ಅನ್ನಿಸಿಕೊಂಡು ಮನೆಯಲ್ಲೆ ಇರೋವಾಗ, ಹಾದಿ ಬೀದಿಯ ಹೆಣ್ಣು ಯಾಕಯ್ಯ ನಿನಗೆ?”

ಶಾಮಣ್ಣನಿಗೆ ಈಗ ತನಗೆ ಗೊತ್ತುಮಾಡಿದ ಹೆಣ್ಣು ಯಾರೆಂದು ಅರ್ಥವಾಯಿತು. “ರತ್ನ ಆದರೆ ನನಗೆ ಖಂಡಿತ ಬೇಡ” ಎಂದು ಮನಸ್ಸು ಬಗೆದದ್ದನ್ನು ಬಾಯಿ ನುಡಿಯಲಿಲ್ಲ. ತಾಯ ಮೇಲಣ ಮೋಹ, ಮಮತೆ, ಭಕ್ತಿ ನಾಲಗೆಯ ಸ್ವಾತಂತ್ರ್ಯಕ್ಕೆ ಅಡ್ಡಬಂದುವು.

“ಬಿಡಿಸಿ ಹೇಳಿಬಿಡಿ ಡಾಕ್ಟರೆ: ರತ್ನನ್ನ ನಾನು ಮದುವೆ ಮಾಡಿ ಕೊಳ್ಳಬೇಕು ಅಂತ ನಮ್ಮ ತಾಯಿಯ ಇಷ್ಟ, ಹೌದು ತಾನೆ?”

ಇಷ್ಟು ಹೊತ್ತಿಗೆ, ಸುಂದರಮ್ಮನವರು ಮೆಲ್ಲಗೆ ಒಂದು ಮಾತಾಡಿ ದರು:

“ಅವಳನ್ನ ಮದುವೆ ಮಾಡಿಕೊಳ್ಳುವುದು ನಿನಗೆ ಇಷ್ಟವಿಲ್ಲವೆ, ಮಗೂ?”

ಈ ಮಾತಿಗೆ ಶಾಮಣ್ಣ ಉತ್ತರ ಕೊಡಲು ಇಷ್ಟಪಡಲಿಲ್ಲ. “ಯೋಚನೆ ಮಾಡಿ, ನಾಳೆ ನಾಳಿದ್ದರಲ್ಲಿ ಹೇಳುತೀನಿ ಕಣಮ್ಮ. ನೀನು ಮಾತ್ರ ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ” ಎಂದು ಕುರ್ಚಿಯನ್ನು ಬಿಟ್ಟು ಮೇಲಕ್ಕೆದ್ದ.

“ಏನು, ಪಬ್ಲಿಕ್ ಲೈಬ್ರರಿ ಕಡೆಗೋ?” ಎಂದು ಡಾಕ್ಟರು ಕೇಳಿದರು.

“ಇಲ್ಲ. ಗಾಯನ ಸಮಾಜಕ್ಕೆ. ಇವೊತ್ತು ತಿಟ್ಟೆ ಕೃಷ್ಣಯ್ಯಂಗಾರ್ ಸಂಗೀತ ಅಲ್ಲವೆ? ಅಪರೂಪಕ್ಕೆ ಮೈಸೂರಿನ ವಿದ್ವಾಂಸರ ಸಂಗೀತ

ಏರ್ಪಡಿಸಿದ್ದಾರೆ. ನಾವೇ ಇವರಿಗೆ ಪ್ರೋತ್ಸಾಹ ಕೊಡದೆ ಹೋದರೆ, ಬೆಂಗಳೂರಿನ ತಮಿಳು ಜನ ಕೊಡುತ್ತಾರೆಯೇ?"

"ಓಹೋ, ಆಗಲೇ ನಾಲ್ಕು ಗಂಟೆಯ ಸಮಯ. ಆಗಲಯ್ಯ, ಇವೊತ್ತು ನಾನೂ ಜೊತೆ ಬಂದು ಮೈಸೂರಿನ ವಿದ್ವಾಂಸರ ಸಂಗೀತಕ್ಕೆ ಪ್ರೋತ್ಸಾಹ ಕೊಟ್ಟೇಬಿಡುತ್ತೇನೆ. ಸಂಗೀತ ಕೇಳಿಯಾದರೂ ನಿಮ್ಮ ಮನೆಯ ಹಬ್ಬದ ಊಟ ಅರಗಲಿ" ಎಂದು ಡಾಕ್ಟರೂ ಎದ್ದರು.

ಶಾಮಣ್ಣ ಉಡುಪು ಬದಲಾಯಿಸುವುದಕ್ಕೆ ತನ್ನ ಕೋಣೆಗೆ ಹೋದ. ಆಗ ಡಾಕ್ಟರು—

"ಒಪ್ಪುತಾನೆ ಅಂತ ಕಾಣುತ್ತೆ. ನೀವು ಯೋಚನೆ ಮಾಡಬೇಡಿ. ಸ್ವಲ್ಪ ಅನುಮಾನಿಸುವ ಹಾಗೂ ಕಾಣುತ್ತೆ. ಇರಲಿ, ಅವನನ್ನು ಒಪ್ಪಿಸುವ ಭಾರ ನನ್ನದು" ಎಂದು ಹೇಳಿ ಡಾಕ್ಟರು ಸುಂದರಮ್ಮನವರನ್ನು ಬೀಳ್ಕೊಂಡು ತಮ್ಮ ಕಾರನ್ನು ಹತ್ತಿ ಕುಳಿತರು.

ಶಾಮಣ್ಣನೂ ಗಾಯನ ಸಮಾಜದ ಸಭೆಗೆ ತಕ್ಕ ಸರಳ ರೀತಿಯ 'ಮೈಸೂರು ಉಡುಪು' ಧರಿಸಿ, ಡಾಕ್ಟರ ಜೊತೆಯಲ್ಲಿ ಬಂದು ಕುಳಿತ. ಡಾಕ್ಟರು ಕಾರನ್ನು ಬಿಟ್ಟರು.

## ೮

ಯಾವುದಾದರೂ ಹಿಂದಿ ಚಲನಚಿತ್ರಕ್ಕೆ ಹೋಗಬೇಕೆಂದು ಎಲ್ಲರೂ ಮೊದಲು ತೀರ್ಮಾನಿಸಿಕೊಂಡಿದ್ದರು. ಶ್ರೀಮಂತ ಕುಟುಂಬದ ಆಧುನಿಕ ನವನಾಗರಿಕತೆಯ ನಲಿದಾಟದ ಬದುಕಿನಲ್ಲಿ ಬೆಳೆದ ಕುಸುಮ ಕಂಟೋನ್ಮೆಂಟಿನ ಹಾಲಿವುಡ್ ಚಿತ್ರಗಳ ಮೋಹಕ ಪ್ರಭಾವಕ್ಕೆ ಮನಸೋತಿದ್ದಳು. ರಾಜಗೋಪಾಲ್ ಹಿಂದೀ ಚಿತ್ರಪ್ರೇಮಿಯೇ ಆದರೂ, ಆಂಗ್ಲ ಚಿತ್ರಪಟಗಳ ಸೊಬಗನ್ನೂ ಆಗಾಗ ಸವಿಯ ಬಯಸುತ್ತಿದ್ದನು. ಶ್ಯಾಮಲೆಗೆ ಇಂಥಾದ್ದೇ ಎಂಬ ನಿರ್ದಿಷ್ಟವಾದ ರುಚಿ ಬೆಳೆದು ಬಂದಿರಲಿಲ್ಲ. ರತ್ನನ ವಿಷಯ ಹೇಳಲೇಬೇಕಾಗಿಲ್ಲ: ಚಲನಚಿತ್ರ ನೋಡಬೇಕೆಂಬ ಅವಳ

ಆಶೆಯನ್ನು ಸುಂದರಮ್ಮನವರು ತಮ್ಮ ಇಷ್ಟಕ್ಕೆ ಅನುಗುಣವಾಗಿ ತಿದ್ದಿ ಕೊಳ್ಳಲು ಪ್ರಯತ್ನಿಸಿದ್ದರು; ಪೌರಾಣಿಕ ಕಥೆಯನ್ನು ತೋರುವ ತೆಲುಗು ತಮಿಳು ಚಿತ್ರಗಳಿಗೆ, ಆಗೊಮ್ಮೆ ಈಗೊಮ್ಮೆ ಮೂವರನ್ನೂ ಒಟ್ಟಿಗೆ ಹೋಗಲು ಅವಕಾಶ ಕೊಡುತ್ತಿದ್ದರು. ಶಾಮಣ್ಣ ಊರಿನಲ್ಲಿ ಇಲ್ಲದಿದ್ದಾಗ ರಾಜು ರತ್ನ ಇಬ್ಬರನ್ನೇ ಎಂದೂ ಕಳಿಸಿದ್ದುದಿಲ್ಲ. ಶಾಮಣ್ಣ, ತನ್ನ ಸಂಗೀತ ಪ್ರೇಮದ ಸಂತೃಪ್ತಿಗಾಗಿ ಯಾವಾಗಲೂ ತಮಿಳು ಚಿತ್ರವನ್ನೇ ಆಯ್ಕೆ ಮಾಡುತ್ತಿದ್ದ. ತಾಯಿ ಮತ್ತು ಅಣ್ಣನ ಬಲವಂತಕ್ಕೆ ಮಾತ್ರ ರಾಜು ಆ ಚಿತ್ರಗಳನ್ನು ನೋಡುತ್ತಿದ್ದ. ತಾಯಿಗೆ ತಿಳಿಸಿ ಒಮ್ಮೊಮ್ಮೆ, ತಿಳಿಸದೆ ಹಲವು ಸಲ ಹಿಂದಿಯ ಚಿತ್ರಗಳನ್ನು ನೋಡಿ ಅವನು ಸಂತುಷ್ಟಿ ಪಡೆಯುತ್ತಿದ್ದ. ಹಿಂದಿಯ ಚಿತ್ರಕ್ಕೆ ಹೋಗೋಣ ವೆಂದಾಗ ರತ್ನನಿಗೂ ಕುತೂಹಲವೇ ಆಯಿತು.

ಇನ್ನೇನು ಬಸ್ ಹಿಡಿಯಬೇಕೆನ್ನುವಷ್ಟರಲ್ಲಿ, ಕುಸುಮ ಹೇಳಿದಳು. "ಇಂಗ್ಲಿಷ್ ಚಿತ್ರಕ್ಕೇ ಹೋಗಿಬಿಡೋಣ, ಚೆನ್ನಾಗಿರುತ್ತೆ."

"ಆಲ್‌ರೈಟ್ (ಸರಿ) ಕುಸುಮ್, ನೀ....ನೀವು ಹೇಳಿದ ಹಾಗೇ ಆಗಲಿ. ಮಿಕ್ಕಾದವರು ಏನಂತಾರೋ?" ಎಂದು ಶ್ಯಾಮಲೆಯ ಕಡೆಗೆ ನೋಡಿದ ರಾಜು.

"ನೀವೆಲ್ಲ ಹೇಗೆ ಹೇಳಿದರೆ ಹಾಗೆ" ಎಂದಳು ಶ್ಯಾಮಲೆ.

ಕುಸುಮನ ಸಲಹೆಗೆ ಬಹುಮತ ದೊರಕಿದಂತಾಯಿತು. ಎಲ್ಲರೂ ದಂಡಿನ ಬಸ್ಸನ್ನು ಹತ್ತಿ ಕುಳಿತರು.

"ಇಂಗ್ಲೀಷು ಚಿತ್ರ ಹೇಗಿರುತ್ತೆ, ನೋಡಿಯೇ ಬಿಡೋಣ" ಎಂದು ರತ್ನನೂ ಮನಸ್ಸಿನಲ್ಲಿ ತೃಪ್ತಳಾಗಿಯೇ ಮೌನವಾಗಿದ್ದಳು.

ಹೊತ್ತಿಗೆ ಸರಿಯಾಗಿಯೆ ಎಲ್ಲರೂ ಚಲನಚಿತ್ರಮಂದಿರವನ್ನು ಪ್ರವೇಶಿಸಿದರು. ಶ್ರೀಮಂತ ವರ್ಗದ ಟಿಕೆಟ್ಟುಗಳನ್ನೇ ರಾಜು ಕೊಂಡಿದ್ದ. ನಗರದಲ್ಲಿ ತಾನು ಹೋಗಿದ್ದ ಚಿತ್ರಮಂದಿರಗಳ ವಾತಾವರಣಕ್ಕೂ ಇಲ್ಲಿನದಕ್ಕೂ ತುಂಬ ವ್ಯತ್ಯಾಸ ಇದೆಯೆಂದುಕೊಂಡಳು ರತ್ನ. ಇಲ್ಲಿ ಹೆಂಗಸರಿಗಾಗಿ ಪ್ರತ್ಯೇಕ ಸ್ಥಳವಿರಲಿಲ್ಲ. ಗಂಡಸರೂ ಹೆಂಗಸರೂ ಪಕ್ಕಪಕ್ಕದಲ್ಲಿಯೇ ಕುಳಿತಿದ್ದರು. ಹಾಗೆ ಕುಳಿತಿದ್ದವರಲ್ಲಿ ಆಂಗ್ಲರು,

ಆಂಗ್ಲೋ ಇಂಡಿಯನ್ನರು, ಪಾರಸಿಯವರು, ಅವರ ಅನುಕರಣದ ಥಳುಕಿನ ಭಾರತ ರಮಣಿಯರು—ಇವರೇ ರತ್ನನಿಗೆ ಇಲ್ಲಿ ಗೋಚರಿಸಿದ್ದು. "ಓ, ನಮ್ಮಂಥವರು ಇಲ್ಲವೇ ಇಲ್ಲ!" ಎಂದು ರತ್ನ ಬೆರಗಾದಳು. ಕುಸುಮನಿಗೆ ಇದು ಪರಿಚಿತ ವಾತಾವರಣ. ಶ್ಯಾಮಲೆ ಬೆರಗಿಗಿಂತ ಹೆಚ್ಚಾಗಿ, ಮೆಚ್ಚಿಗೆಯ ಮನೋಭಾವದಲ್ಲಿದ್ದಳು.

ರತ್ನ ಚಿತ್ರಮಂದಿರವನ್ನು ಪ್ರವೇಶಿಸಿ, ಕಣ್ಣನ್ನು ಒಮ್ಮೆ ಸುತ್ತ ಆಡಿಸುವಷ್ಟರಲ್ಲಿಯೇ ಕಂಡ ನೋಟದ ವಿಶಿಷ್ಟತೆ ಅವಳ ಕಣ್ಣಿಗೆ ಕಟ್ಟಿತು. ನಿಬ್ಬೆರಗಿನ ಕುತೂಹಲ ಮೌನದಲ್ಲಿ ಅವಳ ನಡೆ ಹಿಂದಾಗಿತ್ತು; ಎಲ್ಲರ ನಾಯಕನಾಗಿ, ಪಾಶ್ಚಾತ್ಯರೀತಿಯ ಉಡುಪಿನಲ್ಲಿ ಶೋಭಿಸುತ್ತಿದ್ದ ರಾಜ ಗೋಪಾಲ್ ಎಲ್ಲರಿಗೂ "ಹೀಗೆ ಬನ್ನಿ, This way" ಎಂದು ವಾತಾ ವರಣಕ್ಕೆ ಅನುಗುಣವಾಗಿ ಇಂಗ್ಲಿಷ್ ಪದಗಳ ಒಗ್ಗರಣೆ ಹಾಕುತ್ತ, ಮುಂದೆ ನಡೆದಿದ್ದ.

ಎಲ್ಲರೂ ಆಸನಗಳಮೇಲೆ ಕುಳಿತಾಗ—ರಾಜಗೋಪಾಲ್, ಅವನ ಪಕ್ಕದಲ್ಲಿ ಕುಸುಮ, ಅವಳ ಪಕ್ಕದಲ್ಲಿ ಶ್ಯಾಮಲಾ, ಕಡೆಯಲ್ಲಿ ರತ್ನ— ಈ ಕ್ರಮ ತಾನಾಗಿ ಏರ್ಪಟ್ಟಿತು.

ವಾಲ್ಟ್ ಡಿಸ್ನಿಯ ಬಣ್ಣಬಣ್ಣದ ವ್ಯಂಗ್ಯಚಿತ್ರ ಕಂಡು ರತ್ನ ಬೆಕ್ಕಸ ಬೆರಗಾದಳು; ಆ ಕೆಲವು ರಸನಿಮಿಷಗಳಲ್ಲಿ, ಪ್ರಾಣಿ ಕಥೆಯನ್ನು ನಂಬಿ ನಲಿಯುವ ಮುಗ್ಧಭಾವದ ಮಗುವಾದಳು.

ಬಹಳ ಕಾಲ ಅವಳು ಮುಗ್ಧಶಿಶುವಂತಿರಲಿಲ್ಲ. ಆಂಗ್ಲ ಚಿತ್ರ ಪ್ರದರ್ಶನ ಪ್ರಾರಂಭವಾಗಿ ಮುಂದುವರಿದಂತೆ, ಅವಳು ತನ್ನ ನಿತ್ಯದ ಲೋಕವನ್ನು ಬಿಟ್ಟು ಅದಾವುದೋ ವಾಸ್ತವವಾದರೂ ಅಲೌಕಿಕ ಸ್ವರ್ಗೀಯ ಸುಂದರವಾದ ಪ್ರಣಯೋನ್ಮಾದದ ಪ್ರಪಂಚದಲ್ಲಿ ಸಂಚರಿಸು ತ್ತಿದ್ದಳು. ಕಥೆಯ ನಾಯಕನಾಯಕಿಯರಂತೆ ಪ್ರೇಮವನ್ನು ಹಾಗೆ, ಅಷ್ಟು ನಿಕಟವಾಗಿ, ಎಲ್ಲರೆದುರಿಗೆ ಪ್ರದರ್ಶಿಸುವುದು ಅವಳಿಗೆ ಸೋಜಿಗವೆನ್ನಿಸಿತು. ತಾನು ಕಂಡ ತಮಿಳು ಚಿತ್ರಗಳಲ್ಲಿ ಅಂಥ ಮೋಹದ ಮೋಡಿಯೆರಚುವ ದೃಶ್ಯಗಳನ್ನವಳು ಕಂಡಿರಲಿಲ್ಲ. ಪಾಶ್ಚಾತ್ಯದೇಶಗಳ ಪದ್ಧತಿ ಅದು, ನಮ್ಮ ದೇಶದ ಜನಕ್ಕೆ ಒಗ್ಗುವುದಿಲ್ಲ ಎಂದುಕೊಂಡಳು. ಅಂಥ ದೃಶ್ಯ

ಗಳನ್ನು ಕಂಡಾಗ ಮೆಚ್ಚಿಯೂ ಜುಗುಪ್ಸೆಗೊಂಡಳು, ಸವಿದೂ ಲಜ್ಜೆ ಗೊಂಡಳು. ಪಕ್ಕದಲ್ಲಿದ್ದ ಶ್ಯಾಮಲೆಯ ಭುಜದ ಮೇಲೆ ಕೈ ಹಾಕಿ, ಪಿಸುಮಾತಿನಲ್ಲಿ "ಥೂ, ಇಂಥಾದ್ದನ್ನೆಲ್ಲ ತೋರಿಸಬಾರದು, ಅಲ್ಲವೇನೇ ?'' ಎಂದಳು. ಅದಕ್ಕೆ ಶ್ಯಾಮಲಾ—''ಏನು ಮಹಾನೇ! ಯಾರೂ ಮಾಡದ್ದೇ ? ಅಥವಾ ಮಾಡಬಾರದ್ದೇ ?'' ಎಂದು ಅವಳೂ ಇವಳ ಭುಜದಮೇಲೆ ಕೈ ಹಾಕಿದಳು. ಚಿತ್ರದ ನೋಟದಲ್ಲಿ, ಕಥೆಯ ಓಟದಲ್ಲಿ, ತನ್ಮಯರಾಗಿಯೂ ನವಯೌವನದ ಹೊಸ್ತಿಲು ಹತ್ತಿದ್ದ ಈ ಇಬ್ಬರು ಗೆಳತಿಯರು ಯಾವುದೋ ಮಧುರ ಭಾವದಲ್ಲಿ ಮುಳುಗಿ, ತೂಗುಬಳ್ಳಿಯ ಮೇಲೆ ಹೊಂಬಿಸಿಲಿನಲ್ಲಿ ನಲಿಯುವ ಜೋಡಿ ಹಕ್ಕಿಗಳಂತಿದ್ದರು. ನಿಜದಲ್ಲಿ ಇಲ್ಲದ್ದನ್ನು ಕಲ್ಪನೆಯಲ್ಲಿ ಮೊಗೆದು ಮೊಗೆದು ತುಂಬಿಕೊಳ್ಳುತ್ತಿದ್ದರು; ಹನಿಹನಿಯಾಗಿ, ಕುಡಿತೆ ಕುಡಿತೆಯಾಗಿ, ಸವಿದು ಸುಖಿಸುತ್ತಿದ್ದರು.

ತಮ್ಮನ್ನೇ ತಾವು ಮರೆತಿದ್ದ ರತ್ನ–ಶ್ಯಾಮಲಾ, ಕುಸುಮ–ರಾಜ ಗೋಪಾಲರನ್ನು, ವಿರಾಮ ಕಾಲದ ನಡುವಿನ ಅಂತರದಲ್ಲಿ ಹೊರತು, ಉಳಿದಂತೆ ನೆನೆಯಲೂ ಇಲ್ಲ!

ಇತ್ತ ರಾಜಗೋಪಾಲ್ ಮತ್ತು ಕುಸುಮ ಚಿತ್ರದ ನೋಟದ ಸೊಬಗಿನಲ್ಲಿಯೇ ಆಗಲಿ, ತಮ್ಮ ತಮ್ಮಲ್ಲಿಯೇ ಆಗಲಿ ಮೈಮರೆತಿರಲು ಸಾಧ್ಯವಾಗಲಿಲ್ಲ. ಒಂದು ಕಡೆ, ಚಿತ್ರದ ಆಕರ್ಷಣೆ; ಇನ್ನೊಂದು ಕಡೆ ಪರಸ್ಪರ ಆಕರ್ಷಣೆ. ಲಜ್ಜೆಗಿಂತ ಹೆಚ್ಚಾಗಿ ಯಾವುದೋ ಭೀತಿ ಕುಸುಮನ ಮನಸ್ಸಿನ ಮುಂದೋಟಕ್ಕೆ ಅಂಕುಶವಿಟ್ಟು, ರಾಜುವಿನ ಸರಸ ಚೇಷ್ಟೆಗಳಿಗೆ ಉತ್ತೇಜನಕೊಡಲು ಹಿಂದೆಗೆದಳು; ಆದರೂ, ಅವನ ಕೈ ಒಮ್ಮೆ ಮೆಲ್ಲನೆ ಭುಜದ ಮೇಲೆ ಆಡಿದಾಗ, ತಬ್ಬಿಯೂ ತಬ್ಬದಂತೆ ನಡುವನ್ನು ಬಳಸಿ ಮೆಲ್ಲನೆ ಒತ್ತಿದಾಗ, ಅವಳ ಮೈಯ ಬಯಕೆಯನ್ನು ಮನಸ್ಸು ಬೇಡ ವೆಂದಿತು; ಕಲ್ಲು ಬೊಂಬೆಯಂತೆ ಕುಳಿತಿದ್ದಳು. ಅವಳ ಹೃದಯ ಮಾತ್ರ ಅಂಕೆಗೆ ಒಳಪಟ್ಟು ಇಮ್ಮಡಿಯ ವೇಗದಿಂದ ಹೊಯ್ದಾಡುತ್ತಿತ್ತು. ರಾಜುವಿಗೆ ಇದು ಅರಿವಿಗೆ ಬರುವುದು ಸಾಧ್ಯವಿರಲಿಲ್ಲ. ಅವನು ನಿರಾಶೆ ಗೊಂಡ; ಪ್ರತಿಭಟಿಸದ ನಿಶ್ಚಲ ಜೀವಂತ ಪುತ್ಥಳಿಯಿಂದ ಸನ್ನಿವೇಶ ಒದಗಿಸಿದಷ್ಟು ತೃಪ್ತಿಯನ್ನು ಪಡೆದ. ಆದರೆ, ತೃಷೆ ಹಿಂಗಲಿಲ್ಲ.

## ೬

ಡಾಕ್ಟರ್ ರಘುರಾಂ ಕಾರನ್ನು ಬೇಕೆಂದೇ ನಿಧಾನವಾಗಿ ಬಿಟ್ಟು ಕೊಂಡು ಹೋದರು. ತಾಯಿಯ ಎದುರಿಗೆ ಹೇಳದೆ ಉಳಿಸಿಕೊಂಡ ಮಾತು ಗಳು ಎಷ್ಟೋ ಅವನ ಹೃದಯದಲ್ಲಿ ಹುದುಗಿವೆ ಎಂದು ಅವರು ಊಹಿಸಿ ದ್ದರು. ಈಗ ಅವನ್ನು ಹೊರಕ್ಕೆ ಸೆಳೆಯುವ ಪ್ರಯತ್ನ ಮಾಡಿದರು.

ಹತ್ತು ನಿಮಿಷದಲ್ಲಿ ಗಾಯನ ಸಮಾಜ ಸೇರಬಹುದು; ಹೆಚ್ಚು ಹೊತ್ತಿಲ್ಲ; ಆ ಮಾತು, ಈ ಮಾತು ತೆಗೆಯದೆ, ಡಾಕ್ಟರ್ ನೇರವಾಗಿ ವಿಷಯ ಎತ್ತಿದರು.

"ಶಾಮಣ್ಣ ...."

"ಏನು, ಡಾಕ್ಟರೆ ?"

"ನಿಮ್ಮ ತಾಯಿಗೆ ಬೇಕಾದರೆ ನಿನ್ನ ಕಡೆಯ ತೀರ್ಮಾನವನ್ನು ನಾಳೆ ನಾಳಿದ್ದರಲ್ಲಿ ಯೋಚನೆ ಮಾಡಿ ತಿಳಿಸುವಿಯಂತೆ. ನಿನ್ನ ಮನಸ್ಸಿನ ಅಭಿಪ್ರಾಯ ಏನು ಎನ್ನುವುದನ್ನ ನನ್ನ ಹತ್ತಿರ ಸ್ಪಷ್ಟವಾಗಿ ತಿಳಿಸಬಹು ದಲ್ಲ ? ತಾಯಿಯ ಮನಸ್ಸು ನೊಂದೀತು ಅಂತ ನೀನು ಏನನ್ನೂ ಸ್ಪಷ್ಟ ವಾಗಿ ಹೇಳದೆ, ಸ್ವಲ್ಪ ಅಸಮ್ಮತಿಯನ್ನು ಸೂಚಿಸಿ, ಬಲವಂತಕ್ಕೆ ಒಪ್ಪಿ ಕೊಳ್ಳುವ ಹಾಗೆ ಮಾತಾಡಿದ್ದೀಯೇ. ನೀನು ತಾಯಿಯ ಬಲಾತ್ಕಾರಕ್ಕೆ ಒಪ್ಪಿ ಮದುವೆಯಾಗಿದ್ದೀ ಎನ್ನುವುದು ಅವರಿಗೆ ತಿಳಿದರೂ ಅವರು ನೊಂದು ಕೊಳ್ಳುತ್ತಾರೆ, ಮುಖ್ಯ, ನಿನ್ನ ಸಂತೋಷ ಅವರ ಸಂತೋಷ; ನಿನ್ನ ಸೌಖ್ಯ ಅವರ ಸೌಖ್ಯ. ನೀನು ಏನು ಹೇಳಿದರೂ ನಾನು ನೊಂದು ಕೊಳ್ಳುವ ಪ್ರಮೇಯ ಇಲ್ಲವಲ್ಲ! ನೀನು ಹೇಳುವುದು ನ್ಯಾಯವಾಗಿದ್ದರೆ ನಾನು ನಿಮ್ಮ ತಾಯಿಯ ಮನಸ್ಸನ್ನೇ ಬದಲಾಯಿಸಲು ಪ್ರಯತ್ನಿಸು ತ್ತೇನೆ. ಈಗ ಹೇಳು, ನಿನ್ನ ಸ್ಪಷ್ಟವಾದ ಅಭಿಪ್ರಾಯವನ್ನ."

"ಮೊದಲನೆಯದಾಗಿ, ನನ್ನ ವ್ಯಾಸಂಗ ಸಂಪೂರ್ಣವಾಗಿ ಮುಗಿ ಯುವವರೆಗೆ ನನಗೆ ಮದುವೆಯಾಗುವುದೇ ಇಷ್ಟವಿಲ್ಲ."

"ನೋಡಿದೆಯಾ, ಹೀಗೆ ಮಾತಾಡಬೇಕು. ಇದನ್ನ ನಾನು ಮೆಚ್ಚಿಕೊಂಡೆ. ಇದಕ್ಕೆ ಕಾರಣ ಏನು?"

"ಮದುವೆಯಾದರೆ ವ್ಯಾಸಂಗಕ್ಕೆ ಮನಸ್ಸನ್ನು ಸಂಪೂರ್ಣವಾಗಿ ಧಾರೆಯೆರೆಯುವುದು ಸಾಧ್ಯವಾಗುವುದಿಲ್ಲ; ಮನಸ್ಸು ಚಂಚಲವಾಗುತ್ತದೆ."

"ಮದುವೆಯಾಗದಿದ್ದರೂ ಮನಸ್ಸು ಚಂಚಲವಾಗಬಹುದಲ್ಲ ? ಈಗಿನ ಕಾಲದ ಸಿನಿಮಾ ಚಿತ್ರಗಳು, ಕಥೆ ಕಾದಂಬರಿಗಳು, ಪತ್ರಿಕೆಗಳ ಮೇಲೆ ಅಚ್ಚಾಗುವ ಚಿತ್ರಗಳು, ಅಷ್ಟೆಲ್ಲಾ ಯಾಕೆ, ಬೀದಿಯಲ್ಲಿ ಎಲ್ಲರೂ ನೋಡಿ ನಲಿಯಲಿ ಎಂದೇ ಅಲಂಕಾರ ಮಾಡಿಕೊಂಡು ಸುಳಿದಾಡುವ ಭೂಲೋಕದ ರಂಭೆ ಊರ್ವಶಿಯರು—ಇಷ್ಟೇ ಸಾಲದೆ ನಮ್ಮ ಮನಸ್ಸನ್ನು ಚಂಚಲಗೊಳಿಸುವುದಕ್ಕೆ ? ನೀನು ಡಾಕ್ಟರಾಗಿದ್ದರೆ ತಿಳಿಯುತ್ತಿತ್ತು, ಈ ಧರ್ಮ ಸಂಕಟ. ನಾನು ಎಷ್ಟು ಮಂದಿ ಹೆಂಗಸರನ್ನ ಹುಡುಗಿಯರನ್ನ—ಮೊಸರಿನವರು ಮುಸುರೆಯವರು ಮಾತ್ರ ಅಲ್ಲ—ಶ್ರೀಮಂತರ ಹೆಂಡಿರು ಮಕ್ಕಳು, ಪನ್ನೀರಿನಿಂದ ಕೈ ತೊಳೆದು ಮುಟ್ಟಬೇಕಾದವರು–ಇಂಥವರನ್ನ ನಾನು ನಿತ್ಯ ಮುಟ್ಟುವುದಿಲ್ಲ ? ಮುಟ್ಟಿದಾಗೆಲ್ಲ ಮೈ ಜುಂ ಅನ್ನಿಸಿ ಕೊಂಡರೆ ನಾನು ಬದುಕುವುದು ಹೇಗಯ್ಯ?" ಎಂದು ಡಾಕ್ಟರು ನಗೆಯಲೆ ಯೆರಡನ್ನು ತೇಲಿಸಿದರು.

"ಅಲ್ಲೇ ಇರುವುದು ಡಾಕ್ಟರೆ, ವ್ಯತ್ಯಾಸ. ನಿಮಗೆ ಹೆಣ್ಣಿನಲ್ಲಿ ವೈದ್ಯಕೀಯ ಆಸಕ್ತಿ,–ಅದಕ್ಕೇನು pathological interest ಅನ್ನುತ್ತೀರೋ?–ಅದು ಅಭ್ಯಾಸವಾಗಿರುತ್ತೆ. ನಿಮ್ಮ ಕೈಯಿ ಮೈಯಿ ಮನಸ್ಸು ಎಲ್ಲ ಜಡ್ಡುಗಟ್ಟಿ ಹೋಗಿವೆ. ನಮಗೆ ಹೇಗೆ ಹಾಗನ್ನಿಸಬೇಕು? ನಾವು ಮುಟ್ಟಿದರೆ ಮುನಿಯಂತೆ; ತುಂಬ ಎಚ್ಚರಿಕೆಯಿಂದಿರಬೇಕು."

"ನಾನು ಮೊದಲೇ ಹೇಳಿದೆನಲ್ಲ, ಈಗಿನ ನವನಾಗರಿಕತೆಯ ವಾತಾವರಣದಲ್ಲಿ ಎಚ್ಚರಿಕೆ ಹೇಗೆ ಸಾಧ್ಯ? ಹಗಲಿನಿಂದ ಗಂಡಸರ ತೋಳುಜ್ಜಿ ಹೋಗುವ ಹೆಂಗಸರೂ ಇದ್ದಾರೆ. ನಮ್ಮ ಮನಸ್ಸನ್ನೆ ಗಟ್ಟಿ ಮಾಡಿಕೊಳ್ಳಬೇಕಯ್ಯ."

"ನಾನೂ ಒಂದು ರೀತಿಯಲ್ಲಿ ಗಟ್ಟಿಮಾಡಿಕೊಂಡಿದ್ದೀನಿ ಅನ್ನಿ. ರೀತಿ ಬೇರೆ, ಅಷ್ಟೆ. ಕಾಫಿ ಕುಡಿಯುವ ಅಭ್ಯಾಸ ಇದ್ದು, ಕಾಫಿಯ

ಬಟ್ಟಲನ್ನು ಮುಂದೆ ಇಟ್ಟುಕೊಂಡು, ಕಾಫಿಯನ್ನು ಕುಡಿಯಬೇಡ ಅನ್ನುತ್ತೀರಿ ನೀವು. ಸಿಗರೇಟು ಸೇದುವವನಿಗೆ, ಸಿಗರೇಟು ಪ್ಯಾಕನ್ನು ಜೇಬಿನಲ್ಲಿಟ್ಟುಕೊಂಡು ಸಿಗರೇಟು ಸೇದಬೇಡ ಅಂದಹಾಗೆ. ವೇದಾಂತದ ಉಪದೇಶವನ್ನು ನಾನೂ ಬಲ್ಲೆ; ನೀರೊಳಗಿದ್ದೂ ನೀರಿಗೆ ಅಂಟದ ತಾವರೆ ಎಲೆಯಹಾಗೆ ಇರಬೇಕು ಅಂತ. ಈ ಉಪದೇಶ ನಿಮ್ಮಂಥವರಿಗೆ ಡಾಕ್ಟರೆ, ನನ್ನಂಥ ನವತರುಣನಿಗೆ ಅಲ್ಲ" ಎಂದು ಶಾಮಣ್ಣನೂ ಒಂದು ಸಲ ನಕ್ಕ.

ಶಾಮಣ್ಣನ ಮನಸ್ಸು ಸುಪ್ರಸನ್ನವಾಗಿದೆ ಎಂದು ಡಾಕ್ಟರು ಊಹಿಸಿದರು. ವಿಷಯಕ್ಕೆ ಪ್ರವೇಶವಾಗಿತ್ತೆ ಹೊರತು, ಇನ್ನೂ ಅದರ ಅಂಚನ್ನೂ ದಾಟಿರಲಿಲ್ಲ. ಮಾತು ಬೆಳೆಯುವುದಾಗಿ ಅವರಿಗೆ ತೋರಿತು; ವಿಷಯದ ಇತ್ಯರ್ಥಕ್ಕೆ ದೊರೆತಿರುವ ಸದವಕಾಶವನ್ನು ಬಿಡಬಾರದೆಂದು ಅನ್ನಿಸಿತು. ಇನ್ನು ಎರಡು ನಿಮಿಷಗಳಲ್ಲಿ ಗಾಯನ ಸಮಾಜ ಸಿಕ್ಕಿ ಬಿಡುವುದು. ಡಾಕ್ಟರು ಕಾರನ್ನು ಲಾಲ್‌ಬಾಗಿನ ಹಾದಿಯತ್ತ ಓಡಿಸಿದರು.

## ೧೦

ಚಿತ್ರದಲ್ಲಿನ ಪ್ರಣಯ ಸನ್ನಿವೇಶ ರಾಜಗೋಪಾಲ್ ಇದ್ದ ಸನ್ನಿವೇಶ ದಲ್ಲಿ ಚಿತ್ತ ವಿಭ್ರಾಮಕವಾಗಿತ್ತು. ಅಲ್ಲಿ ಕಥಾನಾಯಕ ತನ್ನ ನಲ್ಲೆಗೆ ನುಡಿದ ಇನಿಮಾತನ್ನು ರಾಜವೂ ತನ್ನ ಕೆಲದ, ನಲ್ಲೆಯೆಂದು ತಿಳಿಯ ತೊಡಗಿದ್ದ ಕುಸುಮನ ಕಿವಿಯಲ್ಲಿ ಮೆಲ್ಲನೆ ಉಸುರಿದ:

"I love you Kusum" (ನಾನು ನಿನ್ನನ್ನು ಪ್ರೀತಿಸುತ್ತೇನೆ, ಕುಸುಮ್).

ಹಾಗೆ ನುಡಿದ ತುಟಿಗಳು ಕುಸುಮನ ಕಿವಿಯ ತಣ್ಣನೆಯ ನುಣ್ಣನೆಯ ಅಂಚನ್ನು ಸೋಕಿದವು; ಬಳಿಯಲ್ಲೆ ಇದ್ದ ಬೆಚ್ಚನೆಯ ಕೆನ್ನೆ ಯನ್ನು ಮುತ್ತಿಡಬಯಸಿ, ಅಳುಕಿ, ಹಿಂದೆಗೆದವು; ನಿರಾಶೆಗೊಂಡವು.

"ಶ್ಯಾಮಲಾಗೆ ಕೇಳುತ್ತೆ, ರಾಜ್, Don't be foolish (ಅವಿವೇಕಿ ಯಂತೆ ವರ್ತಿಸಬೇಡ)" ಎಂದಳು ಕುಸುಮ, ಮೆಲ್ಲನೆ.

ಆದರೆ, ಚಿತ್ರದ ಅದೇ ಮಾತುಗಳಲ್ಲಿ ನಟ್ಟ ಮನಸ್ಸುಳ್ಳ ಶ್ಯಾಮಲೆಗಾಗಲಿ ರತ್ನನಿಗಾಗಲಿ ಅವುಗಳ ಪಡಿನುಡಿಗಳಂತಿದ್ದ ರಾಜುವಿನ ನುಡಿಗಳು ಕೇಳಲಿಲ್ಲ.

ಕುಸುಮನ ಈ ಮಾತುಗಳನ್ನು ಪ್ರೋತ್ಸಾಹದ ಮಾತುಗಳೆಂದು ರಾಜು ಭಾವಿಸಿದ. ತನ್ನ ಬಯಕೆ ತೀರುವ ಕಾಲ ಸಮೀಪಿಸುತ್ತಿದೆಯೆಂದು ನಲಿದ.

ಚಿತ್ರದಲ್ಲಿ ಮಳೆ ಬಿರುಗಾಳಿ ಭೋರ್ಗರೆಯುತೊಡಗಿತ್ತು. ನಿಜವಾಗಿ ಹೊರಗೂ ಮಳೆಗಾಳಿ ಮೊರೆಯುತ್ತಿತ್ತು. ಆದರೆ, ಒಳಗಿನ ಭೋರ್ಗರೆತ ದೊಂದಿಗೆ ಬೆರೆತು ಹೊರಗಿನ ಮೊರೆತ ಕೇಳುವಂತಿರಲಿಲ್ಲ.

ಇದ್ದಕ್ಕಿದ್ದಂತೆಯೇ ಚಿತ್ರ ಮಂದಿರ ಅಂಧಕಾರದಲ್ಲಿ ಮುಳುಗಿತು. ಹೊರಗಿನ ಸಿಡಿಲು ಮಳೆಯ ಹೊಡೆತದ ಪರಿಣಾಮವಾಗಿ ವಿದ್ಯುಚ್ಛಕ್ತಿ ನಿಂತುಹೋಗಿ ಚಿತ್ರ ನಿಂತು ಹೋಯಿತು; ಸಂಜೆಯು ಮುನ್ನವಾದರೂ, ಹೊರಗೆಲ್ಲ ಮಳೆ ಸುರಿಯುತ್ತಿದ್ದು, ಹಗಲ ಆಟವೆಂದು ಬಾಗಿಲುಗಳನ್ನೆಲ್ಲಾ ಭದ್ರಪಡಿಸಿದ್ದರಿಂದ, ತಕ್ಕಮಟ್ಟಿನ ಮಬ್ಬುಗತ್ತಲೆ ಚಿತ್ರಮಂದಿರದಲ್ಲಿ ಇಡಿದಿತ್ತು. ಒಂದು ನಿಮಿಷ ತಡವಾದರೆ, ಬಾಗಿಲುಗಳೆಲ್ಲಾ ತೆರೆಯಬಹುದು; ಇಲ್ಲವೇ ಮೇಣದಬತ್ತಿಗಳನ್ನು ಹಚ್ಚಬಹುದು; ಸಿಗರೇಟು ಸೇದುವವರು ಬೆಂಕಿಯಕಡ್ಡಿ ಗೀರಬಹುದು; ಮಧುರ ರಹಸ್ಯಕ್ಕೆ ಅವಕಾಶವಿಲ್ಲದೆ ಹೋಗಬಹುದು. ಭೋಗಿಗಳೆಲ್ಲ ಸಾಹಸಿಗಳೆ; ಅದರಲ್ಲಿ ಸಂದೇಹವಿಲ್ಲ. ರಾಜುವೂ ಸಾಹಸದಿಂದ ಕೈ ತುಡುಕಿದ; ದೊರೆತ ನಿಮಿಷಾರ್ಧವನ್ನು ರಸಪೂರ್ಣವಾಗಿ ಮಾಡಿಕೊಂಡ. ಕುಸುಮನ ಮುಖಕುಸುಮದ ಮಕರಂದ ತೃಷೆಗೊಂಡು ಕಾತರಿಸುತ್ತಿದ್ದ ತುಂಬಿಯ ಪಾನಕ್ಕಾಯಿತು.

ಅನಿರೀಕ್ಷಿತ ಆಕ್ರಮಣವನ್ನು ಕುಸುಮ ಸಹಿಸಿಕೊಳ್ಳಬೇಕಾಯಿತು; ಬಾಯಿ ಮುಚ್ಚಿಕೊಂಡು ಅನುಭವಿಸಿದ್ದನ್ನು ಬಾಯಿಬಿಟ್ಟು ಹೇಳಿ ಫಲವಿಲ್ಲವೆಂದು ಅವಳು ಸುಮ್ಮನಿದ್ದಳು.

ಕುಸುಮ–ರಾಜು ಇಬ್ಬರೂ ಒಂದು ನೂತನ ಅನುಭವ ಪ್ರಪಂಚಕ್ಕೆ ಕಾಲಿಟ್ಟಿದ್ದರು.

## ೧೧

"ಇದೇನು ಡಾಕ್ಟರೆ, ಲಾಲ್‌ಬಾಗ್ ಕಡೆಗೆ? ನನ್ನನ್ನು ಗಾಯನ ಸಮಾಜದಲ್ಲಿ ಬಿಟ್ಟುಬಿಟ್ಟು, ಬೇಕಾದರೆ ನೀವು ಅಲ್ಲಿಗೆ ಹೋಗಬಹುದಾಗಿತ್ತಲ್ಲ?" ಎಂದು ಕಾರು ಲಾಲ್‌ಬಾಗನ್ನು ಸಮೀಪಿಸುತ್ತಿದ್ದಾಗ ಶಾಮಣ್ಣ ಡಾಕ್ಟರನ್ನು ಪ್ರಶ್ನಿಸಿದನು.

"ಮೋಡ ಮುಚ್ಚಿದೆ. ಹವಾ ಸ್ವಲ್ಪ ಥಂಡಿಯಾಗಿದೆ. ಇನ್ನೊಂದು ಲೋಟ ಕಾಫಿ ಕುಡಿಯುವುದಕ್ಕೆ ಹಿತಕರವಾಗಿದೆ. ಹೌದೋ ಅಲ್ಲವೋ?" ಎಂದರು ಡಾಕ್ಟರು.

ಮೋಡಮುಚ್ಚಿ ಮಳೆ ಬರುವ ಸೂಚನೆ ಇದ್ದದ್ದು ದಿಟ; ಕಾಫಿಯ ಸೇವನೆಗೆ ಹವಾ ಹಿತಕರವಾಗಿದ್ದದ್ದೂ ನಿಜ; ಆದರೂ, ತನ್ನ ಸಂಗೀತದ ಕಾರ್ಯಕ್ರಮಕ್ಕೆ ಭಂಗತಂದು ತಮ್ಮ ಚಪಲ ತೀರಿಸಿಕೊಳ್ಳುವಷ್ಟು ಸ್ವಾರ್ಥಿಗಳಲ್ಲ ಡಾಕ್ಟರ್ ಎಂಬುದೂ ಅಷ್ಟೇ ಸತ್ಯ ಎಂದು ಶಾಮಣ್ಣನಿಗೆ ಗೊತ್ತಿತ್ತು. ಇದೆಲ್ಲಾ ತನ್ನಿಂದ ಒಂದು ಸ್ಪಷ್ಟವಾದ ಉತ್ತರವನ್ನು ಪಡೆಯಲು ಡಾಕ್ಟರು ಮಾಡುತ್ತಿರುವ ಸನ್ನಾಹ, ಅಥವಾ ಪಡುತ್ತಿರುವ ಪೇಚಾಟ ಎಂದು ಮನವರಿಕೆಯಾಯಿತು. ಸ್ಪಷ್ಟವಾದ, ನೇರವಾದ ಪ್ರಶ್ನೆಗಳಿಗೆ ತಾನು ಅಂತಹ ಉತ್ತರಗಳನ್ನೇ ಕೊಡಲು ಎಂದೂ ಸಿದ್ಧ; ಸುತ್ತಿಬಳಸಿ ಮಾತನಾಡುತ್ತಿದ್ದವರು ಡಾಕ್ಟರೆ. ಇದೇಕೆ ಇಷ್ಟೊಂದು ತೊಂದರೆ ತೆಗೆದುಕೊಳ್ಳುತ್ತಿದ್ದಾರೆ ಎಂದು ಅವನಿಗೆ ಆಶ್ಚರ್ಯವಾಯಿತು. ಯಾವಾಗಲೂ ಬುದ್ಧಿವಂತರಾದ ವಯಸ್ಸಾದವರು ತರುಣರಂತಲ್ಲ, ವಿಷಯಕ್ಕೆ 'ಧುಡುಂಪ್ರವೇಶ' ಮಾಡಿ ನೇರವಾಗಿ ಮಾತಾಡುವ ಹೆಸರಿನಲ್ಲಿ ಹೆರರ ಮನಸ್ಸು ನೋಯಿಸಲು ಹಿಂದೆಗೆಯುತ್ತಾರೆ, ಈ ಸಮಯೋಪಾಯ ಕೌಶಲವು (Tact) ಜನಜಂಗುಳಿಯೊಂದಿಗೆ ನಿತ್ಯವೂ ವ್ಯವಹರಿಸುವ ವೈದ್ಯರಿಗೆ ಸ್ವಾಭಾವಿಕ ಎಂದು ತಿಳಿಯುವಷ್ಟು ಲೋಕ ಪರಿಜ್ಞಾನ ಪುಸ್ತಕಪ್ರಪಂಚಿಯಾದ ಶಾಮಣ್ಣನಿಗೆ ಎಲ್ಲಿಂದ ಬರಬೇಕು?

"ಮಾತಿನ ಬಳಸಾಟದ ಜೊತೆಗೆ ಈ ಲಾಲ್‌ಬಾಗಿನ ಸುತ್ತಾಟ ಬೇರೆ ಏಕೆ, ಡಾಕ್ಟರೆ? ನೀವು ಆಗಲೇ ನೇರವಾಗಿ ಎರಡು ಪ್ರಶ್ನೆ ಕೇಳಿ ಬಿಟ್ಟಿದ್ದರೆ ನಾನೂ ಅಷ್ಟೇ ನೇರವಾಗಿ ಸ್ಪಷ್ಟವಾಗಿ ಉತ್ತರ ಕೊಟ್ಟು ಬಿಡುತ್ತಿದ್ದೆ...." ಎಂದ ಶಾಮಣ್ಣ, ಸ್ವಲ್ಪ ಹೊತ್ತಿನ ಮೌನ ಕಳೆದ ಬಳಿಕ.

ಇಷ್ಟು ಹೊತ್ತಿಗೆ ಕಾರು ಲಾಲ್‌ಬಾಗನ್ನು ಪ್ರವೇಶಿಸಿತ್ತು.

"ಇದೇನು ಕೋರ್ಟೆ? ಅಥವಾ ನನ್ನ Consulting Roomಸೋ (ರೋಗಿಗಳ ಪರೀಕ್ಷೆಯ ಕೋಣೆ). ನೇರವಾದ ಪ್ರಶ್ನೆಗಳನ್ನು ಹಾಕಿ ಸರಳವಾದ ಉತ್ತರಗಳನ್ನು ಪಡೆಯುವುದಕ್ಕೆ? ಅಥವಾ ನಾಟಕವೋ? ಎಷ್ಟೋ ಅಷ್ಟೇ ಮಾತಾಡುವುದು ಪಾರ್ಲಿಮೆಂಟ್ ಒಂದರಲ್ಲೇ ಅಂತ ಕಾಣುತ್ತೆ. ಅಲ್ಲೂ ಕೂಡ ನಾಲಗೆಯ ಮೇಲೆ ಅಂಕೆ ಇಟ್ಟುಕೊಳ್ಳುವುದು ಕಷ್ಟ. Point of order ಎತ್ತುತ್ತಾನೆ ಇರುತ್ತಾರೆ. ಅಲ್ಲದೆ ಇವೊತ್ತು ಮಳೆ ಬರುವ ಹಾಗೆ ಬೇರೆ ಇದೆ. ಸಂಗೀತ ಕಛೇರಿ ಸ್ವಲ್ಪ ಹೊತ್ತಾಗಿ ಮಳೆ ನಿಂತ ಮೇಲೆ ಪ್ರಾರಂಭವಾದರೂ ಆಗಬಹುದು. ಗಾಯನ ಸಮಾಜದ ಜಿಂಕ್‌ಷೀಟ್ ಮೃದಂಗದ ಜೊತೆಗೆ ಹಾಡೋ ಭೂಪತಿ ಯಾರಯ್ಯ?........"

ಕಾರು ಲಾಲ್‌ಬಾಗಿನ ಹೋಟಲ ಮುಂದೆ ನಿಂತಿತು. ಡಾಕ್ಟರವ ರೊಂದಿಗೆ ಶಾಮಣ್ಣನೂ ಹೋಟಲನ್ನು ಪ್ರವೇಶಿಸಿದನು. ಡಾಕ್ಟರು ಎರಡು ಕಪ್ 'ಸ್ಪೆಷಲ್' ಕಾಫಿ ತರಿಸಿದರು. ಇಬ್ಬರೂ ಕುಡಿಯ ತೊಡಗಿದರು.

ಕಾಫಿ ಕುಡಿಯುತ್ತಿದ್ದಾಗಲೇ ತಟಪಟನೆ ಹನಿಯತೊಡಗಿತು. ಕಾಫಿ ಕುಡಿದಾದ ಮೇಲೆ, "ಏಳೆಂಟು ಜನ ಇರುವ ಈ ಹೋಟಲಿನಲ್ಲಿ ಏಕಾಂತ ವಾಗಿ ಮಾತಾಡಲಾಗುವುದಿಲ್ಲ. ಇನ್ನು ಗಾಯನ ಸಮಾಜದ ಸಂಗೀತದ ನಡುವೆ ನಾವು ಮಾತಾಡುವುದಕ್ಕಾಗುತ್ತಿತ್ತೆ?" ಎನ್ನುತ್ತ, ಹೋಟಲ ಹಣ ಕೊಟ್ಟು, ಕಾರಿನ ಬಳಿಗೆ ನಡೆದರು. "ಮಳೆ ನಿಲ್ಲುವವರೆಗೂ ಕಾರಿನಲ್ಲೇ ಬೆಚ್ಚಗೆ ಕುಳಿತು ಮಾತಾಡೋಣ. ನೀನು ಹೇಳಿದ ಹಾಗೆ, ಇನ್ನು ಬಳಸುವಂತಿಲ್ಲ. ನಿಂತಕಡೆ ನಿಂತ ಪುಟ್ಟ ಕಾರಿನಲ್ಲಿ ಬಳಸಾಟ ಸುತ್ತಾಟ ಸಾಧ್ಯವಿಲ್ಲ ನೋಡು?" ಎಂದು ಡಾಕ್ಟರು ಕಾರಿನ ಹಿಂದಣ

ಪೀಠದ ಕಡೆಯ ಬಾಗಿಲನ್ನು ತೆರೆದರು. ಶಾಮಣ್ಣ ಒಳಕ್ಕೆ ಹೋಗಿ ಕುಳಿತ; ಡಾಕ್ಟರೂ ಅವನ ಪಕ್ಕದಲ್ಲಿ ಕುಳಿತರು.

ಡಾಕ್ಟರೇ ಮಾತಿಗೆ—ಶಾಮಣ್ಣ ಬಯಸಿದಂಥ ನೇರವಾದ ಮಾತಿಗೆ—ಮೊದಲಿಟ್ಟರು:

''ಈಗ ನಾನು ಕೇಳುವ ಪ್ರಶ್ನೆಗೆ ನೀನು ಯಾವ ಸಂಕೋಚವೂ ಇಲ್ಲದೆ ಉತ್ತರ ಹೇಳಬೇಕು, ತಿಳಿಯಿತೇ? ನಾನೇ ನಿನ್ನ ದಾರಿಗೆ ಬರುತ್ತೇನೆ. ನಿನ್ನ ಕಡೆಯ ತೀರ್ಮಾನ ನಿಮ್ಮ ತಾಯಿಗೆ ತಲಪುತ್ತದೆಯೇ ಹೊರತು ನಾವು ಆಡಿದ ಮಾತೆಲ್ಲ ಅಲ್ಲ. ಆದ್ದರಿಂದ, ನಿಮ್ಮ ತಾಯಿಯ ಮನಸ್ಸು ನೋಯುತ್ತೆ ಅನ್ನುವ ಹೆದರಿಕೆಯಿಲ್ಲದೆ ಹೇಳು.

"ಮೊದಲನೆಯದಾಗಿ, ಮದುವೆಮಾಡಿಕೊಳ್ಳುವುದರಿಂದ ವ್ಯಾಸಂಗಕ್ಕೆ ಅಡ್ಡಿಯಾಗುವಂತೆ ಮಾಡುವುದಿಲ್ಲ ಎಂದು 'ಗ್ಯಾರಂಟಿ' (ಖಾತರಿ) ಕೊಟ್ಟರೆ ನೀನು ಮದುವೆಯಾಗಲು ಒಪ್ಪುತೀಯೋ?''

"ಅಡ್ಡಿಮಾತ್ರವಲ್ಲ, ನಾನು ಇಷ್ಟಪಡುವ ರೀತಿಯ ವ್ಯಾಸಂಗಕ್ಕೂ ನಾನು ಮದುವೆಯಾಗುವುದರಿಂದ ಅನುಕೂಲವೇ ಆಗುತ್ತದೆ ಅಂತ ಕಂಡು ಬಂದರೆ, ನಾನು ಮದುವೆಗೆ ಒಪ್ಪುತ್ತೇನೆ."

"ಅಂದರೆ........?" ಎಂದು ಡಾಕ್ಟರು ಸಂದೇಹದ ಪ್ರಶ್ನೆಯೆತ್ತಿ, ಅರ್ಥವಿವರಣೆಯನ್ನು ಬಯಸಿದರು.

"ಅಂದರೆ, ಇಂಗ್ಲೆಂಡಿಗೊ ಅಮೇರಿಕಾಕ್ಕೊ ಹೋಗಿ ನನ್ನ ವ್ಯಾಸಂಗ ಮುಂದುವರಿಸಲು ಧನಸಹಾಯ ನನಗೆ ದೊರೆಯಬೇಕು."

"ಒಬ್ಬ ಶ್ರೀಮಂತನಾದ ಮಾವ ದೊರೆಯಬೇಕು ಅಂದ ಹಾಗಾಯಿತು."

"ನಾನು ಮೊದಲೇ ಹೇಳಿದೆನಲ್ಲ, ಬಡವರ ಮಗಳಾದರೂ ಆಗುತ್ತೆ...." ನನಗೆ ಮಾವನ ಹಣ ತೆಗೆದುಕೊಳ್ಳಲು ಇಷ್ಟ ಇಲ್ಲ.''

"ಅಂದರೆ, ಸ್ವಂತ ವೆಚ್ಚದಲ್ಲಿ ಹೋಗಬೇಕು ಅಂತ ನಿನ್ನ ಇಷ್ಟವೋ?

"ಹೌದು. ನನ್ನ ಪಾಲಿಗೆ ನಮ್ಮ ತಂದೆಯ ಹಣ ಒಂದಿಷ್ಟು ಬರುತ್ತದೆಯೋ ಇಲ್ಲವೋ, ಅದನ್ನು ಬಳಸಿಕೊಳ್ಳಬೇಕೆಂದು ನನ್ನ ಇಷ್ಟ. ನಮ್ಮ ತಾಯಿಗೆ ಅದು ಇಷ್ಟವಿಲ್ಲ."

"ನಿಮ್ಮ ತಾಯಿಗೆ ಇಷ್ಟವಿಲ್ಲದೆ ಇರುವುದಕ್ಕೆ ಕಾರಣ ಅದಲ್ಲ. ನಿನಗಾಗಿ ಅವರು ಎಷ್ಟು ಹಣ ಬೇಕಾದರೂ ಖರ್ಚುಮಾಡಲು ಸಿದ್ಧವಾಗಿದ್ದಾರೆ. ನೀನು ಸೀಮೆಗೆ ಹೋಗುವುದೇ ಅವರಿಗೆ ಇಷ್ಟವಿಲ್ಲ. ನೀನು ಮದುವೆ ಮಾಡಿಕೊಂಡುಬಿಟ್ಟರೆ, ಹೋಗಲು ಒಪ್ಪಿದರೂ ಒಪ್ಪಬಹುದು."

ಶಾಮಣ್ಣ ಸ್ವಲ್ಪ ಹೊತ್ತು ಮೌನವಾಗಿದ್ದ. ಮೌನದ ಗರ್ಭದಲ್ಲಿ ಆಲೋಚನೆಯ ಮಥನ ನಡೆದು, ನಿರ್ಧಾರ ಮೊಳೆಯಿತು:

"ಆಗಬಹುದು" ಎಂದು ಒಪ್ಪಿಬಿಟ್ಟ.

"ಅಂದರೆ, ಸೀಮೆಗೆ ಹೋಗಲು ಅವಕಾಶ ಕೊಡುವ ಕಂಡೀಷನ್ ಮೇಲೆ, ನೀನು ಮದುವೆಗೆ ಒಪ್ಪಿದ ಹಾಗಾಯಿತು. ಇನ್ನು ಹೆಣ್ಣು ಯಾವುದು ಎನ್ನುವ ಪ್ರಶ್ನೆ. ನೀನು ಸೀಮೆಗೆ ಹೋಗಿ ಹಿಂದಿರುಗುವಷ್ಟರಲ್ಲಿ ರತ್ನನ್ನ ಇಂಟರ್‌ಮಿಡಿಯಟ್ ಓದಿಸಿ, ಅವಳಿಗೆ ಸಂಗೀತ ಶಿಕ್ಷಣವನ್ನು ಕೊಡಿಸಿದರೆ, ರೂಪವತಿಯೂ ಆದ ಅವಳು ನಿನಗೆ ಯೋಗ್ಯಳಾಗುತ್ತಾಳೆ, ಅಲ್ಲವೆ?"

"ನಾನು ಮೊದಲೇ ಹೇಳಿದೆನಲ್ಲ, ರತ್ನನ್ನ ನಾನು ಒಲ್ಲೆ ಅಂತ."

"ಎಲ್ಲ ಒಪ್ಪಿ ಕೊನೆಗೆ Cripp's Mission ಆದಹಾಗೆ ಆಗಬಾರದು, ಶಾಮ್! ಅವಳ ವಿದ್ಯೆ ಸಂಗೀತ—ಎರಡೂ ನಿನ್ನ ಅಪೇಕ್ಷೆಯ ಮಟ್ಟಕ್ಕೆ ಬಂದ ಮೇಲೆ, ನಿನ್ನ ಆಕ್ಷೇಪಣೆ ಏನು?"

"ಅವಳು ರೂಪವತಿಯಾಗಿದ್ದಾಳೆ ಅನ್ನುವುದೇ ನನ್ನ ಆಕ್ಷೇಪಣೆ."

ಡಾಕ್ಟರು ಗೊಳ್ಳನೆ ನಕ್ಕರು.

"ಇಂಥ ಮಾತನ್ನ ನಿನ್ನಿಂದಲೇ ನಾನು ಮೊದಲು ಕೇಳುತ್ತಾ ಇರುವುದು! ಭೇಷ್! ಬಹಳ ಚೆನ್ನಾಗಿದೆ. ಅಷ್ಟಾವಕ್ರನ ಹಾಗೆ ಇರುವ ತರುಣರು, ಹೆಣ್ಣಿನ ಇಷ್ಟಕ್ಕೆ ವಿರುದ್ಧವಾಗಿ, ಸ್ಫುರದ್ರೂಪಿಯಾದ ಹೆಣ್ಣುಗಳನ್ನ ಮದುವೆಯಾಗಿರುವ ಸಂದರ್ಭ ಎಷ್ಟು ಇಲ್ಲ? ನೀನೇನು ಕುರೂಪಿಯೇ? ಬಣ್ಣ ಕಪ್ಪಾದ ಮಾತ್ರಕ್ಕೆ ಏನು? ಹಾಗೆ ನೋಡುವುದಕ್ಕೆ ಹೋದರೆ ರಾಜು ತೆಳ್ಳಗೆ ಬೆಳ್ಳಗೆ ಇದ್ದಾನೆಯೇ ಹೊರತು ನಿನ್ನ ಮುಖದ ಮಾಟ, ಗೆಲವು, ಗಂಭೀರ ಅವನಿಗೆಲ್ಲಿ ಬರಬೇಕು?"

"ಸಾವಿರ ಡೊಂಕನ್ನ ಒಂದು ಬಣ್ಣ ಮುಚ್ಚಿಬಿಡುತ್ತೆ ಅಂತ ನಮ್ಮ

ತಾಯಿಯೇ ಹೇಳಿರುವುದನ್ನ ನಾನು ಕೇಳಿದ್ದೇನೆ. ರತ್ನನಿಗೆ ತಕ್ಕ ವರ ನಾನಲ್ಲ. ಒಂದು ವೇಳೆ ನನ್ನನ್ನ ಅವಳು ಒಪ್ಪಿದರೂ, ಅವಳು ನನಗೆ ಬೇಡ. ಅಷ್ಟು ರೂಪವತಿ ಖಂಡಿತ ನನಗೆ ಬೇಡ."

"ಒಳ್ಳೆ ಗಂಡಸು ಕಣಯ್ಯ ನೀನು!"

"ದಾರಿ ತಪ್ಪುವ ಹೆಣ್ಣನ್ನ ಎಂಥ ಗಂಡಸೇ ಆದರೂ ತಡೆದು ಹಿಡಿಯಲು ಸಾಧ್ಯವಿಲ್ಲ."

"ಏನೂ ಅರಿಯದ ಹುಡುಗಿ ರತ್ನನ ವಿಷಯದಲ್ಲಿ ಇಂಥ ಮಾತು ಹೇಳಬಹುದೇನಯ್ಯ ?"

"ಛೆ ಛೇ—ರತ್ನ ಅಂಥವಳು ಅಂತ ನನ್ನ ಅಭಿಪ್ರಾಯವಲ್ಲ. ಅವಳನ್ನು ನಾನು ಕಾಣೆನೆ? ನಾವು ಒಟ್ಟಿಗೆ ಆಡಿ ಬೆಳೆದವರು. ನನ್ನಂಥವನು ಬಹು ರೂಪವತಿಯನ್ನು ಮದುವೆಯಾಗಬಾರದು. ರತ್ನ ಒಳ್ಳೆಯವಳೆ. ನನ್ನನ್ನು ಮದುವೆಯಾಗಿ ಅವಳು ವ್ಯಥೆಪಡುವ ಹಾಗಾಗಬಾರದು. ದುಃಖಗೊಂಡ ಮನಸ್ಸು, ನಿರಾಶೆಗೊಂಡ ಮನಸ್ಸು. ಅದರ ಮುಂದಿನ ಗತಿ ಕಂಡವರು ಯಾರು? ನೀವು ಕೇಳಿಲ್ಲವೇ ಡಾಕ್ಟರೆ, 'ಭಾರ್ಯಾ ರೂಪವತೀ ಶತ್ರು' ಅಂತ? ಅದರಲ್ಲಿಯೂ ನನ್ನಂಥವನ ವಿಚಾರದಲ್ಲಿ ಈ ಮಾತು ಶತಸ್ಸಿದ್ಧ."

"ನಿನ್ನ ಮಾತನ್ನ ನಾನು ಒಪ್ಪುವುದಿಲ್ಲ, ನಿನಗೆ ಲೋಕಾನು ಭವವೂ ಸಾಲದು, ಹೆಣ್ಣಿನ ಸ್ವಭಾವವೂ ತಿಳಿಯದು. ಗಂಡ ಸಾಮಾನ್ಯ ವಾಗಿದ್ದು, ಹೆಂಡತಿ ಚೆಲುವೆಯಾಗಿದ್ದು ಅನ್ಯೋನ್ಯವಾಗಿರುವ ದಾಂಪತ್ಯ ಎಷ್ಟು ಸಂಸಾರಗಳಲ್ಲಿ ಇಲ್ಲ? ತಾರುಣ್ಯದಲ್ಲಿ ಹೆಣ್ಣು ಚೆಲುವನಾದ ಗಂಡನನ್ನು ಬಯಸಬಹುದು. ಒಂದು ಮಗುವಾದ ಮೇಲೆ ಹೆಣ್ಣಿನ ಆಶೆ ಆಕಾಂಕ್ಷೆಗಳೆಲ್ಲ ಮಕ್ಕಳಲ್ಲಿ ತಿರುಗಿ ನೆಲಸಿಬಿಡುತ್ತವೆ. ಹೆಣ್ಣು ಗಂಡಿನಿಂದ ಬಯಸುವುದು ಒಡವೆ, ವಸ್ತ್ರ, ತನ್ನ ರೂಪಿನ ಹೊಗಳಿಕೆ, ತನ್ನ ಮಕ್ಕಳ ಲಾಲನೆಪಾಲನೆ, ನೆಮ್ಮದಿಯಾದ ಜೀವನ—ಇಷ್ಟು. ಪುರುಷನಲ್ಲಿ ಪೌರುಷ, ಗಂಡುಸುತನ ಇದ್ದರೆ ಹೆಣ್ಣಿಗೆ ಮೆಚ್ಚೇ ಹೊರತು ತೆಳ್ಳಗೆ ಬೆಳ್ಳಗೆ ಇದ್ದರೆ ಅಂಥವನನ್ನ ಹೆಣ್ಣಿಗ ಅಂತ ತಿಳಿದುಕೊಳ್ಳುತಾರಯ್ಯ. ನಿನ್ನ ಪ್ರಾಚೀನ ಶ್ಲೋಕದ ವಾಕ್ಯ ಇದೆಯಲ್ಲ, ಅದು ಪೂರ್ವಕಾಲಕ್ಕೆ ಹೇಳಿದ ಮಾತು. ದುಷ್ಟರು, ಪುಂಡರು ಪೋಕರಿಗಳು ರತ್ನರಾಶಿಯನ್ನ ವರೋಡೆ

ಮಾಡುವಹಾಗೆ ರತ್ನದಂಥ ಹುಡುಗಿಯರನ್ನೂ ದರೋಡೆಮಾಡುತ್ತ ಇದ್ದರು. ಈಗಿನ ಕಾಲದಲ್ಲಿ ಅದೆಲ್ಲ ನಡೆಯುವುದಿಲ್ಲ. ನಿಮ್ಮ ರತ್ನನಂಥ ಹುಡುಗಿಯರಿಗೇನೂ ಭಯವಿಲ್ಲ. ಓದಿದವರು, ತಿಳಿವಳಿಕೆ ಹೊಂದಿದವರು, ದಾರಿ ತಪ್ಪುತ್ತಾರೆ ಎಂದರೆ ನಾನು ನಂಬುವುದಿಲ್ಲ. ಅಲ್ಲದೆ, ದಾರಿ ತಪ್ಪುವುದಕ್ಕೂ ವಿದ್ಯೆಗೂ ಯಾವ ಸಂಬಂಧವೂ ಇಲ್ಲ. ರತ್ನ ರೂಪವತಿ, ಆದ್ದರಿಂದ ಬೇಡ ಅನ್ನುವ ನಿನ್ನ 'ಆರ್ಗ್ಯುಮೆಂಟನ್ನ' (ವಾದವನ್ನು) ನಾನು ಒಪ್ಪುವುದಿಲ್ಲ. ನಿನಗೆ ಕಪ್ಪು ಹುಡುಗಿಯೇ ಇಷ್ಟವಾದರೆ ಹೇಳು, ನನ್ನ ರೋಗಿಗಳನ್ನ ವಿಚಾರಿಸಿ ಎಲ್ಲಾದರು 'ತಲಾಷ್' ಮಾಡುತೇನೆ" ಎಂದು ಡಾಕ್ಟರು ತಮ್ಮ ಮಾತನ್ನು ಗಟ್ಟಿಯಾದ ನಗುವಿನೊಡನೆ ತಟ್ಟನೆ ನಿಲ್ಲಿಸಿದರು.

ಅದೇ ತಾನೆ ಮಳೆಯೊಂದಿಗೆ ಗುಡುಗೂ ಕೇಳಿಬಂದಿತು. ಹೊರಗಿನ ಮಳೆಗಿಂತ ಡಾಕ್ಟರ ಮಾತಿನ ಮಳೆಯೇ ಪ್ರಬಲತರವಾಗಿ ತೋರಿತು ಶಾಮಣ್ಣನಿಗೆ.

ಶಾಮಣ್ಣ ರೂಪದ್ವೇಷಿಯೇನಾಗಿರಲಿಲ್ಲ. ಆದರೆ, ಅವನು ಹೇಳಿದ ಶ್ಲೋಕಖಂಡದ ಅರ್ಥದಲ್ಲಿ ಅವನು ಸಂಪೂರ್ಣ ನಂಬಿಕೆಯಿಟ್ಟಿದ್ದನು. ಅದನ್ನು ಅವನು ತ್ಯಜಿಸಲು ಸಿದ್ಧನಾಗಿರಲಿಲ್ಲ. ಆದರೆ, ಡಾಕ್ಟರ ವಾದವನ್ನೂ ಅವನು ಅಲ್ಲಗಳೆಯುತ್ತಿರಲಿಲ್ಲ. ಆದ್ದರಿಂದ, ಸದ್ಯಕ್ಕೆ ಮರುಮಾತಾಡಲು ತೋಚದೆ, ವಾದದಲ್ಲಿ ಸೋಲನ್ನು ಒಪ್ಪಿದವನಂತೆ ಸ್ತಬ್ಧನಾಗಿ ಕುಳಿತಿದ್ದನು.

ಮಾತನ್ನು ನಿಲ್ಲಿಸಿದ್ದ ಡಾಕ್ಟರು ಮೌನಮುದ್ರಿತವಾದ ಅವನ ಮುಖವನ್ನೊಮ್ಮೆ ರೋಗಿಯ ಮುಖವನ್ನು ಪರೀಕ್ಷಿಸಿ ನೋಡುವಂತೆ ದೃಷ್ಟಿಸಿದರು. ತಮ್ಮ ಮಾತು ಅವನ ಮೇಲೆ ಸ್ವಲ್ಪ ಪ್ರಭಾವ ಬೀರಿದೆಯೆಂದುಕೊಂಡು, ತಮ್ಮ ವಾದವನ್ನು ಇನ್ನಷ್ಟು ಪುಷ್ಟಿಗೊಳಿಸಿದರು :

"ಅಷ್ಟೇ ಅಲ್ಲ, ಶಾಮ್. ನಮ್ಮವರು ಹಿಂದೆ ಜಾತಕಾನುಕೂಲ, ಮನೆತನ, ಹೆಣ್ಣುಗಂಡಿನ ದೇಹದಾರ್ಢ್ಯ ಇವಕ್ಕೆ ಹೆಚ್ಚು ಗಮನ ಕೊಡುತ್ತಿದ್ದರು. ಅವರ ದೃಷ್ಟಿಯಲ್ಲಿ ಯಾವಾಗಲೂ ಹೆಣ್ಣಿನ ರೂಪಿಗೇ ಮಹತ್ವ. ಗಂಡು ಹೇಗಿದ್ದರೂ ಪರವಾಯಿಲ್ಲ ಅಂತ ತಿಳಿದಿದ್ದರು. ಆ ದೃಷ್ಟಿಯೇ ಸರಿ ಅಂತ ನನಗೆ ತೋರುತ್ತೆ. ಅಲ್ಲದೆ, ಅನುರೂಪ್ಯ ಕೂಡಿಬರುವುದು ತುಂಬ ಕಷ್ಟ ಕಣಯ್ಯ. ಜನಾಂಗದ ಬೆಳವಣಿಗೆಯ ದೃಷ್ಟಿಯಿಂದಲೂ ಅದು ಒಳ್ಳೆಯದಲ್ಲ.

ಕಪ್ಪು ಬಿಳಿಪು ಮಿಶ್ರವಾಗುತ್ತ ಹೋಗಬೇಕಯ್ಯ; ರೂಪಕುರೂಪವೂ ಅಷ್ಟೆ. ಕುರೂಪಿಗಳನ್ನೆಲ್ಲಾ ಕೊಲ್ಲುವುದಕ್ಕಾಗುತ್ತದೆಯೆ? ನಾನು ಹೇಳಿದ್ದು ನಿನಗೆ ಒಪ್ಪಿತವಾಯಿತೋ ಇಲ್ಲವೋ?"

"ಒಪ್ಪಿತವಾಯಿತು. ಆದರೆ ರತ್ನನ್ನ ಮದುವೆಯಾಗಲು ನನಗೆ ಇಷ್ಟ ಇಲ್ಲದಿರುವುದಕ್ಕೆ ಇನ್ನೂ ಒಂದು ಕಾರಣ ಇದೆ. ಅದನ್ನ ನೀವೂ ಒಪ್ಪುತ್ತೀರಿ...."

"ಏನು?" ಎಂದರು ಡಾಕ್ಟರ್, ತೀವ್ರ ಕುತೂಹಲದಿಂದ.

"ನಾನು ರತ್ನನ್ನ ಮೊದಲಿಂದಲೂ ತಂಗಿಯ ಹಾಗೆ ಭಾವಿಸಿಕೊಂಡಿದ್ದೇನೆ."

"ಅದು ಇರಬಹುದು. ಈಚೆಗೆ ಅನೇಕ ವರ್ಷಗಳಿಂದ ನಿಮ್ಮ ಮನೆಯಲ್ಲಿ ಬೆಳೆದವಳು. ಆದರೆ ಸೋದರಮಾವನ ಮಗಳು ಎಂದಿದ್ದರೂ ಹೆಂಡತಿಯೇ ಅನ್ನುವುದು ನಿನಗೆ ಹೊಳೆಯಲಿಲ್ಲವೇನಯ್ಯ?"

"ಈ ಮಧುವೆ, ಹೆಂಡತಿ ಎನ್ನುವ ಭಾವನೆ ಯಾವಾಗಲೂ ನನ್ನ ಮನಸ್ಸಿನಲ್ಲಿ ಸುಳಿದೇ ಇಲ್ಲ. ಅಲ್ಲದೆ, ಅವಳಲ್ಲೂ ನನ್ನಲ್ಲೂ ಅವಳಿಗೂ ರಾಜುವಿಗೂ ಬೆಳೆದು ಬಂದ ಸಲಿಗೆ ಬೆಳೆದು ಬರಲಿಲ್ಲ. ನಾನಾಯಿತು, ನನ್ನ ಓದಾಯಿತು. ಆಟ ಪಾಟ ನೋಟ ಎಲ್ಲದರಲ್ಲೂ ಅವರಿಬ್ಬರೂ ಯಾವಾಗಲೂ ಜೊತೆ...."

"ಇದಕ್ಕೆ ಕಾರಣ ಏನು ಎನ್ನುವುದು ನಿನಗೆ ಗೊತ್ತೆ, ಶಾಮ್?"

"ಇಲ್ಲ. ಹೊಳೆದಿಲ್ಲ."

"ರಾಜು ರತ್ನ ಇಬ್ಬರೂ ಒಂದೇ ವಯಸ್ಸಿನವರು. ಆದಕಾರಣ ಸುಲಭವಾಗಿ ಆಟಪಾಟಗಳಲ್ಲಿ ಕಲೆತರು. ನಿನಗೂ ಅವಳಿಗೂ ಐದಾರು ವರ್ಷಗಳ ಅಂತರ ಇದೆ. ಅಲ್ಲದೆ, ನಿನ್ನ ಮನಸ್ಸಿನಲ್ಲಿ ಹೆಂಡತಿ, ಮದುವೆ ಈ ಭಾವನೆಗಳು ಸುಳಿಯದೆ ಇರಬಹುದು. ಆದ ಮಾತ್ರಕ್ಕೆ ರತ್ನನ ಮನಸ್ಸಿನಲ್ಲಿ ಬಂದಿಲ್ಲ ಅಂದುಕೊಳ್ಳಬೇಡ. ಅವಳು ನಿನ್ನನ್ನ ಗಂಡ ಅಂತಲೂ, ರಾಜುವನ್ನ ಅಣ್ಣ ತಮ್ಮ ಅಂತಲೋ ತಿಳಿದುಬಿಟ್ಟಿದ್ದಾಳೆ. ಅದಕ್ಕೇ ಅವನೊಂದಿಗೆ ಸಲಿಗೆ; ನಿನ್ನೊಂದಿಗೆ ಬಿಗುಮಾನ, ಲಜ್ಜೆ. ಇವು ನಿಜವಾದ ಪ್ರೀತಿಯ ಲಕ್ಷಣಗಳು ಕಣಯ್ಯ, Symptoms of love—ಅಲ್ಲ

ಅಲ್ಲ....ಹಾಳು ಡಾಕ್ಟರ ಬುದ್ಧಿ—symbols of love—ತಿಳಿಯಿತೆ? ನಿನ್ನಲ್ಲಿ ಅವಳಿಗೆ ನಿಜವಾದ ಪ್ರೀತಿ ಗೌರವ ಮದುವೆಯಾದ ಮೇಲೆ ವೃದ್ಧಿಗೊಳುತ್ತವೆ ಕಣಯ್ಯ! ತೀರ ಸಲಿಗೆಯಾದರೆ ತಾತ್ಸಾರದಲ್ಲಿ ಪರಿಣಮಿಸಬಹುದು. ನೀನೇನೋ ಆಗ ಹೇಳಿದೆಯಲ್ಲ, ರೂಪವತಿ ಶತ್ರು ಭಾರ್ಯೆ ಅಂತ, ಅದು ಒಂದು ವೇಳೆ ನಿಜವೇ ಆದರೂ, ಹೊರಗಿನ ಹೆಣ್ಣಿನ ವಿಚಾರದಲ್ಲಿ ನಿಜವಾದರೂ ಆಗಿಬಿಡಬಹುದು. ಮನೆಯಲ್ಲೇ ಬೆಳೆದ ಸೋದರ ಮಾವನ ಹೆಣ್ಣು ತೋರುವ ಆದರ ಭಕ್ತಿ ವಿಶ್ವಾಸ ಮಮತೆ ಗೌರವ ಹೊರಗಿನ ಹೆಣ್ಣು ತೋರಿಸುತ್ತಾಳೇನಯ್ಯ? ಆದ್ದರಿಂದ, ಮಳೆಯೂ ನಿಂತ ಹಾಗೆ ಕಾಣುತ್ತಾ ಇವೆ, ಸುಮ್ಮನೆ ನನ್ನ ಮಾತಿಗೆ ಒಪ್ಪಿಕೋ. ನಾಳೆಯವರೆಗೆ ಮನಸ್ಸನ್ನು ಮುಗ್ಗರಿಸುವುದಕ್ಕೆ ಬಿಡಬೇಡ: ನೀನು ಒಲ್ಲೆ ಅಂದೆಯೋ, ವಯಸ್ಸಿನ ಹೆಚ್ಚು ಕಡಮೆ ನೋಡದೆ ನಿಮ್ಮ ತಾಯಿ ರತ್ನನ್ನ ರಾಜುವಿಗಾದರೂ ಮದುವೆ ಮಾಡಿಬಿಡುತ್ತಾರೆಯೇ ಹೊರತು, ಬೇರೆಯ ಕಡೆ ಕೊಟ್ಟು ಮದುವೆ ಮಾಡುವುದಿಲ್ಲ. ಇದು ಖಂಡಿತ."

"ನಾನು ಬಯಸುವುದೂ ಅದೇ."

"ಅದು ಸಾಧ್ಯವಿಲ್ಲ ಕಣಯ್ಯ. ಇದನ್ನೆಲ್ಲಾ ನಾನೂ ನಿಮ್ಮ ತಾಯಿಯೂ ಯೋಚನೆ ಮಾಡಿಲ್ಲ ಅಂತ ತಿಳಿಯಬೇಡ. ನಾನೇ ಹಾಗಂತ ಒಂದು ಸಲ ಹೇಳಿದ ಹಾಗೂ ನೆನಪು. ಆದರೆ, ನಿಮ್ಮ ತಾಯಿಗೆ ಅದು ಇಷ್ಟವಿಲ್ಲ. ನೀನು ಮನಸ್ಸಿಗೆ ಏನೂ ತಿಳಿದುಕೊಳ್ಳದೆ ಹೋದರೆ, ಇನ್ನೊಂದು ಗುಟ್ಟು ಹೇಳಲೇನು?"

"ಏನು? ಹೇಳಿ, ಪರವಾಯಿಲ್ಲ."

"ರಾಜುವಿಗೆ ಮುಂದೆ ಚೆಲುವೆಯಾದ ಹೆಣ್ಣು ಬಂದರೂ ಬರಬಹುದು. ನಿನ್ನನ್ನು ಈಗಿನ ಕಾಲದ ಓದಿದ ಹೆಣ್ಣುಗಳು ಒಪ್ಪುತ್ತಾರೆಯೋ ಇಲ್ಲವೋ ಅಂತ ನಿಮ್ಮ ತಾಯಿಯ ಭೀತಿ. ಅದಕ್ಕೇ ರತ್ನ ನಿನಗೇ ಸೇರಬೇಕು ಅಂತ ಅವರ ಇಷ್ಟ."

"ಯಾಕೆ, ರತ್ನ ನನ್ನ ಕೈಹಿಡಿದು ಸಾಯುವವರೆಗೂ ಕೊರಗಲಿ ಅಂತಲೋ?"

"ನೋಡಿದೆಯಾ, ಮತ್ತೇ ಅದೇ ಮಾತು ಆಡುತ್ತೀಯಲ್ಲ.

ಹೊರಗಿನ ಹೆಣ್ಣಿಗೂ ರತ್ನನಿಗೂ ನೀನು ತಾಳಿ ಹಾಕಬೇಡ. ನಿಮ್ಮ ತಾಯಿಯ ಮಾತಿಗೆ ಅವಳು ಎದುರಾಡುವುದಿಲ್ಲ. ನಿನ್ನನ್ನ ಒಪ್ಪಿಯೇ ಒಪ್ಪುತ್ತಾಳೆ. ಸೋದರಮಾವನ ಮಗಳಾದ್ದರಿಂದ, ನಾನು ಮೊದಲೇ ಹೇಳಿದ ಹಾಗೆ, ರೂಪಿಗಿಂತ ಹೆಚ್ಚಾಗಿ ನಿನ್ನ ಗುಣ ವಿದ್ಯೆ ಇವುಗಳಿಗೆ ಅವಳು ಬೆಲೆ ಕೊಡುತ್ತಾಳೆ. ವಿದ್ಯೆ ಅನ್ನುತ್ತಲೂ ಇನ್ನೊಂದು ವಿಷಯ ಜ್ಞಾಪಕಕ್ಕೆ ಬರುತ್ತೆ. ಏನೂ ಅಂತೀಯೋ, ರಾಜುವಿಗೂ ಅವಳಿಗೂ ವಯಸ್ಸಿನಲ್ಲಿ ಮಾತ್ರವಲ್ಲದೆ ವಿದ್ಯೆಯಲ್ಲೂ ವ್ಯತ್ಯಾಸವಿಲ್ಲ. ಅವರಿಬ್ಬರೂ ಏನಾದರೂ ಮದುವೆಯಾದರೆ, ಅವರ ದಾಂಪತ್ಯದಲ್ಲಿ ಅನ್ಯೋನ್ಯತೆ ಖಂಡಿತ ಇರುವುದಿಲ್ಲ. ನಿಮ್ಮ ತಾಯಿ ನಾನು ಎಲ್ಲಾ ಭಾಗದಲ್ಲೂ ಆಲೋಚನೆ ಮಾಡಿ ತೀರ್ಮಾನಕ್ಕೆ ಬಂದಿದ್ದೇವೆ. ರತ್ನ ನಿನಗೆ ತಕ್ಕ ಹೆಣ್ಣು. ಇನ್ನು ಹೆಚ್ಚು ಹೇಳಿ ಪ್ರಯೋಜನವಿಲ್ಲ. ಈಗಾಗಲೇ 'ಓವರ್ ಡೋಸ್' ಆಗಿದೆ. ನಿಮ್ಮ ತಾಯ ಇಷ್ಟವನ್ನು ನಡಸುವುದು ನಿನ್ನ ಕರ್ತವ್ಯ; ಅದರಿಂದ ನಿನಗೆ ಶ್ರೇಯಸ್ಸು; ಇದರಿಂದ ನಿನಗೂ ಸುಖ ಅಂತ ನನಗೆ ತೋರುತ್ತೆ. ಇಷ್ಟರಮೇಲೆ ನಿನ್ನ ಇಷ್ಟ. ಬಹುಶಃ ಈ ಹೊತ್ತೇ ನಿನ್ನ ತೀರ್ಮಾನಕ್ಕಾಗಿ ನಿಮ್ಮ ತಾಯಿ ಕಾದಿರುತ್ತಾರೆ.''

''ಆಗಲಿ ಡಾಕ್ಟರೇ, ನಮ್ಮ ತಾಯಿಯ 'ಇಷ್ಟವನ್ನು ನಡಸುವುದು ಕರ್ತವ್ಯ, ನೀವು ಹೇಳಿದ ಹಾಗೆ. ಇನ್ನು ಉಳಿದ ವಿಚಾರಗಳು ಚರ್ಚೆಗೇ ಬರುವುದಿಲ್ಲ. ಅಂದರೆ, ನನ್ನದು ಒಂದು ಕೋರಿಕೆ....''

"ಏನು ?"

"ರತ್ನನ್ನ ನಾನು ಮದುವೆಯಾಗಲು ಒಪ್ಪುತ್ತೇನೆ. ಆದರೆ ಈಗಲ್ಲ."

"ಇಂಗ್ಲೆಂಡಿಗೆ ಹೋಗಿ ಬಂದಮೇಲೊ ?"

"ಹೌದು."

"ಅಲ್ಲಿಯವರೆಗೆ ರತ್ನ ನಿನಗಾಗಿ ಕಾಯುತ್ತ ಕುಳಿತಿರಬೇಕಲ್ಲಪ್ಪ? ಬೆಳೆದ ಹೆಣ್ಣು, ಅದೂ ಒಳ್ಳೆಯದಲ್ಲ."

"ಇಂಟರ್ ಮಾಡಿ, ಬಿ.ಎ. ಆನರ್ಸ್‌ಗೆ ಓದಲಿ. ನನಗೂ ಸಂತೋಷ."

"ನೋಡು, ನೀನು ಸೀಮೆಗೆ ಹೋಗುವುದಾದರೆ ಮದುವೆಯಾಗೇ

ತೀರಬೇಕು ಅಂತ ನಿಮ್ಮ ತಾಯಿಯ ಹಟ. ನೀನು ಬ್ರಹ್ಮಚಾರಿಯಾಗಿ ಪರದೇಶಕ್ಕೆ ಹೋಗುವುದು ನಿಮ್ಮ ತಾಯಿಗೆ ಇಷ್ಟವಿಲ್ಲ, ತಿಳಿಯಿತೆ?"

"ನನ್ನಂತಹ ನೀಗ್ರೋ ಮನುಷ್ಯನನ್ನ ಯಾವ ಇಂಗ್ಲಿಷ್ ಹೆಣ್ಣು ಮೋಹಿಸುತ್ತಾಳೆ ಡಾಕ್ಟರೆ?" ಎಂದು ಶಾಮಣ್ಣ ಇಷ್ಟು ಹೊತ್ತಿಗೆ ಒಮ್ಮೆ ತಾನೂ ನಕ್ಕ.

"ಅದು ಹೇಗಾದರೂ ಇರಲಿ. ನಿಮ್ಮ ತಾಯಿಗೆ ಅದು ಸಮ್ಮತವಿಲ್ಲ. ಒಂದು ಕೆಲಸ ಮಾಡೋಣ: ನೀನು ಎಂ.ಎ. ಮಾಡಿದ ಮೇಲೆ, ಇಂಗ್ಲೆಂಡಿಗೆ ಹೋಗುವುದಕ್ಕೆ ಮೊದಲು, ಮದುವೆ ಮಾಡಿಕೊಂಡುಬಿಡು, ಆಗಬಹುದು ತಾನೆ? ಇಂಗ್ಲಿಷ್ ಸಂಪ್ರದಾಯದ ಬಿಟ್ರೋತಲ್ (ನಿಶ್ಚಿತಾರ್ಥ) ಇದ್ದ ಹಾಗೆ ನಮ್ಮ ಮದುವೆ, ಅಷ್ಟೆ. ಹಿಂದಿರುಗಿದ ಮೇಲೆ ಪ್ರಸ್ತ ಆಗಬಹುದು. ನಿನ್ನ ಒಪ್ಪಿಗೆ ತಾನೆ?"

"ಆಗಬಹುದು, ಡಾಕ್ಟರೆ."

ಡಾ|| ರಘುರಾಂ ಅವರಿಗೆ ತುಂಬ ಸಂತೋಷವಾಯಿತು. ಮಳೆಯೂ ನಿಂತಿತ್ತು. ಹಾರನ್ ಕೂಗಿಸಿದರು. ಹೋಟಲ ಮಾಣಿ ಬಳಿಗೆ ಬಂದ. **"Let us celebrate"** ಎಂದು ಡಾಕ್ಟರು ಇನ್ನೆರಡು ಕಪ್ ಕಾಫಿಗೆ ಹೇಳಿ ಕಳಿಸಿದರು.

## ೧೨

ತಾತ್ಕಾಲಿಕವಾಗಿ ನಿಂತಿದ್ದ ವಿದ್ಯುಚ್ಛಕ್ತಿ ಹಿಂದಿರುಗಿ, ಮರಳಿ ಚಿತ್ರ ಪ್ರದರ್ಶನ ಮುಂದುವರಿಯಿತು. ಅನಿರೀಕ್ಷಿತವಾಗಿ ದೊರೆತಿದ್ದ ಸುಖಾನುಭವದ ಕ್ಷಣಗಳು ಕಾಮನಬಿಲ್ಲಿನಂತೆ ಕಣ್ಮರೆಯಾಗಿದ್ದುವು. ಅದಕ್ಕಾಗಿ ರಾಜುವಿನ ಬಗೆ ಮತ್ತೆ ಮತ್ತೆ ಕೈಚಾಚಿ ನಿರಾಶೆಗೊಂಡಿತು.

ಒಮ್ಮೆ ಸುಖಪಟ್ಟ ಚಿತ್ತ ಆ ಸುಖವನ್ನು ಮರಳಿ ಮರಳಿ ಅನುಭೋಗಿಸಲು ಕಾತೊರೆಯುತ್ತದೆ; ಏಕೆಂದರೆ, ಆ ಸುಖದ ಅಮಲು ಹಾಗಿರುತ್ತದೆ; ಆ ಸುಖ ಅನಂತ, ಅಪಾರ, ಶಾಶ್ವತ, ತಾನಲ್ಲದೆ ಅನ್ಯರು

ಅದನ್ನು ಸವಿದು ಕಾಣರು ಎಂಬ ಭ್ರಾಂತಿಭಾವದ ಮುಸುಕಿನಡಿಯಲ್ಲಿ ಅದು ಭೋಗನಿದ್ರೆ ಮಾಡುತ್ತ ಹೊಂಗನಸು ಕಾಣುತ್ತಿರುತ್ತದೆ. ಆ ಹೊಂಗನಸಿನ ಗುಳ್ಳೆ ಒಡೆದು, ನಿತ್ಯಸತ್ಯದ ಅರಿವಾದಾಗಲೆ ಯೋಗನಿದ್ರೆಯ ಆರಂಭ. ಆ ಪುಣ್ಯ ಕೋಟಿಜೀವಿಗಳಲ್ಲಿ ಒಂದಕ್ಕೆ ಇರುವುದಿಲ್ಲ.

ರಾಜುವಿಗೆ ಇಂದು ಭೋಗ ಮಧುವಿನ ಮೊದಲಸವಿ ದೊರಕಿತ್ತು.

ಕುಸುಮಕ್ಕೆ ಎರಗಿದ ದುಂಬಿ ಅದರಲ್ಲಿ ದೊರೆತ ಒಂದು ಹನಿ ಮಧುವಿನಿಂದ ತೃಪ್ತವಾಗುವುದೆ? ಅದರಿಂದ ಇನ್ನು ಮಧುವೇನೂ ದೊರಕದೆಂದು ಅರಿವಾಗುವವರೆಗೂ ತನ್ನ ಪುಷ್ಪವ್ಯಭಿಚಾರವನ್ನು ನಿಲ್ಲಿಸುವುದಿಲ್ಲ. ಅಲ್ಲಿನ ಭೋಗ ಭಂಡಾರ ಸೂರೆಯಾದ ಮೇಲೆ ಮತ್ತೊಂದು ಕುಸುಮಕ್ಕೆ ಎರಗುತ್ತದೆ.

ದುಂಬಿ ಮಕರಂದಕೋಶಕ್ಕೆ ಇನ್ನೂ ಮುಖವನ್ನೇ ಇಡದೆ ಅದರ ದಳವೊಂದರ ಮೇಲೆ ಕುಳಿತು ಮೊಗಸಲು ಹವಣಿಸುವ ರೀತಿಯಲ್ಲಿ, ರಾಜು ಕುಸುಮನ ನಿಕಟಪರಿಚಯಕ್ಕೆ ಪೀಠಿಕೆ ಹಾಕಿಕೊಂಡಿದ್ದನು. ಆ ಪರಿಚಯವನ್ನು ಬಲಪಡಿಸಿಕೊಳ್ಳುವ ಹವಣಿಕೆಗೆ ಮನಸ್ಸಿತ್ತಿದ್ದನು.

ಚಿತ್ರ ಮುಗಿದ ಕೂಡಲೆ, ನಿಧಾನವಾಗಿ ನಡೆದು ಹೋಗುವುದೆಂದು ರಾಜು ಸೂಚಿಸಿದ. ಬಸ್ಸಿನಲ್ಲಿ ಬೇಗ ಹಿಂದಿರುಗುವುದೆಂದು ರತ್ನ ಸೂಚಿಸಿದಳು; ಶ್ಯಾಮಲೆಯೂ ಅವಳ ಸಲಹೆಯನ್ನು ಅನುಮೋದಿಸಿದಳು. ಕುಸುಮನ ಮನಸ್ಸು ಸಂದೇಹದ ತೂಗುಯ್ಯಾಲೆಯಲ್ಲಿ ಕ್ರೀಡಿಸಿ, ರಾಜುವಿನ ಸಲಹೆಯನ್ನು ಅನುಮೋದಿಸಿತು.

"ಮತ್ತೇನೂ ಮಳೆ ಬರಲಾರದು. ಮಾರ್ಕೆಟ್‌ವರೆಗೆ ನಡೆದು ಹೋಗೋಣ. ಈಗ ಇನ್ನೂ ಆರು ಗಂಟೆ. ಎಷ್ಟೇ ನಿಧಾನವಾಗಿ ನಡೆದು ಹೋದರೂ ಅರ್ಧ ಗಂಟೆ ಹಿಡಿದೀತು. ಅಲ್ಲಿಂದ ಬಸ್ಸಿನಲ್ಲಿ ಹೋದರೆ, ಏಳು ಗಂಟೆಯ ಹೊತ್ತಿಗೆ ಮನೆ ಸೇರಬಹುದು" ಎಂದಳು ಕುಸುಮ. ಚಿತ್ರದ ಕಲ್ಪನಾ ಪ್ರಪಂಚದ ವಿಹಾರವನ್ನು, ಸಾಧ್ಯವಾದರೆ ಇಲ್ಲದ ಗೊಂದಲಕ್ಕೆ ಸಿಲುಕದೆ ಇರುವ ಮಟ್ಟಿಗಾದರೂ, ವಾಸ್ತವ ಪ್ರಪಂಚದಲ್ಲಿ ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಅವಳ ಬಯಕೆ. ಚಾಚಿದ್ದ ರಾಜುವಿನ ಕೈಯನ್ನು ಕೆಲಕಾಲವಾದರೂ ಅವಳು ಹಿಡಿಯಬಯಸಿದಳು.

ರಾಜುವಿಗೆ ಕುಸುಮನ ಈ ಬೆಂಬಲದ ನುಡಿ ಸಾಕಾಯಿತು. ಅಷ್ಟ ರಿಂದಲೇ, ಅವನು ಕುಸುಮ ಇನ್ನು ಮುಂದೆ ತನ್ನ ಒಡನಾಡಿಯಾಗುವಳೆಂದು ಕನಸು ಕಾಣತೊಡಗಿದನು.

"ಹಾಗಿದ್ದರೆ ಬನ್ನಿ, ಕಬ್ಬನ್ ಪಾರ್ಕನ್ನು ಹಾದುಹೋಗೋಣ, ಅಲ್ಲಿನ ರೆಸ್ಟರಾಂಟಿನಲ್ಲಿ ಏನಾದರೂ 'ಡ್ರಿಂಕ್ಸ್' (ಪಾನೀಯ) ತೆಗೆದು ಕೊಂಡು ಹೊರಡೋಣ" ಎಂದು ಸೂಚಿಸಿದ ರಾಜು.

"ಸಿನಿಮಾ ಮಂದಿರದಲ್ಲೆ 'ಡ್ರಿಂಕ್ಸ್' ಬಂದಿತ್ತಲ್ಲಾ?" ಎಂದಳು ಶ್ಯಾಮಲಾ.

"ಅಲ್ಲಿ ನನಗೆ ಮರೆತೇ ಹೋಯಿತು ಆ ವಿಷಯ, ನೀವು ಯಾರಾ ದರೂ ನೆನಪು ಕೊಟ್ಟಿದ್ದರೆ?'' ಎಂದು ತಾನು ಜಾರಿಕೊಳ್ಳುವ ಆಕ್ಷೇಪ ವೆತ್ತಿದ ರಾಜು.

"ನೆನಪು ಕೊಡುವುದಕ್ಕೆ, ನೀನು ಮೊದಲು ಹೇಳಿದ್ದೆಯಾ?" ಎಂದು ರತ್ನ ಸಣ್ಣ ಮಾತಿನ ಏಟನ್ನು ಹಾಕಿದಳು.

"ಜೊತೆಗೆ ಅಂತ ಬಂದ ಗಂಡಸರನ್ನ ನಾವು ಡ್ರಿಂಕ್ಸ್ ಕೊಡಿಸಿ, ಕಾಫಿ ಕೊಡಿಸಿ, ಅಂತ ಪೀಡಿಸಿ ಸುಲಿಗೆ ಮಾಡುವುದಕ್ಕಾಗುತ್ತೆಯೆ, ನಾಚಿಕೆ ಇಲ್ಲದೆ? ನಾವೇನು ಅಂಥ ಬಜಾರಿಗಳು ಕೆಟ್ಟುಹೋದೆವೆ? ಹೆಂಗಸರು ಕೇಳು ವುದಕ್ಕೆ ಮೊದಲೇ ಅವರಿಗೆ ಬೇಕಾದ್ದನ್ನು ಕೊಡಿಸಿ, ಗಂಡಸರು ತಮ್ಮ ಮರ್ಯಾದೆ ಕಾಪಾಡಿಕೊಳ್ಳಬೇಕು. ಅಲ್ಲವೇನೇ ರತ್ನ?'' ಎಂದು ಕುಸುಮ ಗೆಳತಿಯ ಮುಖವನ್ನೊಮ್ಮೆ ರಾಜುವಿನ ಮುಖವನ್ನೊಮ್ಮೆ ನೋಡಿದಳು; ತುಂಟ ನಗೆಯು ಕುಡಿ ಹುಬ್ಬಿನ ಕೊಂಕಿನೊಂದಿಗೆ ಕೆಳೆ ಬೆಳಸಲು ಹವಣಿಸುತ್ತಿತ್ತು.

ಮೋಡತೆಗೆದ ಪಡುವಣ ಬಾನಿನಿಂದ ಹೂಬಾಣದಂತೆ ಹೊರಹೊಮ್ಮಿ ಕೆಂಬೆಳಕಿನ ಕಿರಣಗಳು ಮೂವರು ಕನ್ನೆಯರ ಕೆನ್ನೆಗಳಮೇಲೆ ರಂಗೆರಚಿ, ರಾಜುವಿನ ಪ್ರಣಯಪ್ರವಣವಾದ ಚಿತ್ತವನ್ನು ಕೆಣಕುತಿದ್ದುವು. ಆದರೂ, ಈ ಮೂವರಲ್ಲಿ ಸದ್ಯಕ್ಕಂತೂ ಕುಸುಮ ಒಬ್ಬಳೇ ರಾಜುವಿನ ಮನಸ್ಸು ಸೆರೆಹಿಡಿದಿದ್ದ ರಾಜಕುಮಾರಿಯಾಗಿದ್ದಳು. ನಿತ್ಯದ ಸಲಿಗೆಯ ಒಡನಾಟದ ರತ್ನ ಅವನಲ್ಲಿ ಯಾವ ನೂತನ ಮಧುರಭಾವವನ್ನೂ ಉಕ್ಕಿಸಿರಲಿಲ್ಲ.

ಶ್ಯಾಮಲೆಯ ಹಿಮ್ಮೆಟ್ಟುವ ವರ್ತನೆ ಅವಳ ಸಹಜ ಸೌಂದರ್ಯದ ಮೇಲೆ ಗಂಭೀರತೆಯ ತೆರೆಯೆಳೆದಿದ್ದಿತು. ಕುಸುಮನ ಸಾಮಾನ್ಯ ಸೌಂದರ್ಯವೇ ಅವಳ ಮಿತಿಮೀರಿದ ಅಲಂಕಾರದ ಚೌಕಟ್ಟಿನಲ್ಲಿ ಸುಂದರತಮಚಿತ್ರವಾಗಿ ಈಗ ರಾಜುವಿನ ಯುವಕದೃಷ್ಟಿಗೆ ಕಂಗೊಳಿಸುತ್ತಿತ್ತು,

'ಕಬ್ಬನ್ ಪಾರ್ಕ್' ಮಾರ್ಗದತ್ತ ನಾಯಕನಾಗಿ ನಡೆದಿದ್ದ ರಾಜುವಿನ ಹಿಂದೆ ಮೂವರು ಸಖಿಯರೂ ಸಾಲುಗೂಡಿ ನಡೆದಿದ್ದರು.

ಮುಂದಾಗಿದ್ದ ರಾಜು ಈಗ ಹಿಂದಾಗಿದ್ದ; ಸರಸ ಸಲ್ಲಾಪದ ಶುಕಾ ಲಾಪಕ್ಕೆ ನಡುನಡುವಿನ ನಗೆಯ ಕೋಗಿಲೆ ದನಿಯನ್ನು ಕೂಡಿಸುತ್ತ ವಸಂತ ಲಕ್ಷ್ಮಿಯರಂತೆ ಮೂವರೂ ಉದ್ಯಾನದ ಪ್ರಶಾಂತ ಮೋಹಕ ಪರಿಸರ ಪರಿವೃತರಾಗಿ ನಡೆದು ಹೋಗುತ್ತಿದ್ದರು.

ಅವರ ಹಿಂಭಾಗವನ್ನು ಪರಭಾವಿಸುತ್ತ ರಾಜು ಹಿಂದೆ ಹಿಂದೆಯೇ ಹಿಂಬಾಲಿಸುತ್ತಿದ್ದ. ನಡೆಯ ಬೆಡಗಿನಲ್ಲಿ ಕುಸುಮ ಎಲ್ಲರಿಗಿಂತ ಕಮನೀಯವಾಗಿ ಯಾರಿಗಾದರೂ ಕಂಡುಬರುತ್ತಿದ್ದಳು. ರಾಜುವಿಗೆ ಈ ಅಂಶ ಸುಸ್ಪಷ್ಟವಾಗಿ ಕಂಡದ್ದು ಆಶ್ಚರ್ಯವಲ್ಲ.

ಬೇಗನೆಯೇ ಉಪಾಹಾರಗೃಹ ಸಿಕ್ಕಿತು. ರಾಜು ಎಲ್ಲರನ್ನೂ ಹೊರಗಣ ಹಸಿರು ಚಪ್ಪರದ ಕೆಳಗೆ ಒಂದು ದುಂಡು ಮೇಜದ ಬಳಿಗೆ ಕರೆದೊಯ್ದ. ಸುತ್ತಲೂ ಇದ್ದ ನಾಲ್ಕು ಕುರ್ಚಿಗಳ ಮೇಲೆ ನಾಲ್ವರೂ ಕುಳಿತರು. ಮಾಣಿ ಬಂದು ತಿಂಡಿ ತಿನಿಸುಗಳ ಪಟ್ಟಿಯೊಪ್ಪಿಸಿದ.

"ಹಸಿವಿಲ್ಲ, ಏನೂ ಬೇಡ" ಎಂದು ಎಲ್ಲರೂ ಒಂದೇ ಪಲ್ಲವಿಯೆಳೆದರು.

"ನಾಲ್ಕು 'ಫ್ರೂಟ್ ಸಾಲಡ್,' ನಾಲ್ಕು ಡ್ರಿಂಕ್ಸ್ ತೆಗೆದುಕೊಂಡು ಬಾರಪ್ಪ" ಎಂದು ಮಾಣಿಯನ್ನು ಕಳಿಸಿದ ರಾಜು.

"ನಾನೂ ಅದೇ ಹೇಳೋಣ ಅಂತ ಇದ್ದೆ. ಮಳೆಬಿದ್ದರೂ ಒಂದುತರಹ ಧಗೆ ಇದ್ದೇ ಇದೆ" ಎಂದಳು ಕುಸುಮ.

ಇಲ್ಲಿಯೂ ಕುಸುಮ–ರಾಜು, ಶ್ಯಾಮಲೆ–ರತ್ನ ಜೊತೆ ಜೊತೆಯಾಗಿ ಕುಳಿತಿದ್ದರು.

ಮಾಣಿ ಫ್ರೂಟ್ ಸಾಲಡ್ ಮತ್ತು ಶೀತಲ ಪಾನೀಯಗಳ ಗಾಜಿನ ಲೋಟಗಳನ್ನು ಮೇಜಿನ ಮೇಲಿಟ್ಟು ನಡೆದ.

"ಇದೇನು ಇದು ಕೊಳವಿ?" ಎಂದು ರತ್ನ ಕೇಳಿದಳು, ಲೋಟದಲ್ಲಿ ಪಾನೀಯವನ್ನು ಹೀರಲು ಇಟ್ಟಿದ್ದ 'ಸ್ಟ್ರಾ' ಕೊಳವೆಯನ್ನು ಕೈಯಲ್ಲಿ ಹಿಡಿದು ರಾಜು ಅವರು ಎಂದೂ ಕಾಣದಿದ್ದ ಅದರ ಉಪಯೋಗವನ್ನು ತೋರಿಸಿ ಕೊಟ್ಟ. ಸಾಲಡ್ ತಿಂದಾದಮೇಲೆ, ಎಲ್ಲರೂ ನಿಧಾನವಾಗಿ ಪಾನೀಯವನ್ನು ಹೀರುತ್ತಿದ್ದರು.

ರತ್ನ ಶ್ಯಾಮಲೆ ಇಬ್ಬರೂ ಕತ್ತುಬಗ್ಗಿಸಿ, ದೃಷ್ಟಿ ಕೆಳಗೆಮಾಡಿ, ಪಾನೀಯದ ಬಣ್ಣವನ್ನೂ ಕಣ್ಣಿನಿಂದ ಹೀರುತ್ತ ಅದನ್ನು ಕುಡಿಯುತ್ತಿದ್ದಾಗ, ರಾಜು ಮೆಲ್ಲನೆ ತನ್ನ ಕೊಳವೆಯನ್ನು ಕುಸುಮನ ಲೋಟದೊಳಕ್ಕೆ ಹಾಕಿ ಅವಳದನ್ನು ತಾನು ತೆಗೆದುಕೊಂಡ.

ಕುಸುಮ ಮೊದಲು ಸ್ವಲ್ಪ ಹುಬ್ಬುಗಂಟಿಕ್ಕಿದಳು ; ಮರುಕ್ಷಣವೇ ಮಂದಹಾಸ ಮುಖವನ್ನು ಬೆಳಗಿ, ನಸುಮುನಿಸಿನ ಮಂಜನ್ನು ಕರಗಿಸಿತು. ಇಬ್ಬರ ಎಂಜಲಿನೊಂದಿಗೆ ಇಬ್ಬರ ಮಂದಹಾಸವೂ ಬೆರೆಯಿತು. ಎದುರಿಗಿದ್ದ ಗೆಳತಿಯರಿಬ್ಬರ ಗಮನಕ್ಕೆ ಬೀಳಲಿಲ್ಲ ಇವರಿಬ್ಬರ ಈ ಪ್ರಣಯ ಚೇಷ್ಟೆ.

ಹಿಂದಿರುಗಿ ನಡೆದು ಹೋಗುವ ಹೊತ್ತಿಗೆ ಕೆಂಬಣ್ಣ ತೆಗೆದು ನಸುಗತ್ತಲೆ ಪ್ರಾರಂಭವಾಗಿತ್ತು. ಮಾರ್ಗದ ಒಂದು ಪಕ್ಕದಲ್ಲಿ ನಾಲ್ವರೂ ಸಾಲುಗೂಡಿಯೇ ಹೋಗುತ್ತಿದ್ದರು. ರಾಜು ಕುಸುಮನ ಪಕ್ಕಕ್ಕೆ ಅಂಟಿಕೊಂಡೇ ಇದ್ದ. ತನ್ನ ಬಲಗೈಯಿಂದ ಮೆಲ್ಲನೆ ಅವಳ ಮುಂಗೈಯ ಮುಗುಳನ್ನು ಹಿಡಿದು ನಡೆಯುತ್ತಿದ್ದುದು ಉಳಿದಿಬ್ಬರ ಅರಿವಿಗೆ ಬರುವಂತಿರಲಿಲ್ಲ.

ನಾಳೆಯ ಚಿಂತೆ ಇಂದೇಕೆ? ಇಂದಂತೂ ರಾಜು ಕುಸುಮ ಒಬ್ಬರನ್ನೊಬ್ಬರು ಮೆಚ್ಚಿಕೊಂಡಿದ್ದರು; ಒಬ್ಬರನ್ನೊಬ್ಬರು ಒಪ್ಪಿಕೊಂಡಿದ್ದರು ; ಬಾಲಿಶ ಪ್ರಣಯದ ಭಾವುಕರಾಗಿದ್ದರು.

೧೩

ಡಾ|| ರಘುರಾಂ ಶಾಮಣ್ಣನನ್ನು ಗಾಯನ ಸಮಾಜದಲ್ಲಿ ಬಿಟ್ಟು, ತಮಗೆ ಬೇರೆಯ ಕೆಲಸವಿದೆಯೆಂದು ಹೇಳಿ, ನಡೆದದ್ದನ್ನು ಸುಂದರಮ್ಮ ನವರಿಗೆ ವರದಿ ಮಾಡಲು ಹಿಂದಿರುಗಿದರು. ತಮ್ಮ ಮಗನೇ ಮದುವೆಗೆ ಒಪ್ಪಿದ್ದಿದ್ದರೆ ಯಾವ ಹಿಗ್ಗು ಮೂಡುತ್ತಿತ್ತೋ ಆ ಹಿಗ್ಗಿನ ಭಾವದಲ್ಲಿ ಕಾರನ್ನು ವೇಗವಾಗಿಯೇ ಓಡಿಸಿಕೊಂಡು ಹಿಂದಿರುಗಿದ್ದರು.

ಮನೆಯಲ್ಲಿ ರೇಡಿಯೋವಿನಿಂದ ಗಾನ ಅಲೆ ಅಲೆಯಾಗಿ ಕೇಳಿ ಬರುತ್ತಿತ್ತು. ಡಾಕ್ಟರ ರಾಯಭಾರ ಏನಾಗುವುದೋ ಏನೋ ಎಂದು ಆತಂಕಗೊಂಡಿದ್ದ ಸುಂದರಮ್ಮನವರು, ಬೇಡದ ಸಂಗೀತದಲ್ಲಿ ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿ ಇರಿಸಲು ಪ್ರಯತ್ನಿಸುತ್ತಿದ್ದರು.

ಡಾಕ್ಟರು ಒಬ್ಬರೇ ಹಿಂದಿರುಗಿ ಬಂದೇ ಬರುತ್ತಾರೆ ಎಂದು ಅವರ ನಿರೀಕ್ಷೆ; ನಿರೀಕ್ಷೆ ನಿರರ್ಥಕವಾಗಲಿಲ್ಲ. ಡಾಕ್ಟರ ಬೂಡ್ಸು ಕಾಲಿನ ಶಬ್ದ ಕೇಳಿಯೇ ಸೋಫಾದ ಮೇಲೆ ಒರಗಿ ಮಲಗಿದ್ದ ಅವರು ಸ್ವಲ್ಪ ನೆಟ್ಟಗೆ ಕುಳಿತರು. ಕೆಂಚಪ್ಪನನ್ನು ಕೂಗಿ ಕರೆದರು. ಅವನು ಬಂದ ಕೂಡಲೆ, ರೇಡಿಯೋವನ್ನು ನಿಲ್ಲಿಸಿಬಿಡುವ ಹಾಗೆ ಹೇಳಿದರು. ಕೆಂಚಪ್ಪ ರೇಡಿಯೋವಿನ ಸ್ವಿಚ್ಚನ್ನು ಹಾಕಿದ ಮೇಲೆ, "ಎಲ್ಲಿ, ಡಾಕ್ಟರಿಗೆ ಆ ಕುರ್ಚಿಯನ್ನು ತಂದು ಇಲ್ಲಿ ಹಾಕೋ" ಎಂದರು. ಆಗ ತಾನೇ ಒಳಕ್ಕೆ ಬಂದಿದ್ದ ಡಾಕ್ಟರು, ಸುಂದರಮ್ಮನವರ ಸೋಫಾದ ಬಳಿ ಹಾಕಿಸಿದ್ದ ಪೀಠದ ಮೇಲೆ ತಮ್ಮ ವರದಿಯನ್ನೊಪ್ಪಿಸಲು ಸಿದ್ಧವಾಗಿ ಕುಳಿತರು.

ಪೀಠಿಕೆಯ ಮಾತಾಡುವ, ಅಥವಾ ಅದಕ್ಕೆ ಅವಕಾಶ ಕೊಡುವ ಸಾವಧಾನದ ಮನಸ್ಥಿತಿಯಲ್ಲಿಲ್ಲದಿದ್ದ ಸುಂದರಮ್ಮನವರು ನೇರವಾಗಿ ಪ್ರಶ್ನಿಸಿದರು:

"ಏನು ಡಾಕ್ಟರೆ, ಹಣ್ಣೋ ಕಾಯೋ ?"

"ಹಣ್ಣು" ಎಂದು ಡಾಕ್ಟರು ಸುಹಾಸದೊಡನೆ ನುಡಿದು, ನೀಳವಾಗಿ ಉಸಿರುಬಿಟ್ಟರು.—ತಮಗೆ ಹೊರಿಸಿದ್ದ ಭಾರವನ್ನು ಇಳುಹಿಕೊಂಡು ಹಗುರ ವಾದ ಮನಸ್ಸಿನಿಂದ.

"ತುಂಬ ಸಂತೋಷ ಡಾಕ್ಟರೆ. ನನ್ನ ಬಯಕೆ ಹೂ ಬಿಟ್ಟಿತು; ಇನ್ನು ಫಲಬಿಡುವುದೊಂದೇ ಬಾಕಿ" ಎಂದು ಸುಂದರಮ್ಮನವರೂ ಸಮಾ ಧಾನದ ನಿಟ್ಟುಸಿರು ಬಿಟ್ಟರು.

ಸುಂದರಮ್ಮನವರು ಸಾಮಾನ್ಯವಾದ ಅರ್ಥದಲ್ಲಿ ಹೇಳಿದ ಮಾತಿಗೆ ಡಾಕ್ಟರು ವಿಶೇಷವಾದ ಅರ್ಥವನ್ನು ಕಲ್ಪಿಸಿಕೊಂಡು, ಅದಕ್ಕೆ ಅನುಗುಣ ವಾಗಿ ನುಡಿದರು:

"ಫಲ ಕಾಣುವುದಕ್ಕೆ ಇನ್ನೂ ಮೂರು ನಾಲ್ಕು ವರ್ಷವಾದರೂ ಕಾಯಬೇಕಾದೀತು."

ಡಾಕ್ಟರ ಇಂಗಿತ ಸುಂದರಮ್ಮನವರಿಗೆ ಅರ್ಥವಾಯಿತು.

"ಅದು ಯಾಕೆ, ಹಾಗೆನ್ನುತ್ತೀರಿ?" ಎಂದು ಕೇಳಿದರು.

"ಶಾಮಣ್ಣ ಮದುವೆಗೇನೋ ಒಪ್ಪಿಕೊಂಡ. ಆದರೆ, ಸೀಮೆಯಿಂದ ಹಿಂದಿರುಗಿ ಬರುವವರೆಗೂ ಪ್ರಸ್ತ ಮಾಡಿಕೊಳ್ಳುವುದಿಲ್ಲವಂತೆ. ಆದಕ್ಕೆ ನಾವು ಬಲಾತ್ಕರಿಸಕೂಡದು. ಅವೇ ಅವನು ಹಾಕಿರುವ ಷರತ್ತು."

"ಪ್ರಸ್ತ ಮಾಡಿಕೊಂಡು ಹೋಗಿದ್ದರೆ ಚೆನ್ನಾಗಿತ್ತು. ನಮ್ಮ ಇಷ್ಟವೇ ಸಂಪೂರ್ಣವಾಗಿ ನೆರವೇರಬೇಕು ಎಂದರೆ ಹೇಗೆ ಸಾಧ್ಯ? ನಾವು ಬಯಸುವುದೊಂದು ಅದು ಆಗುವುದೊಂದು. ದೈವಸಂಕಲ್ಪ ಹೇಗಿದೆಯೋ ಬಲ್ಲವರು ಯಾರು? ಇದು ಒಳ್ಳೆಯದಕ್ಕೇ ಏನೋ, ಹೇಗೆ ಕಂಡೇವು? ನನ್ನ ಹಾರ್ಟು (ಹೃದಯ) ಯಾವತ್ತು ಚಕ್ಕರ್ ಕೊಡುತ್ತೋ ಅಂತ ನೀವೇ ಹಾಸ್ಯ ಮಾಡುತ್ತ ಇರುತ್ತೀರಿ. ಮೊಮ್ಮಗುವನ್ನ ಕಣ್ಣಿಂದ ನೋಡಿ ನಾನು ಸಾಯಬೇಕು ಅಂತ ದೈವಸಂಕಲ್ಪ ಇದ್ದರೆ, ಅವನು ಸೀಮೆಯಿಂದ ಹಿಂದಿರುಗುವವರೆಗೆ ನಾನು ಯಾಕೆ ಬದುಕಿರಬಾರದು? ನನ್ನ ಆಯುಷ್ಯ ಇನ್ನು ಐದಾರು ವರ್ಷ ಹೆಚ್ಚುವುದಕ್ಕೆ ದೈವ ದಾರಿ ತೋರಿಸುತ್ತಾ ಇದೆ ಅಂತ ಕಾಣುತ್ತೆ. ಆದದ್ದೆಲ್ಲ ಒಳ್ಳೆತಕ್ಕೆ ಅಂತ ದಾಸರಾಯರು ಹೇಳಿಲ್ಲವೆ? ಅಷ್ಟರಲ್ಲಿ ರಾಜುವಿನ ಮದುವೆಯನ್ನೂ ಮಾಡಿಬಿಟ್ಟರೆ, ನಾನು ಹಾಯಂತ

ಕಣ್ಣು ಮುಚ್ಚಬಹುದೋ?''

ಇಷ್ಟನ್ನು ನುಡಿಯಲು ಸುಂದರಮ್ಮನವರು ಹೆಚ್ಚು ಹೊತ್ತನ್ನೇ ತೆಗೆದುಕೊಂಡರು; ಮಾತಾಡಿದ ಆಯಾಸ, ಹರ್ಷಭಾರ, ಇದರ ಪರಿಣಾಮ ವಾಗಿ ಅವರ ಉಸಿರಾಟದ ವೇಗ ತೀವ್ರವಾಯಿತು. ಇದು ಡಾಕ್ಟರ ಗೋಚರಕ್ಕೆ ಬಾರದೆ ಹೋಗಲಿಲ್ಲ.

"ನೋಡಿ ತಾಯಿ, ಇಷ್ಟು ಮಾತಾಡಿದ್ದೇ ಹೆಚ್ಚಾಯಿತು. ಇನ್ನು ನಾನು ಬರುತ್ತೇನೆ. ನೀವು ಸುಧಾರಿಸಿಕೊಳ್ಳಿ'' ಎಂದು ಡಾಕ್ಟರು ಮೇಲೆದ್ದರು.

"ಕುಳಿತುಕೊಳ್ಳಿ ಡಾಕ್ಟರೆ. ನನ್ನ ಆಯುಷ್ಯ ಹೆಚ್ಚಿಸುವ ದೇವರು ಶಕ್ತಿಯನ್ನೂ ಕೊಡುತ್ತಾನೆ. ಸಂತೋಷವಾಗಿರುವಾಗ ನಾಲ್ಕು ಮಾತಾಡದೆ ದುಃಖವಾಗಿರುವಾಗ ಮಾತಾಡುವುದೇನಿದೆ?'' ಎಂದು ನಿಲ್ಲಿಸಿ, ತುಸು ಹೊತ್ತು ಸುಧಾರಿಸಿಕೊಂಡು, "ಸ್ವಲ್ಪ ಭಟ್ಟರನ್ನು ಕರೆಯುತ್ತೀರಾ" ಎಂದು ಡಾಕ್ಟರನ್ನೇ ಕೇಳಿದರು.

ಡಾಕ್ಟರು ಕೂಗಲಾಗಿ, ಅಡಿಗೆಯ ಮನೆಯಿಂದ ಭಟ್ಟರು ಬಂದರು.

"ನೋಡಿ, ಮೊದಲು ಶ್ರೀನಿವಾಸ ದೇವರ ಪಟದ ಮುಂದೆ ತುಪ್ಪದ ದೀಪ ಹೊತ್ತಿಸಿಟ್ಟು, ಹಣ್ಣಿನ ತಟ್ಟೆಯನ್ನು ದೇವರ ಮುಂದಿಟ್ಟು, ಅದನ್ನು ಇಲ್ಲಿ ತೆಗೆದುಕೊಂಡು ಬನ್ನಿ. ಆಮೇಲೆ ಎರಡು ಲೋಟ ಓವಲ್‌ಟ್ರೈನ್ ಮಾಡಿ ಕೊಂಡು ಬನ್ನಿ. ನನಗೆ ಅರ್ಧ ಲೋಟ ಸಾಕು...." ಎಂದು ಸುಂದರಮ್ಮ ನವರು ನಿಧಾನವಾಗಿ ನುಡಿದರು.

"ಅವರ ಲೋಟಕ್ಕೆ ಒಂದು ಚಮಚ ಗ್ಲೂಕೋಸನ್ನೂ ಸೇರಿಸಿ ಭಟ್ಟರೆ" ಎಂದು ಡಾಕ್ಟರು ಅನುಜ್ಞೆಯಿತ್ತರು.

ಸುಂದರಮ್ಮನವರಿಗೆ ವಿಶ್ರಾಂತಿ ದೊರೆಯಲೆಂದು ಡಾಕ್ಟರು ಬೇಕೆಂದೇ ಒಳಕ್ಕೆ ಎದ್ದು ಹೊಗಿ, ಭಟ್ಟರಿಂದ ಓವಲ್‌ಟೈನ್ ಲೋಟಗಳನ್ನು ಈಸಿ ಕೊಂಡು, ಸುಂದರಮ್ಮನವರಿಗೆ ಕೊಡಬೇಕಾದ ಲೋಟವನ್ನು ಅವರ ಕೈಗೆ ಕೊಟ್ಟು, ತಮ್ಮ ಕೈಲಿದ್ದುದನ್ನು ಕುಡಿಯುತ್ತ ಕುರ್ಚಿಯ ಮೇಲೆ ಕುಳಿತರು.

"ನಿಮಗೆ ನಾನು ತುಂಬ ತೊಂದರೆ ಕೊಡುತ್ತ ಇದ್ದೀನಿ ಡಾಕ್ಟರೆ.

ನೀವು ನಮ್ಮ ಭಾಗದ ದೇವರಪ್ಪ" ಎಂದರು ಸುಂದರಮ್ಮನವರು, ಓವಲ್ ಟೈನ್ ಕುಡಿದಾದಮೇಲೆ.

"ಅದು ಬಹು ದೊಡ್ಡಮಾತು, ತಾಯಿ. ನಿಮ್ಮ ಯಜಮಾನರು ನನಗೆ ಮಾಡಿರುವ ಉಪಕಾರಕ್ಕೆ ನಾನು ಏನು ಪ್ರತ್ಯುಪಕಾರ ಮಾಡ ಬಲ್ಲೆ?"

"ನೀವು ನನಗೆ ಹೇಳುತ್ತೀರಿ, ಸಂತೋಷವನ್ನೂ ಮನಸ್ಸಿಗೆ ಹೆಚ್ಚಾಗಿ ಹಚ್ಚಿಕೋಬೇಡಿ ದುಃಖವನ್ನೂ ಹಚ್ಚಿಸಿಕೊಳ್ಳಬೇಡಿ ಅಂತ. ಅದು ಹೇಗೆ ಸಾಧ್ಯ? ರತ್ನ ನಮ್ಮ ಮನೆ ಸೇರಿದ ಸಂದರ್ಭ ನಿಮಗೆ ನಾನು ಎಂದೂ ಹೇಳಿಲ್ಲ, ಅಲ್ಲವೆ ಡಾಕ್ಟರೆ?"

"ಇಲ್ಲ ಅಂತ ಕಾಣುತ್ತೆ. ಇನ್ನೊಂದು ದಿನ ಹೇಳಿದರಾಯ್ತು. ಏಕೆ ಸುಮ್ಮನೆ ಆಯಾಸ ಮಾಡಿಕೊಳ್ಳುತೀರಿ?" ಎಂದು ಡಾಕ್ಟರು ಮೃದು ವಾಗಿ ಎಚ್ಚರಿಸಿದರು.

"ನಾನು ಮೊದಲೇ ಹೇಳಲಿಲ್ಲವೇ, ಡಾಕ್ಟರೆ: ನನಗೆ ಆಗಿರುವ ಸಂತೋಷದಿಂದ ನನ್ನ ಶಕ್ತಿ ಎರಡರಷ್ಟಾಗಿರುವ ಹಾಗೆ ತೋರುತ್ತೆ. ಮಧ್ಯಾಹ್ನವೆಲ್ಲ ನೀವೇ ಮಾತಾಡಿದಿರಿ. ನಾನು ಏನಾದರೂ ನಡುವೆ ಬಾಯಿ ಹಾಕಿದೆನೆ? ಈಗ ನೀವೆ ಹಿಂದೊಂದು ಸಲ ಹೇಳಿದ್ದಿರಲ್ಲ, ಸಂತೋಷವನ್ನೇ ಆಗಲಿ ದುಃಖವನ್ನೇ ಆಗಲಿ ಬಚ್ಚಿಟ್ಟುಕೊಳ್ಳಬಾರದು, ಅಂತ ಹಾಗೆ ನನ್ನ ಸಂತೋಷವನ್ನ ನಿಮ್ಮೊಂದಿಗೆ ಹಂಚಿಕೊಳ್ಳುತ್ತೇನೆ. ಬಾಧಕವಿಲ್ಲ ತಾನೆ?"

ಸುಂದರಮ್ಮನವರ ಹಟದ ಸ್ವಭಾವ ಡಾಕ್ಟರಿಗೆ ಚೆನ್ನಾಗಿ ಗೊತ್ತು. ಅವರನ್ನು ವಿರೋಧಿಸುವುದರಿಂದ ಅವರ ಮನಸ್ಸಿಗೆ ನೋವಾಗಿ ಅವರ ಆರೋಗ್ಯ ಕದಗೆಡಬಹುದೆಂದೇ ಅವರು ಶಂಕಿಸಿದರು. ಮನಸ್ಸಿಗೆ ನೋವುಂಟುಮಾಡುವುದಕ್ಕಿಂತ ಅವರು ತುಸ ಆಯಾಸಗೊಂಡರೂ ಚಿಂತೆ ಯಿಲ್ಲವೆಂದು ಡಾಕ್ಟರು ತರ್ಕಿಸಿ, ಅವರು ಹೇಳಿದ್ದನ್ನು ಮೌನವಾಗಿ ಕೇಳಲು ನಿರ್ಧರಿಸಿದರು.

"ನೀವು ಮಾತನಾಡುವುದೇ ಬೇಡ ಎನ್ನುವುದಿಲ್ಲ ಈಗ. ಓವಲ್‌ಟೈನ್ ಕುಡಿದಿದ್ದೀರಿ; ಸಂತೋಷವನ್ನ ಕಕ್ಕಿಬಿಡಿ. ಏನಾದರೂ ಅನಾಹುತ ವಾದರೆ ನಾನೇ ಇದ್ದೀನಲ್ಲ, ವೈದ್ಯನಾರಾಯಣ, ನೋಡಿಕೊಳ್ಳುವುದಕ್ಕೆ"

ಎಂದು ಸುಂದರಮ್ಮನವರ ಮಾತಿಗೆ ತಕ್ಕ ವಾತಾವರಣವನ್ನು ಕಲ್ಪಿಸಿದರು. "ಅಂದರೆ ಮಾತ್ರ, ಹತ್ತು ಮಾತಿನಲ್ಲಿ ಹೇಳಬೇಕಾದ್ದನ್ನ ಒಂದೇ ಮಾತಿನಲ್ಲಿ ಹೇಳಿಬಿಡಿ" ಎಂದು ಎಚ್ಚರಿಕೆ ಕೊಟ್ಟರು.

ಸುಂದರಮ್ಮನವರು ಬಹು ಹಿಂದಿನ ಘಟನೆಗಳನ್ನು ನೆನಪಿಗೆ ತಂದುಕೊಂಡು, ಬಹು ನಿಧಾನವಾಗಿ, ಬಹು ಮೆಲ್ಲನೆ, ನಡುವೆ ನಡುವೆ ನಿಲ್ಲಿಸಿ, ಅವನ್ನು ಬಿತ್ತರಿಸತೊಡಗಿದರು. ಡಾಕ್ಟರು ತಮ್ಮ ಕುರ್ಚಿಯನ್ನು ಇನ್ನೂ ಹತ್ತಿರಕ್ಕೆ ಸರಿಸಿಕೊಂಡು, ಸುಂದರಮ್ಮನವರ ಕಥನವನ್ನು ಆಲಿಸುತ್ತ ಕುಳಿತರು. ಹತ್ತು ಹದಿನೈದು ನಿಮಿಷದಲ್ಲಿ ಹೇಳಿ ಮುಗಿಸಬಹುದಾದುದನ್ನು ಹೇಳಲು ಸುಂದರಮ್ಮನವರಿಗೆ ನಲವತ್ತು ನಲವತ್ತೈದು ನಿಮಿಷ ಹಿಡಿಯಿತು.

"ರತ್ನನ್ನ ನೀವು ಚೆನ್ನಾಗಿ ಬಲ್ಲಿರಿ; ನಿಮ್ಮ ಕಣ್ಣ ಮುಂದೆ ಬೆಳೆದ ಹುಡುಗಿ. ಅವಳು ನಮ್ಮ ಮನೆ ಸೇರಿದ ದುಃಖದ ಸಂದರ್ಭ ನಿಮಗೆ ಗೊತ್ತಿಲ್ಲ, ಕೇಳಿ ಹೇಳುತ್ತೇನೆ" ಎಂದು ಸುಂದರಮ್ಮನವರು ಪ್ರಾರಂಭಿಸಿದರು.

## ೧೪

ಸುಂದರಮ್ಮನವರು ಡಾಕ್ಟರ್ ರಘುರಾಂ ಅವರಿಗೆ ಸಂಗ್ರಹವಾಗಿ ಹೇಳಿದ ಸಂಗತಿಗಳ ಸಾರಾಂಶ ಇದು:

ಸುಂದರಮ್ಮನವರ ತಮ್ಮ ನಾರಾಯಣರಾಯ ಬಡಕುಟುಂಬದಲ್ಲಿ ಹುಟ್ಟಿದಾತ. ಮೆಟ್ರಿಕ್ಯುಲೇಷನ್ ಕೂಡ ಪಾಸಾಗಿರಲಿಲ್ಲ. ಮೊದಲು ಪ್ರೈಮರಿ ಶಾಲೆಯ ಉಪಾಧ್ಯಾಯನಾಗಿ ಸೇರಿ, ಆ ಮೇಲೆ ಮಿಡ್ಲ್ ಸ್ಕೂಲ್ ಉಪಾಧ್ಯಾಯನಾಗಿದ್ದ. ಅವನ ದುರದೃಷ್ಟದಿಂದ ಹುಟ್ಟಿದ ಮಕ್ಕಳೆಲ್ಲ ಹುಟ್ಟಿದ ಹತ್ತು ದಿನಗಳೊಳಗಾಗಿ ಸಾಯುತ್ತಿದ್ದುವು. ಒಮ್ಮೆ ಅಕ್ಕನ ಮನೆಗೆ ಬೆಂಗಳೂರಿಗೆ ಬಂದಿದ್ದಾಗ, ಸುಂದರಮ್ಮನವರು ತಮ್ಮನಿಗೆ ನಾಗಪ್ರತಿಷ್ಠೆ ಮಾಡು ಎಂದು ಸಲಹೆ ಮಾಡಿದರು. ಆಗ ಚೆನ್ನಕೇಶವಯ್ಯ

ನವರು ಅಠಾರಾ ಕಚೇರಿಯ ಬಡುಗುಮಾಸ್ತರಾಗಿಯೇ ಇದ್ದರು. ನಾರಾಯಣರಾಯ ಅಕ್ಕನ ಸಲಹೆಯಂತೆ ತನ್ನ ಊರಿಗೆ ಹೋಗಿ, ನಾಗ ಪ್ರತಿಷ್ಠೆಯನ್ನೂ ಮಾಡಿದ. ಆ ಸಮಾರಂಭಕ್ಕೆ ತನ್ನ ಒಬ್ಬಳೇ ಅಕ್ಕನನ್ನು ತಾನೇ ಬಂದು ಕರೆದುಕೊಂಡೂ ಹೋಗಿದ್ದ. "ಏನು ಮದುವೆಯೋ, ಮುಂಜಿಯೋ? ನಾಗಪ್ರತಿಷ್ಠೆಗೆ ಏನು ಊರಿಂದ ಊರಿಗೆ ಹೋಗುವುದು?" ಎಂದು ಚೆನ್ನಕೇಶವಯ್ಯನವರು ಹೆಂಡತಿಯನ್ನು ಗೋಪ್ಯದಲ್ಲಿ ಹಾಸ್ಯ ಮಾಡಿಯೂ ಇದ್ದರು. "ನನ್ನ ಬೆನ್ನಲ್ಲಿ ಬಿದ್ದ ತಮ್ಮ. ನಾಗಪಂಚಮಿ ದಿನವಂತೂ ನಾನೂ ಅವನೂ ಸೇರುವ ಸಂಭವ ಇಲ್ಲ. ನಾಗಪ್ರತಿಷ್ಠೆಯ ದಿನವಾದರೂ ಅಲ್ಲಿ ನಾನಿದ್ದು, ಅವನನ್ನು ಹರಸಬೇಡವೆ? ನನ್ನ ಬಾಯ ಹರಕೆಯ ಫಲದಿಂದಲಾದರೂ ಅವನಿಗೆ ಒಂದು ಮಗುವಾಗಲಿ" ಎಂದು ಸುಂದರಮ್ಮನವರು ಉತ್ತರಕೊಟ್ಟರು. ಆಗ ಶಾಮಣ್ಣನಿಗೆ ಆರು ವರ್ಷ. "ಓಹೋ, ತಮ್ಮನಿಗೆ ಹೆಣ್ಣು ಮಗುವಾದರೆ ತಂದುಕೊಳ್ಳಬೇಕು ಅಂತ ನಿನ್ನ ಬಯಕೆಯೇನೋ?" ಎಂದು ಮತ್ತೆ ಗಂಡ ಹಾಸ್ಯ ಮಾಡಿದರು. "ಯಾಕೆ ಆಗಬಾರದು? ಆದರೆ ಅವನಿಗೆ ಗಂಡು ಮಗುವಾಗಲಿ ಅಂತ ನನ್ನ ಆಸೆ. ಹೆಣ್ಣು ಮಗುವಾದರೆ ತಂದುಕೊಂಡೇ ತಂದುಕೊಳ್ಳುತ್ತೀನಿ, ನೀವು ನೋಡುತ್ತ ಇರುವಿರಂತೆ" ಎಂದು ಸುಂದರಮ್ಮನವರು ಶಪಥ ಮಾಡಿದ ರೀತಿ ನುಡಿದಿದ್ದರು. "ಅಗತ್ಯವಾಗಿ ಹೋಗಿಬಿಟ್ಟು ಬಾ. ನಿನ್ನ ಮಗನಿಗೆ ಹೆಣ್ಣನ್ನೇ 'ರಿಜಿಸ್ಟರು' ಮಾಡಿಕೊಂಡು ಬಾ, ಈಗಲೇ" ಎಂದು ಚೆನ್ನ ಕೇಶವಯ್ಯನವರ ಕಡೆಯ ಟೀಕೆ.

ನಾಗಪ್ರತಿಷ್ಠೆಯ ಫಲವೋ, ಸುಂದರಮ್ಮನವರ ಬಾಯ ಹರಕೆಯ ಫಲವೋ, ಅಂತೂ ನಾರಾಯಣರಾಯನ ಹೆಂಡತಿ ವೆಂಕಟಲಕ್ಷ್ಮಮ್ಮ ಹೆಣ್ಣು ಹೆತ್ತು, ಆ ಮಗು ತಿಂಗಳುಕಾಲ ಉಸಿರಾಡಿದಾಗ ಎಲ್ಲರಿಗೂ ಆಶ್ಚರ್ಯವಾಯಿತು. ನಾಗಪ್ರತಿಷ್ಠೆಯ ಪವಿತ್ರಸ್ಮರಣೆಯಾಗಿ ಮಗುವಿಗೆ ನಾಗರತ್ನ ಎಂದು ಹೆಸರಿಟ್ಟರು.

ಆಗ ನಾರಾಯಣರಾಯ ಮಲೆನಾಡಿನ ಸರ್ವಿಸ್ಸು ಪೂರೈಸುತ್ತಿದ್ದ; ಮಲೇರಿಯಾ ಗಡ್ಡೆಯನ್ನು ಸಂಪಾದಿಸಿಕೊಂಡಿದ್ದ; ಮೈಕೈಯೆಲ್ಲ ಕೃಶವಾಗಿ ಕಣ್ಣು ಹಳದಿಬೀಸಿತ್ತು.

ಮಲೆನಾಡಿನಲ್ಲಿ ಮಲೇರಿಯಾ ಎಷ್ಟು ಸಾಮಾನ್ಯವೋ ಮನೆಗೆ ಹಾವು ನುಗ್ಗುವುದು ಅಷ್ಟೇ ಸಾಮಾನ್ಯ. ವೆಂಕಟಲಕ್ಷ್ಮಿಗೆ ಹಾವಿನ ಹೆಸರೆತ್ತಿದರೇ ಭಯ. ನಾಗರತ್ನ ಹುಟ್ಟಿದ ಹೊಸದರಲ್ಲಿ ಎಂದೂ ಇಲ್ಲದ್ದು ಮನೆಯೊಳಗೆ ಮೂರುಸಲ ಸರ್ಪದರ್ಶನವಾಯಿತು. ಒಮ್ಮೆಯಂತೂ ಒಲೆಯೊಳಗೆ ಬೆಚ್ಚಗೆ ಸುರುಳಿಸುತ್ತಿ ಮಲಗಿತ್ತು. ವೆಂಕಟಲಕ್ಷ್ಮಿ ಬೂದಿ ತೆಗೆಯಲು ಕೈ ಹಾಕಿದಾಗ ಬೆಚ್ಚಗಿರಬೇಕಾದ ಬೂದಿ ಇದೇನು ತಣ್ಣಗಿದೆ ಎಂದು ಕೊಂಡಳು. ಬುಸ್ಸೆಂದು ನಾಗಪ್ಪ ಹೆಡೆಯೆತ್ತಿದಾಗ, ಅವಳು ಕಿಟಾರನೆ ಕಿರಿಚಿ ಹೊರಕ್ಕೋಡಿಬಂದಳು. 'ನಾಗಮ್ಮ' ಎಂದು ಮಗುವನ್ನು ಕೂಗುತ್ತಿದ್ದವಳು, ನಾಗಶಬ್ದೋಚ್ಚಾರಣೆಯೆಂದರೆ ಮೈ ನಡುಕವಾಗುತ್ತಿತ್ತು. ಅಂದಿನಿಂದ ಮಗುವನ್ನು ಸುಮ್ಮನೆ 'ರತ್ನ' ಎಂದು ಕೂಗತೊಡಗಿದಳು. ಆ ಹೆಸರೇ ಸ್ಥಿರವಾಯಿತು.

ಆಗ ನಿಯಮದ ಪ್ರಕಾರ ಮಲೆನಾಡಿನ ಸರ್ವಿಸ್ಸು ಮೂರು ವರ್ಷ. ನಾರಾಯಣರಾಯನ ದುರದೃಷ್ಟದಿಂದ ವಿದ್ಯಾಭ್ಯಾಸದ ಇಲಾಖೆಯ ಗುಮಾಸ್ತರ ಕೃಪಾದೃಷ್ಟಿ ಇನ್ನು ಯಾರ ಮೇಲೋ ಬಿದ್ದಿದ್ದುದರ ಪರಿಣಾಮವಾಗಿ, ಆತನ ಮಲೆನಾಡವಾಸ ಇನ್ನೂ ಒಂದೆರಡು ವರ್ಷ ಮುಂದುವರಿಯಿತು. ಅವನ ಮಲೇರಿಯಾ ರೋಗ ರಕ್ತದ ಕಣ ಕಣಕ್ಕೂ ವ್ಯಾಪಿಸಿತ್ತು.

ಬೆಂಗಳೂರಿನಲ್ಲಿ ಚೆನ್ನಕೇಶವಯ್ಯ ಮೈದುನನ ಪರವಾಗಿ ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳಲ್ಲಿ ಮೊರೆಯಿಟ್ಟು, ಆತನನ್ನು ತುಮಕೂರು ರೇಂಜಿಗೆ ವರ್ಗಮಾಡಿಸಿಕೊಟ್ಟರು.

ಮಲೆನಾಡು ಬಿಟ್ಟು ಹೊಸ ಊರಿಗೆ ಬಂದ ಮೇಲೆ ನಾರಾಯಣರಾಯನ ರೋಗ ವಾಸಿಯಾಗುವ ಬದಲು ಉಗ್ರಸ್ವರೂಪವನ್ನು ತಾಳಿತು. ಆಗ ರತ್ನ ಮೂರು ವರ್ಷದ ಮಗು. ಆ ಊರಿನಲ್ಲಿ ಎರಡು ವರ್ಷವಾದ ಮೇಲೆ, ನಾರಾಯಣರಾಯನ ಚಿಕಿತ್ಸೆಗಾಗಿ, ಸುಂದರಮ್ಮನವರ ಒತ್ತಾಯದ ಸಲಹೆಯ ಮೇರೆಗೆ ಚೆನ್ನಕೇಶವಯ್ಯನವರು ತುಂಬ ಪ್ರಯಾಸಪಟ್ಟು ಮತ್ತೆ ಆತನನ್ನು ಬೆಂಗಳೂರಿಗೆ ವರ್ಗಮಾಡಿಸಿಕೊಟ್ಟರು. ಇದರ ಪರಿಣಾಮವಾಗಿ ಅವರು ಮೈದುನನ ಸಂಸಾರಕ್ಕೆ ನಾನಾ ಬಗೆಯಲ್ಲಿ ನೆರವಾಗಬೇಕಾಗಿ ಬಂದಿತು.

ನಾರಾಯಣರಾಯನ ರೋಗದ ವಿಷಯ ಹಾಗಿರಲಿ. ಐದು ವರ್ಷದ ರತ್ನನ ರೂಪ ಕಂಡು ಚೆನ್ನಕೇಶವಯ್ಯನವರು ಕೂಡ ಮುಗ್ಧರಾಗಿ ಹೋದರು. ಬೆಳೆದ ಹೆಣ್ಣು ಬಲು ಸುಂದರಿಯಾಗುವಳೆಂದು ಬಗೆದರು. ತಮ್ಮ ಹೆಂಡತಿ ಒಂದು ವೇಳೆ ಬಲಾತ್ಕಾರ ಮಾಡಿದರೆ, ಅವಳ ಇಚ್ಛೆಯನ್ನು ವಿರೋಧಿಸುವುದಿಲ್ಲವೆಂದು ತಿಳಿದರು.

ನಾರಾಯಣರಾಯ ಮಾತ್ರ ತನ್ನ ಮನದ ಬಯಕೆಯನ್ನು ರಹಸ್ಯವಾಗಿ ಇಟ್ಟುಕೊಳ್ಳಲಿಲ್ಲ. ಅಕ್ಕನ ಮನೆಗೆ ಬಂದಾಗಲೆಲ್ಲ, "ನಾನು ಇನ್ನು ಹೆಚ್ಚು ದಿನ ಬದುಕುವುದಿಲ್ಲವಮ್ಮ. ಈ ಹಾಳು ಮಲೇರಿಯಾ ಮೂಳೆಗೆ ವ್ಯಾಪಿಸಿಬಿಟ್ಟಿವೆ. ಅವೆಷ್ಟು ಕ್ವಿನಾಗುಳಿಗೆ ನುಂಗಿದ್ದೇನೆಯೋ ದೇವರೇ ಬಲ್ಲ. ನನ್ನ ಮಗಳನ್ನು ನಿನ್ನ ಶಾಮುವಿಗೆ ತಂದುಕೊಳ್ಳುತ್ತೀನಿ ಅಂತ ಮಾತು ಕೊಟ್ಟರೆ ನಾನು ಹಾಯಂತ ಪ್ರಾಣ ಬಿಡುತ್ತೀನಮ್ಮ" ಎಂದು ಮಾತನಾಡುತ್ತಿದ್ದ. "ಬಿಡುತು ಅನ್ನು. ಸಾಯುವ ಮಾತಾಡಬೇಡ. ರತ್ನನ ಮದುವೆಗೆ ಈಗಲೇ ಏನು ಅವಸರ?" ಎನ್ನುತ್ತಿದ್ದರು ಸುಂದರಮ್ಮನವರು.

ನಾರಾಯಣರಾಯ ನಿರೀಕ್ಷಿಸಿದ್ದಂತೆ, ಬಹು ಬೇಗನೆಯೆ ಮೃತ್ಯು ಅವನನ್ನು ಕರೆದೊಯ್ಯಲು ಬಂದಿತು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಮೃತ್ಯುಶಯ್ಯೆಯ ಬಳಿ ಸುಂದರಮ್ಮನವರೂ, ಚೆನ್ನಕೇಶವಯ್ಯನವರೂ, ವೆಂಕಟಲಕ್ಷ್ಮಮ್ಮ ಮತ್ತು ಆಕೆಯ ಅಣ್ಣ ವೆಂಕಟರಾಮಯ್ಯನೂ ಇದ್ದರು. ಸಾಯುವಾಗ ನಾರಾಯಣರಾಯನ ಪ್ರಜ್ಞೆ ತಿಳಿಯಾಗಿತ್ತು. ರತ್ನನನ್ನು ಶಾಮುವಿಗೆ ತಂದುಕೊಳ್ಳುವುದಾಗಿ ಅವನು ತನ್ನ ಅಕ್ಕನಿಂದ ವಾಗ್ದಾನಪಡೆದು, ತುಟಿಗಳ ಮೇಲೆ ತೃಪ್ತಿಯ ನಗೆ ತಂದುಕೊಂಡು ಕಣ್ಣುಮುಚ್ಚಿದ. ಅಕ್ಕ–ತಮ್ಮ ಇವರ ಈ ಒಪ್ಪಂದಕ್ಕೆ ನೆರೆದಿದ್ದ ಬಂಧುಗಳು ಸಾಕ್ಷಿಗಳಾಗಿದ್ದು, ಮೌನದ ಸಮ್ಮತಿಯಿತ್ತಿದ್ದರು.

ವೆಂಕಟರಾಮಯ್ಯನಿಗೆ ಅವನ ಹಳ್ಳಿಯಲ್ಲಿ ಸ್ವಲ್ಪ ಹೊಲ ಗದ್ದೆಯಿದ್ದಿತು. ಅವನು ತನ್ನ ತಂಗಿಯನ್ನೂ ರತ್ನನನ್ನೂ ಜೊತೆಯಲ್ಲಿ ಕರೆದೊಯ್ದಿದ್ದರೆ, ಆಕೆಗೂ ಮಗುವಿಗೂ ಬೇರೆ ಯಾರೂ ದಿಕ್ಕಿರಲಿಲ್ಲ. ಚೆನ್ನಕೇಶಯ್ಯನವರ ಅಂದಿನ ಸ್ಥಿತಿಯಲ್ಲಿ ಅವರು ಎರಡು ಜೀವಗಳ ಸಂರಕ್ಷಣೆಯ ಭಾರವನ್ನು ಹೊರಲು ಅಸಮರ್ಥರಾಗಿದ್ದರು. ನಾರಾಯಣರಾಯನ ಅಂತ್ಯಸಂಸ್ಕಾರ,

ದಿನಕರ್ಮಗಳ ಭಾರವನ್ನು ಅವರೇ ಹೊತ್ತಿದ್ದರು. ಆದರೂ, ಹೆಂಡತಿಯ ಬಯಕೆಗೆ ಮನ್ನಣೆ ಕೊಟ್ಟು, ರತ್ನನನ್ನು ಸಲಹುವ ಹೊಣೆಯನ್ನು ತಾವು ವಹಿಸುವುದಾಗಿಯೂ ಅವಳು ಬೆಳೆದಮೇಲೆ ತಮ್ಮ ಹಿರಿಯಮಗ ಶಾಮನಿಗೆ ಅವಳನ್ನು ತಂದುಕೊಳ್ಳುವುದಾಗಿಯೂ, ಅವಳನ್ನು ಬಿಟ್ಟುಹೋಗಬೇಕೆಂದೂ ವೆಂಕಟಲಕ್ಷ್ಮಿಗೆ ತಿಳಿಸಿದರು. ಈ ಸಲಹೆಗೆ ವೆಂಕಟರಾಮಯ್ಯ ಸಂತೋಷದಿಂದ ಒಪ್ಪಿದ. ಅಣ್ಣನ ಇಚ್ಛೆ ಹಾಗೆಂದು ಮಗಳಿಂದ ಅಗಲಲು ತಾಯಿಯೂ ಸಿದ್ಧವಾಗಬೇಕಾಯಿತು.

ಆರು ತುಂಬಿದ ರತ್ನ ಸುಂದರಮ್ಮನವರ ಮನೆ ಸೇರಿದಳು. ಅವಳು ಮನೆಗೆ ಬಂದ ವರ್ಷವೇ ಚೆನ್ನಕೇಶವಯ್ಯನವರು ತಮ್ಮ ಕೆಲಸದಿಂದ ನಿವೃತ್ತರಾಗುವ ಆಲೋಚನೆ ಮಾಡಿದ್ದು. ಮುಂದೆ ಅವರ ಭಾಗ್ಯಚಕ್ರ ಹೊರಳಿದಾಗ, "ರತ್ನ ನಮ್ಮ ಮನೆಗೆ ಬಂದ ಅಮೃತಘಳಿಗೆ" ಎಂದುಕೊಳ್ಳ ತೊಡಗಿದರು. ರತ್ನನನ್ನು ಮನೆಯ ಸೊಸೆಯಾಗಿ ಮಾಡಿಕೊಳ್ಳಲು ಅವರು ಸಂಕಲ್ಪಿಸಿದರು. ರತ್ನ ಶಾಮಣ್ಣ ಇವರ ಮದುವೆ ಅವರ ಕಡೆಗಾಲದ ಬಯಕೆಯೂ ಆಗಿತ್ತು. ಎಲ್ಲರೂ ಬಯಸಿದ್ದ ಈ ಬಯಕೆ ಸುಂದರಮ್ಮನವರಲ್ಲಿ ಸುಪ್ರತಿಷ್ಠಿತವಾಗಿ ನೆಲಸಿತ್ತು.

ಇಂದು ಅವರ ಬಯಕೆ ಪೂರೈಸುವ ಶುಭ ಸೂಚನೆ ಕಂಡಿತು. ಅವರ ಹಿಗ್ಗಿಗೆ ಪಾರವೇ ಇರಲಿಲ್ಲ.

## ೧೫

ಸುಂದರಮ್ಮನವರ ಎಂದಿನ ಆರೋಗ್ಯಸ್ಥಿತಿ ಮತ್ತೆ ಅವರಿಗೆ ಲಭಿಸಿತ್ತು.

ಶಾಮಣ್ಣ-ರತ್ನ ಇವರ ಮದುವೆಯ ನಿಶ್ಚಿತಾರ್ಥ ಸುಂದರಮ್ಮನವರ ಮನಸ್ಸಿನಲ್ಲಿಯೇ ನಡೆದುಹೋಯಿತು. ಅವರು ಶಾಮಣ್ಣ ಮೈಸೂರಿನಲ್ಲಿ ಎಂ. ಎ. ಪರೀಕ್ಷೆಗೆ ಓದಿ, ಅನಂತರ ಸೀಮೆಗೆ ಹೋಗಲು ತಮ್ಮ ಅಂಗೀಕಾರ ಮುದ್ರೆಯನ್ನೂ ಒತ್ತಿದರು. ಹಾಗೆಂದು ಪ್ರಕಟವಾಗಿ ಹೇಳಲಿಲ್ಲ. ಯಾವುದೋ ಸಂದರ್ಭದಲ್ಲಿ ಮಾತು ಬಂದಾಗ, ಶಾಮಣ್ಣ

ಒಬ್ಬನೇ ಇದ್ದಾಗ, "ಅಪ್ಪಾ, ನನ್ನ ಮನಸ್ಸಿನ ಬಯಕೆಯನ್ನು ನೀನು ನಡಸಿಕೊಡಲು ಒಪ್ಪಿದ್ದೀಯೆ. ನಿನ್ನ ಇಷ್ಟವನ್ನು ನಾನು ನಡಸದಿದ್ದರೆ ನ್ಯಾಯವೆ? ಇಷ್ಟಕ್ಕೂ ಇನ್ನೂ ಒಂದೆರಡು ವರ್ಷ ಆದಮೇಲೆ ತಾನೆ ಆ ಮಾತು? ನೀನು ಇಷ್ಟಪಟ್ಟ ಪ್ರಕಾರ ಮದುವೆಯೂ ನಿನ್ನ ಎಂ.ಎ. ಓದು ಮುಗಿದ ಮೇಲೆಯೆ ಆಗಲಿ, ನನ್ನದೇನೂ ಅಭ್ಯಂತರವಿಲ್ಲ" ಎಂದು ಅವನಿಗೆ ಆಶ್ವಾಸನವನ್ನು ನೀಡಿದ್ದರು. "ರತ್ನ ರೂಪವಂತೆ ಅಲ್ಲದಿದ್ದರೆ ನಾನು ಹೀಗೆ ಬಲಾತ್ಕಾರ ಮಾಡುತ್ತಲೇ ಇರಲಿಲ್ಲ. ನಿನ್ನ ಇಷ್ಟಕ್ಕೆ ವಿರೋಧವಾಗಿ ಅವಳನ್ನ ನಿನ್ನ ಕೊರಳಿಗೆ ಕಟ್ಟುತ್ತಿದ್ದೀನಿ ಎನ್ನುವ ಭಾವನೆ ನಿನಗೆ ಬರಬಾರದಲ್ಲ? ಹಾಗೇನಾದರೂ ಇದ್ದರೆ ಈಗಲೇ ಹೇಳಿಬಿಡು" ಎಂದು ತಮ್ಮ ಹೆಜ್ಜೆ ಹಿಂದಿಡುವ ರೀತಿಯಲ್ಲಿ, ಅವನಿಗೆ ಸಂಪೂರ್ಣ ಕಾರ್ಯ ಸ್ವಾತಂತ್ರ್ಯವನ್ನು ಕೊಟ್ಟ ರೀತಿಯಲ್ಲಿ ನುಡಿದರು. ತಾಯಿಯ ಈ ಉಪಚಾರ ವಾಕ್ಕು ಮಗನಿಗೆ ಅರ್ಥವಾಗದೆ ಹೋಗಲಿಲ್ಲ. "ಮಗುವಿಗೆ ಹಾಲು ಕುಡಿಯ ಕೊಟ್ಟು, ಕುಡಿದಾದ ಮೇಲೆ ಸೇರದೆ ಹೋದರೆ ಕಕ್ಕಿ ಬಿಡು ಎಂದ ಹಾಗಿದೆಯಮ್ಮಾ, ನಿನ್ನ ಮಾತು" ಎಂದು ಶಾಮಣ್ಣ ನಕ್ಕ. "ಬಲವಂತವಾಗಿ ಕುಡಿಸಿರುವುದೂ ಹಾಲು ತಾನೇ, ವಿಷವಲ್ಲವಲ್ಲ" ಎಂದು ತಾಯಿ ಮಗನ ನಗೆಗೆ ನಗೆ ಬೆರಸಿದ್ದರು.

ಸುಂದರಮ್ಮನವರ ಮನಸ್ಸನ್ನು ಕೊರೆಯುತ್ತಿದ್ದ ಸಂದೇಹ ಒಂದೇ: ತಾವು, ಡಾಕ್ಟರು, ಮತ್ತು ಶಾಮಣ್ಣ ಈ ಮೂವರಲ್ಲಿ ಮಾತ್ರ ಆಗಿದ್ದ ಗೊತ್ತುಪಾಡನ್ನು ರತ್ನನಿಗೆ ತಿಳಿಸಿ, ಶಾಮಣ್ಣನನ್ನ ಮದುವೆಯಾಗಲು ಅವಳ ಒಪ್ಪಿಗೆಯನ್ನೂ ಪಡೆಯುವುದೇ, ಇಲ್ಲ ಆ ಸಮಯ ಬಂದಾಗ ತಮ್ಮ ನಿರ್ಧಾರವನ್ನು ಅವಳಿಗೆ ಸುಮ್ಮನೆ ತಿಳಿಸಿಬಿಡುವುದೆ? ಯೋಚಿಸಿದಷ್ಟೂ ಅವರ ತೂಗುಮನಸ್ಸಿನ ತೂಗಾಟಕ್ಕೆ ವೇಗ ದೊರಕಿತು; ಅದು ನಿಲುಗಡೆಗೆ ಬರಲಿಲ್ಲ.

"ಶಾಮಣ್ಣನೇನೋ ರತ್ನನ್ನ ಮದುವೆಯಾಗಲು ಒಪ್ಪಿಗೆ ಕೊಟ್ಟ ಹಾಗಾಯಿತು. ಅವಳು ಇವನನ್ನು ಮದುವೆಯಾಗಲು ಒಪ್ಪುವಳೇ? ಬಾಯಿಬಿಟ್ಟು ಒಲ್ಲೆ ಎನ್ನದಿದ್ದರೂ, ಉತ್ಸಾಹದಿಂದ ಸಂತೋಷದಿಂದ್ಲ ಮದುವೆಯಾಗಲು ಒಪ್ಪುವಳೇ?" ಎಂದು ತಮಗೆ ತಾವೆ ಪ್ರಶ್ನೆ ಕೇಳಿಕೊಳು

ವರು. "ಒಪ್ಪದೇ ಏನು ಮಾಡುತಾಳೆ. ಅವಳೂ ತಿಳಿದುಕೊಂಡೇ ಇದ್ದಾಳೆ ತಾನು ಎಂದಿದ್ದರೂ ಶಾಮನ ಹೆಂಡತಿ ಅಂತ. ಹಾಗೆ ತಿಳಿದುಕೊಳ್ಳದೆ ಇದ್ದಿದ್ದರೆ, ರಾಜುವಿನ ಸಂಗಡ ಇದ್ದ ಹಾಗೆ ಇವನ ಸಂಗಡಲೂ ಸಲಿಗೆ ಯಿಂದಲೇ ಇರುತ್ತಿದ್ದಳು. ನಾಣಿ ಬದುಕಿದ್ದಾಗ ಶಾಮನಿಗೂ ರತ್ನನಿಗೂ ಅವರ ಎದುರಿಗೆಯೇ ಇಬ್ಬರಿಗೂ ಗಂಟುಹಾಕಿದ್ದ. ಇಬ್ಬರನ್ನೂ ಗಂಡ ಹೆಂಡಿರನ್ನಾಗಿ ಮಾಡಿದ್ದ. ಇಬ್ಬರಿಗೂ ಅದರ ನೆನಪಿದೆ. ಅದಕ್ಕೇ ಮುಂದೆ ಗಂಡಹೆಂಡಿರು ಎಂಬುದನ್ನು ಅರಿತು ಇಬ್ಬರಿಗೂ ಇಲ್ಲದ ಹುಸಿ ಬಿಗುಮಾನ. ಇದೇತಾನೇ ನಿಜವಾದ ಪ್ರೀತಿ? ಪ್ರೀತಿ ಪ್ರೀತಿ ಪ್ರೀತಿ ಅಂತ ಸಾವಿರ ಸಲ ಬಾಯಲ್ಲಿ ಉಚ್ಚರಿಸಿದರೆ ಪ್ರೀತಿ ಉಕ್ಕುತ್ತದೆಯೇ? ನಮ್ಮ ಕಾಲದಲ್ಲಂತೂ ಪ್ರಸ್ತ ಆಗುವವರೆಗೆ ಗಂಡಹೆಂಡಿರು ಒಬ್ಬರನ್ನೊಬ್ಬರು ಮಾತ ನಾಡಿಸುವುದೇ ಮಹಾಪಾಪ. ಎಷ್ಟೇ ಆಗಲಿ ನಮ್ಮ ಕಾಲದ ರೀತಿಯಲ್ಲಿ ಬೆಳೆಯುತ್ತಿದಾರೆ, ರತ್ನ ಶಾಮ ಇಬ್ಬರೂ. ಅವರ ನಡತೆ ಇರಬೇಕಾದದ್ದೇ ಹಾಗೆ...."

ಹೆಚ್ಚಾಗಿ ಓಡಾಡದೆ, ಯಾವಾಗಲೂ ಕುಳಿತಕಡೆಯೇ ಕುಳಿತೊ, ಮಲಗಿದ ಕಡೆಯೇ ಮಲಗಿಯೋ ಇರುತ್ತಿದ್ದ ಸುಂದರಮ್ಮನವರಿಗೆ ಈ ರೀತಿ ಹಿಂದಿನ ನೆನಪುಗಳನ್ನು ನೆನೆಯುವುದು, ಮುಂದೆ ಆಗಬಹುದಾದ್ದನ್ನು ಚಿತ್ರಿಸಿಕೊಳ್ಳುವುದು, ಅವರ ಸ್ವಭಾವವಾಗಿಬಿಟ್ಟಿದ್ದಿತು.

ಬೇಡ ಬೇಡವೆಂದರೂ ಶಾಮಣ್ಣ ರಾಜು ರತ್ನ ಇವರ ಬಾಲ್ಯದ ನೆನಪಿನ ಚಿತ್ರಗಳು ಸುಳಿದು ಹೋಗುತ್ತಿದ್ದವು.

* * * *

ನಾರಾಯಣರಾಯ ಬೆಂಗಳೂರಿಗೆ ಬಂದ ಹೊಸತು; ಗೌರಿಯ ಹಬ್ಬ ಎಂಟು ದಿನ ಇದೆ ಎನ್ನುವ ಮುನ್ನ ನಾರಾಯಣರಾಯ ಹೆಂಡತಿ ವೆಂಕಟಲಕ್ಷ್ಮಿಯ ಕೂಡ, ತವರುಮನೆಯ ಅರಿಶಿನ ಕುಂಕುಮ ಕಳಿಸಿ ಕೊಟ್ಟಿದ್ದ. ಅಕ್ಕನಿಗೆ ಒಂದು ಒಳ್ಳೆಯ ರವಿಕೆಕಣ ಕೊಡಬೇಕೆಂದು ಅವನ ಮನಸ್ಸು. ಬೆಂಗಳೂರು ಸಂಸಾರ, ಖಾಯಿಲೆಗೆ ಪಥ್ಯಪಾನದ ವೆಚ್ಚ ಇವುಗಳ ದೆಸೆಯಿಂದ ಅವನು ತೀರ ರಿಕ್ತಸ್ಥಿತಿಯಲ್ಲಿದ್ದ. ಬಡ ಶಾಲಾ ಉಪಾಧ್ಯಾಯ ಎಂದಮೇಲೆ ಒಡಲು ಹೊರೆಯುವ ಕಥೆ ಕೇಳಲೇಬೇಕಾಗಿಲ್ಲ.

ಅಕ್ಕನಿಗೆ ಕಣ ಕೊಡಲು ಕೈಯಲ್ಲಿ ಕಾಸಿಲ್ಲದೆ, ಮುಖ ತೋರಿಸಲು ಸಂಕೋಚವಾಗಿ, ಖಾಯಿಲೆಯ ನೆಪವನ್ನು ಮುಂದೊಡ್ಡಿ, ಹೆಂಡತಿಯೊಂದಿಗೆ ಅರಿಶಿನ ಕುಂಕುಮ ಎಂಟಾಣೆ ದಕ್ಷಿಣೆ ಕಳಿಸಿಕೊಟ್ಟಿದ್ದ. ವೆಂಕಟಲಕ್ಷ್ಮಿ ಸಾಧಾರಣ ಮಡಿ ಸೀರೆ ಉಟ್ಟು, ರತ್ನನೊಂದಿಗೆ ತನ್ನ ಅತ್ತಿಗಮ್ಮನ ಮನೆಗೆ ಬಂದಿದ್ದಳು. ರತ್ನನ ಮೈಯನ್ನು ಮುಚ್ಚಿದ್ದ ಚೀಟಿಯ ಲಂಗವೊ, 'ತಾತಾ ತೂತಾ'ಗಿದ್ದಿತು. ಆಗ ಸುಂದರಮ್ಮನವರೇನು ಹೇಳಿಕೊಳ್ಳು ವಂತಹ ಒಳ್ಳೆಯ ಸ್ಥಿತಿಯಲ್ಲಿ ಇರಲಿಲ್ಲ. ಆದರೆ, ತಮ್ಮನ ಸ್ಥಿತಿ ಯೊಂದಿಗೆ ಹೋಲಿಸಿಕೊಂಡರೆ ಚೆನ್ನಕೇಶವಯ್ಯನವರದು ಅನುಕೂಲಸ್ಥಿತಿ ಎಂದು ಅವರ ಭಾವನೆ. ಅದು ನಿಜವೂ ಹೌದು. ರತ್ನನ ಹರುಕುಲಂಗ ನೋಡಿ ಅವರ ಮನಸ್ಸು ಕಳಕ್ಕೆಂದಿತು. ಅವಳು ತಮ್ಮ ಮುಂದಿನ 'ಮನೆಯ ಸೊಸೆ' ಎಂಬ ಮಮತೆ ಅವರಲ್ಲಿ ಆಗಲೇ ಮೂಡಿತ್ತು. ವೆಂಕಟ ಲಕ್ಷ್ಮಿ ಬಹಳ ಸಂಕೋಚಪಟ್ಟು ಮುಂದಿಟ್ಟ ಅರಿಶಿನ ಕುಂಕುಮವನ್ನು ಸುಂದರಮ್ಮನವರು ಸಂತೋಷದಿಂದ ಸ್ವೀಕರಿಸಿ, ಒಳಕ್ಕೆ ಹೋಗಿ ತಮ್ಮ ಪೆಟ್ಟಿಗೆಯಲ್ಲಿದ್ದ ಒಂದು ಜರತಾರಿಯ ರೇಷ್ಮೆ ಕಣವನ್ನು ತಂದು, ತಾಂಬೂಲ ಅರಿಶಿನ ಕುಂಕುಮ ಸಮೇತ ರತ್ನನಿಗೆ ಕೊಟ್ಟು ಅವಳನ್ನು ಅಪ್ಪಿಕೊಂಡು ಮುದ್ದಾಡಿದರು. ಆಗ ಮನೆಯಲ್ಲಿ ರಾಜು ಇದ್ದ; ಶಾಮು ಇರಲಿಲ್ಲ. "ಇದೇನು ಅತ್ತಿಗಮ್ಮ, ನೀವು ಕಣ ಕೊಡುವುದು!" ಎಂದು ವೆಂಕಟಲಕ್ಷ್ಮಿ ಸಂತೋಷದ ಬೆರಗಿನೊಡನೆ ಕೇಳಿದಳು. "ನನ್ನ ಸೊಸೆಗೆ ನಾನು ಬೇಕಾದ್ದು ಮಾಡುತೀನಿ. ಅದಕ್ಕೆ ನಿನ್ನ ಆಕ್ಷೇಪಣೆ ಇಲ್ಲವಲ್ಲ?" ಎಂದರು ಸುಂದರಮ್ಮನವರು. "ಅವಳ ಮುಖದ ರೋಸೋ ಬಟ್ಟೆ ಬರೆಯೋ. ಒಂದಕ್ಕಿಂತ ಒಂದು ಏನು ಹೇಳಲೋ. ಬಡವರ ಮನೆಯ ಈ ಕೊಳಕಿಯನ್ನ ನೀವು ನಿಜವಾಗಿ ತಂದುಕೊಳ್ಳುತ್ತೀರಾ ಅತ್ತಿಗಮ್ಮ?" ಎಂದು ವೆಂಕಟಲಕ್ಷ್ಮಿ ನಿಜವಾದ ಸಂದೇಹದಿಂದಲೇ ಕೇಳಿದ್ದಳು. "ಅಲ್ಲ ಕಣೇ ಎಂಟೂ! ಇದೇನೆ ನೀನಾಡುವ ಮಾತು! ನಮ್ಮ ಮನೆಯಲ್ಲಿ ಅದು ಏನೇ ಸಂಪತ್ತು ಸೂರೆ ಹೋಗುತ್ತಿರುವುದು, ನೀನು ಕಾಣದ್ದು? ಒಳ್ಳೆ ಮಾತು ಹೇಳಿದೆ. ಮುಖದ ರೋಸು ತೊಳೆದರೆ ಹೋಗುತ್ತೆ. ಒಡವೆ ವಸ್ತ್ರ ಕಟ್ಟಿದ ಬಣ್ಣ, ತೊಟ್ಟ ಚೆಂದ; ಅವೆಲ್ಲ ನಮ್ಮಂಥವರಿಗೆ. ರತ್ನನಿಗೇಕೆ

ಅವೆಲ್ಲ? ಅವಳು ಹುಟ್ಟು ಚೆಲುವೆ. ಬೆಳಗಿದರೆ ಹಿತ್ತಾಳೆ ಚಿನ್ನವಾಗುತ್ತೆಯೆ? ಒಪ್ಪ ಇಡದೆ ಹೋದರೂ ಚಿನ್ನ ಚಿನ್ನವೇ. ನಮ್ಮ ರತ್ನ ರತ್ನವೇ" ಎಂದು ಸುಂದರಮ್ಮನವರು ರತ್ನನ ಗಲ್ಲ ಹಿಡಿದು ಮುದ್ದಿನಿಂದ ಅದುಮಿದರು. ಹುಡುಗಿಯಾದರೂ ರತ್ನನ ಮನಸ್ಸಿನಲ್ಲಿ ಮದುವೆಯ ಭಾವ ಮೂಡಿತು. "ನನ್ನ ಸೊಸೆಯಾಗುತ್ತೀಯೋ ಇಲ್ಲವೋ ರತ್ನ?" ಎಂದು ಕೇಳಿದಾಗ, ಲಜ್ಜೆಯ ಲಾವಣ್ಯ ಕೊಡುಗೂಸಿನ ಮುಖಕ್ಕೆ ಕಳೆ ಕೊಟ್ಟಿತು. ಕಲಿಸದೆ ಬರುವ ಕಾಮನ ವಿದ್ಯೆಯ ಓನಾಮ ಹೃದಯ ಪಟದಲ್ಲಿ ಲಿಖಿತವಾಯಿತು; ಹೆಮ್ಮೆಯ ಹೂ ಬಿಟ್ಟು ಲಜ್ಜೆಯ ಲತೆಯಂತೆ ಪುಟ್ಟ ತೆಳು ಒಡಲನ್ನು ಬಳುಕಿ ಬಾಗಿಸುತ್ತ, ರಾಜುವನ್ನು ಕಡೆಗಣ್ಣ ನೋಟದಿಂದ ನೋಡಿದಳು. ಸಂಭಾಷಣೆಯನ್ನು ಆಲಿಸುತ್ತಾ, ತೊಡೆಯ ಮೇಲೆ ಪುಸ್ತಕವನ್ನು ಓದುವ ಶಾಸ್ತ್ರಕ್ಕೆಂದು ಇಟ್ಟುಕೊಂಡು, ಬಣ್ಣದ ಕಾಗದದಲ್ಲಿ ದೋಣಿ ಚಿಟ್ಟೆ ಷರಾಯಿ ಲಂಗ ಎಂದು ಏನೇನೋ ಕ್ರೀಡಾವಸ್ತುಗಳನ್ನು ಮಾಡುತ್ತ ಕುಳಿತಿದ್ದ ರಾಜು ಕಡೆಗಣ್ಣ ನೋಟ ತನ್ನ ಕಡೆಗೆ ಎಸೆದು ಬಂದದ್ದನ್ನು ಗಮನಿಸಿದನು. ಆ ಕ್ಷಣದಲ್ಲಿ ಮಾತ್ರ ಅವರಿಬ್ಬರು ತಾವು ಗಂಡ ಹೆಂಡಿರು ಎಂದು ಭಾವಿಸಿಕೊಂಡರು. ಆದರೂ, ರತ್ನನೇನೋ ಹುಸಿ ಬಿಂಕದಿಂದ ಕೊರಲು ಕೊಂಕಿಸಿ, ಜಿಂಕೆಗಣ್ಣನ್ನರಳಿಸಿ ಹುಸಿ ಮುನಿಸಿನ ಹೊಗರು ಬೀರಿ, "ನಾನು ರಾಜುವನ್ನ ಮದುವೆ ಮಾಡಿಕೊಳ್ಳೋಲ್ಲ" ಎಂದಳು. "ರಾಜುವನ್ನಲ್ಲ ಕಣೇ, ನಮ್ಮ ಶಾಮನ್ನ" ಎಂದಾಗ, ಆ ಹೊತ್ತಿನ ಮಟ್ಟಿಗೆ ರತ್ನನ ಬಿಗುಮಾನ ಸಡಿಲಿತು. ಮಿಂಚಿದ ಮದುವೆಯ ಭಾವನೆ ಮಿಂಚಿನ ವೇಗದಲ್ಲಿಯೇ ಮಾಯವಾಯಿತು. "ಅಂದಹಾಗೆ, ರಾಜುವಿಗೆ ಎಷ್ಟು ವಯಸ್ಸು?" ಎಂದು ಕೇಳಿದಳು ವೆಂಕಟಲಕ್ಷ್ಮಿ. "ಮೊನ್ನೆ ಜ್ಯೇಷ್ಠಕ್ಕೆ ಏಳು ತುಂಬಿತು" ಎಂದರು ಸುಂದರಮ್ಮನವರು. "ಇನ್ನು ಒಂದೆರಡು ವರ್ಷ ವ್ಯತ್ಯಾಸ ಇದ್ದರೆ ಸರಿಹೋಗುತ್ತಿತ್ತು" ಎಂದಳು ವೆಂಕಟಲಕ್ಷ್ಮಿ. "ಅದಕ್ಕೇ ತಾನೆ ನಾನು ನಮ್ಮ ಶಾಮುನಿಗೆ ಅಂತ ಹೇಳಿದ್ದು? ನಾಣಿಯೂ ಹಾಗೇ ಅಂದು ಕೊಂಡಿದ್ದಾನೆ. ನೀನು ದೊಡ್ಡ ಮನಸ್ಸು ಮಾಡಬೇಕಮ್ಮ" ಎಂದು ಸುಂದರಮ್ಮನವರು ನಾದಿನಿಗೆ ಉಪಚಾರೋಕ್ತಿಗಳನ್ನಾಡಿದರು. "ಹೆಣ್ಣು ತಂದುಕೊಳ್ಳುವರು ನೀವು ದೊಡ್ಡ ಮನಸ್ಸು ಮಾಡಬೇಕೋ ನಾನೋ"

ಎಂದು ಅತ್ತಿಗೆಯ ಮಾತಿಗೆ ನಾದಿನಿ ನಕ್ಕರು. "ನಾವಾಗಿ ಬಯಸಿ ಬಂದಾಗ ನೀವು ಒಲ್ಲೆ ಎನ್ನಬಹುದಲ್ಲಮ್ಮಾ?"—ಸುಂದರಮ್ಮನವರೆಂದರು. "ನಿಮ್ಮ ತಮ್ಮನ ಬಯಕೆಯೂ ನಿಮ್ಮದರೊಂದಿಗೆ ಮೇಳವಿಸಿದೆಯಲ್ಲ! ನಾನು 'ಸುವ್ವಿ' ಎಂದರಾಯಿತು, ಅಷ್ಟೇ ತಾನೆ" ಎಂದು ವೆಂಕಟಲಕ್ಷ್ಮಿ ಒಪ್ಪಿಯೇ ನುಡಿದಳು. ಆದರೂ ಮತ್ತೊಮ್ಮೆ, "ರಾಜುವಿಗೆ ಇನ್ನೆರಡು ವರ್ಷವಾದರೂ ಹೆಚ್ಚಾಗಿದ್ದರೆ ಚೆನ್ನಾಗಿತ್ತು" ಎಂದುಕೊಂಡಳು ಮನಸ್ಸಿನಲ್ಲಿ. ಈ ಮಾತು ನಡೆಯುತ್ತಿದ್ದಾಗ ರತ್ನ ರಾಜುವಿನ ಬಳಿ ಮಂಡಿಯೂರಿ ಕುಳಿತು, ಚಿಕ್ಕ ತನದ ಅಕ್ಕರೆಯ ನುಡಿಗಳನ್ನಾಡಿ, ರಾಜುವಿನಿಂದ ಬಣ್ಣದ ಕಾಗದದ ಲಂಗ ಕುಪ್ಪಸಗಳನ್ನು ಎಳೆಯೊಲವಿನ ಕಾಣಿಕೆಯಾಗಿ ಪಡೆದಿದ್ದಳು. ರಾಜು ತನ್ನ ಗಂಡನಾಗುವುದಿಲ್ಲ ಎಂಬ ಮಾತು ಕೇಳಿ ಅವನೊಂದಿಗೆ ಸಲಿಗೆ ಬೆಳಸುವ ಸವಿಗೆ ಮನಸೋತಳು; ರಾಜುವನ್ನು ಮುಂದೆ ಮದುವೆಯಾಗು ವೆನೆಂಬ ಭಾವನೆಯ ಗುಳ್ಳೆ ಕಾಣಿಸಿಕೊಂಡಷ್ಟೇ ಬೇಗನೆ ಒಡೆಯಿತು; ನಿರಾಶೆಗೊಳ್ಳುವ ವಯಸ್ಸಲ್ಲದ್ದರಿಂದ, ಅವನೊಡನೆ ಮುಂದಿನ ಮದುವೆ ಗಿಂತ ಇಂದಿನ ಸಲಿಗೆಯ ಒಡನಾಟವೇ ಹೆಚ್ಚು ಬೆಲೆಯುಳ್ಳದ್ದೆಂದು ತೋರಿತು ಅವಳಿಗೆ.

* * * *

ಸುಂದರಮ್ಮನವರ ಒತ್ತಾಯದ ಆಹ್ವಾನವನ್ನು ಒಪ್ಪಿ, ನಾರಾಯಣ ರಾಯ ಹೆಂಡತಿಯನ್ನೂ ಒಬ್ಬಳೇ ಮಗಳನ್ನೂ ಕರೆದುಕೊಂಡು ಗೌರಿ ಗಣೇಶ ಹಬ್ಬಗಳಿಗೆ ಅಕ್ಕನ ಮನೆಗೇ ಬಂದಿದ್ದ. ಅಕ್ಕ ಪ್ರೀತಿಯಿಂದ ತನ್ನ ಮಗಳಿಗೆ ಕೊಟ್ಟಿದ್ದ ಕಣದಿಂದ ಅವಳಿಗೆ ಒಂದು ಹೊಸಲಂಗವನ್ನು ಹಬ್ಬಕ್ಕೆಂದು ಹೊಲಿಸಿದ್ದ; ಜೊತೆಗೆ, ಇದ ಬದ್ದ ಆಣೆ ಪಾವಲಿಗಳನ್ನೆಲ್ಲ ಕೂಡಿಹಾಕಿ ಲಂಗಕ್ಕೆ ಒಪ್ಪುವಂತೆ ಒಂದು ಕೃತಕ ರೇಷ್ಮೆ ಬಟ್ಟೆಯ 'ಜಂಪರ'ನ್ನೂ ಹೊಲಿಸಿಕೊಟ್ಟಿದ್ದ. ಈ ಒಳ್ಳೆಯ ಉಡುಗೆ ತೊಡುಗೆಯಲ್ಲಿ ರತ್ನ ಆಗತಾನೆ ಅರಳಿದ ರೋಜ ಹೂವಿನಂತೆ ಎಲ್ಲರಿಗೂ ಮುದ್ದಾಗಿ ಕಂಡಳು.

ಸುಂದರಮ್ಮನವರ ಮನೆಯಲ್ಲಿ 'ಗೌರಿ'ಯನ್ನು ಕೂರಿಸುವ ಪದ್ಧತಿ ಇರಲಿಲ್ಲ; ಹತ್ತಿರದ ಮನೆಯೊಂದಕ್ಕೆ ಪೂಜೆಗೆ ಹೋಗುತ್ತಿದ್ದರು. ಈ ಸಲ ನಾದಿನಿ ಮತ್ತು ಸೋದರ ಸೊಸೆಯೊಂದಿಗೆ ಹೋಗಿದ್ದರು. ಎಂದಿಗಿಂತ

ಇಂದು ಅವರು ರತ್ನನನ್ನು ತನ್ನ ಸೊಸೆಯಾಗಿ ಮಾಡಿಕೊಳ್ಳಬೇಕೆಂದು ಬಯಸಿದರು. ಪೂಜೆಯಿಂದ ಹಿಂದಿರುಗಿದಮೇಲೆ ಚೆನ್ನಕೇಶವಯ್ಯನವರು ರತ್ನನನ್ನು, "ಗೌರಮ್ಮನ್ನ ಏನು ಕೊಡು ಅಂತ ಬೇಡಿಕೊಂಡೆಯಮ್ಮಾ?" ಹಾಸ್ಯವಾಗಿ ಕೇಳಿದರು. "ಪುಟ್ಟ ಗಂಡನ್ನ ಕೊಡು ಅಂತ ಬೇಡಿಕೊಂಡೆ, ಅಲ್ಲ ವೇನೆ " ಎಂದು ಸುಂದರಮ್ಮನವರು ಕೀಟಲೆಮಾಡಿದರು. ಆಗ ರತ್ನ, ಹುಸಿ ಮುನಿಸು ನಟಿಸುತ್ತ, "ಹೋಗಿ ಅತ್ತೆ" ಎಂದು ತುಟಿ ಉರುಗಿಸಿದಳು. ರತ್ನ ಶಾಮನಿಗೆಂದು ತಾಯಿ ಹೇಳಿದ್ದ ಮಾತನ್ನು ರಾಜು ಕೇಳಿದ್ದನಷ್ಟೆ. ಅವನು ರತ್ನನ ಮುಖವನ್ನು ಒಮ್ಮೆ, ಶಾಮನ ಮುಖವನ್ನು ಒಮ್ಮೆ, ತುಂಟನೋಟ ದಿಂದ ನೋಡಿ–"ಕಪ್ಪುಗಂಡನನ್ನ ಕೊಡು ಅಂತ ಬೇಡಿಕೊಂಡೆ, ಅಲ್ಲವೇನೇ" ಎಂದು ನಗತೊಡಗಿದ. ಈ ಹಾಸ್ಯದ ಹುಡುಗುಮಾತಿನಿಂದ ಸುಂದರಮ್ಮ ನವರು ಮನನೋಯದಿದ್ದರೂ, ಶಾಮನ ಮುಖದಲ್ಲಿ ಕೋಪದ ಮುದ್ರೆ ಮೂಡಿದ್ದನ್ನು ಕಂಡರು. "ಸಾಕು ಸುಮ್ಮನಿರೋ, ನೀನು ಮಹಾ ಹೊಳೆದು ಹೋಗೋದು ಅಷ್ಟರಲ್ಲೆ ಇದೆ. ಕಪ್ಪಾದರೇನು, ಅವನ ಮುಖದ ಕಳೆ ನಿನಗೆಲ್ಲಿ ಬರಬೇಕು. ನೀನು ಹೀಗೇ ಆಡುತಾ ಇರು. ನಿನಗೆ ಸಿಕ್ಕೋಳು ಚಂದನದ ಬೊಂಬೆಯೋ" ಎಂದರು. ಶಾಮನ ಕೋಪ ಮಾಯವಾಗಿ ನಗೆ ಮೂಡಿತ್ತು. ಆಗ ಸುಂದರಮ್ಮನವರು ರತ್ನನ ತಲೆ ನೇವರಿಸುತ್ತ, "ನೀನು ಯಾರನ್ನ ಮದುವೆಮಾಡಿಕೊಳ್ಳುತ್ತೀಯೆ ತಾಯಿ ?"ಎಂದು ಪ್ರಶ್ನಿಸಿದರು. ರತ್ನ ಇಕ್ಕಟ್ಟಿಗೆ ಸಿಲುಕಿದಳು ಎಲ್ಲರೂ ತನ್ನನ್ನು ಶಾಮುವಿಗೇ ಎಂದು ಗೊತ್ತು ಮಾಡಿರುವಾಗ, ತಾನು ಬೇರೆಯ ಮಾತು ಹೇಳುವುದು ಹೇಗೆ? ಸದ್ಯಕ್ಕಂತೂ ಅವಳಿಗೆ ಸುಲಭದ ಉತ್ತರ ಹೊಳೆಯಿತು: "ನಾನು ಯಾರನ್ನೂ ಮದು ವೇನೇ ಮಾಡಿಕೊಳ್ಳೋದಿಲ್ಲ" ಎಂದಳು, ಬಿಗುಮಾನದಿಂದ. "ಮದುವೆ ಯಾಗದೆ ಹೋದರೆ ನಿನ್ನನ್ನ ಬಸವಿ ಬಿಟ್ಟುಬಿಡುತಾರೆ" ಎಂದು ಸುಂದ ರಮ್ಮನವರು ಹಾಸ್ಯಮಾಡಿದರು. ಅಂದು ಈ ಮಾತು ಅಷ್ಟಕ್ಕೆ ನಿಂತಿತು.

* * * *

ಮುಂದಿನ ವರ್ಷದ ಗೌರಿಯ ಹಬ್ಬದ ಒಳಗೆ ನಾರಾಯಣರಾಯನ ರೋಗ ಉಲ್ಬಣವಾಗುತ್ತ ಬಂದಿತು. ಅವನು ದೀರ್ಘಕಾಲದ ರಜೆಪಡೆದು, ಹಾಸಿಗೆ ಹಿಡಿದು ಮಲಗಿದ್ದ. ಅವನ ಸಂಸಾರಕ್ಕೆ ಈಗ ಚೆನ್ನಕೇಶಯ್ಯನವರೇ

ಔಷಧ ಹಣ್ಣು ಹಂಪಲು ತಂದುಕೊಟ್ಟು ಬರುತ್ತಿದ್ದರು. ಎರಡು ಮೂರು ದಿನಕ್ಕೊಮ್ಮೆ ದಂಪತಿಗಳಿಬ್ಬರೂ ರೋಗಿಯನ್ನು ನೋಡಿಕೊಂಡು ಬರಲು ಹೋಗುತ್ತಿದ್ದರು. ಆಗ ಶಾಮು ರಾಜು ತಂದೆ ತಾಯಿಗಳ ಜೊತೆ ಹೋಗುತ್ತಿದ್ದರು. ಈಚೆಗಂತೂ, ನಾರಾಯಣರಾಯ ಅಕ್ಕನನ್ನೂ ಭಾವನನ್ನೂ ರತ್ನನನ್ನು ತಂದುಕೊಳ್ಳಬೇಕೆಂದು ಬೇಡಿಕೊಳ್ಳುವುದು ನಿತ್ಯದ ಮಾತಾಗಿ ಬಿಟ್ಟಿತು. "ಸುಂದರಕ್ಕ ಒಲ್ಲೆ ಎನ್ನುವುದಿಲ್ಲ. ನಾನು ಬದುಕುತ್ತೇನೆಯೋ ಇಲ್ಲವೋ. ರತ್ನನ್ನ ತಂದುಕೊಳ್ಳುತ್ತೇನೆ ಅಂತ ನೀನು ಮಾತುಕೊಟ್ಟರೆ ನಾನು ಹಾಯೆಂತ ಪ್ರಾಣ ಬಿಡುತೇನೆ ಭಾವಯ್ಯ" ಎನ್ನುತ್ತಿದ್ದ, ನಾರಾಯಣರಾಯ. "ನೀನು ಸಾಯುತ್ತಿ ಅಂತ ನಾನು ಮಾತುಕೊಡಬೇಕೆ ? ನೀನು ಬದುಕುವೆಯುಂತೆ. ಮದುವೆಯಕಾಲ ಬಂದಾಗ ತಾನೇ ಆ ಮಾತು? ನಿನಗಿಂತ ಹೆಚ್ಚಾಗಿ ರತ್ನನ್ನ ತಂದುಕೊಳ್ಳಲು ನಿನ್ನ ಅಕ್ಕ ಆಶೆ ಇಟ್ಟುಕೊಂಡಿದ್ದಾಳೆ. ಇದುವರೆಗೆ ನಾನು ಅವಳ ಯಾವ ಆಶೆಯನ್ನೂ ನಡಸದೆ ಇಲ್ಲ'' ಎಂದಿದ್ದರು ಚೆನ್ನಕೇಶವಯ್ಯನವರು. ಈ ಮಾತಿನಿಂದ ನಾರಾಯಣರಾಯನಿಗೆ ತಕ್ಕಮಟ್ಟಿಗೆ ತೃಪ್ತಿಯಾಯಿತು.

ನಾರಾಯಣರಾಯ ಮೃತ್ಯುಶಯ್ಯೆಯಲ್ಲಿದ್ದಾಗ, ಸುಂದರಮ್ಮನವರು ಕಂಬನಿದುಂಬಿ, ಗದ್ಗದ ಸ್ವರದಿಂದ, ತಮ್ಮನ ಇಷ್ಟವನ್ನು ನಡಸುವುದಾಗಿ ವಾಗ್ದಾನ ಮಾಡಿಬಿಟ್ಟಿದ್ದರು.

ಆಮೇಲೆ ರತ್ನ ತಮ್ಮ ಮನೆಗೇ ಬಂದಳಷ್ಟೆ. ಮದುವೆಯ ಮಾತು ಏಳಲು ಕಾರಣವಿರಲಿಲ್ಲವೇ ಹೊರತು, ಚೆನ್ನಕೇಶವಯ್ಯನವರು ತಮ್ಮ ಹೆಂಡತಿಯ ಇಷ್ಟವನ್ನು ಖಂಡಿತ ನಡಸುವುದಾಗಿಯೇ ಮನಸ್ಸು ಮಾಡಿದ್ದರು. ಆದರೆ, ಅಷ್ಟರೊಳಗೆ ಅವರೂ ಕಣ್ಣುಮುಚ್ಚಿದ್ದರು

* * * *

ಸುಂದರಮ್ಮನವರು ತಮ್ಮ ಮದುವೆಯ ಸಂದರ್ಭವನ್ನೇ ಚಿತ್ರಿಸಿಕೊಂಡರು ; ಅದನ್ನು ರತ್ನನ ವಿಷಯಕ್ಕೆ ಅನ್ವಯಿಸಿದರು. ತಾವು ಬಿಳಿಪು ; ತಮ್ಮ ಯಜಮಾನರು ಕಪ್ಪು. ಮದುವೆಗೆ ಮುನ್ನ ತಮ್ಮ ತಂದೆ ತಾಯಿ ಒಪ್ಪಿಗೆ ಹೇಳದೆಯೇ ಮದುವೆ ಮಾಡಿಬಿಟ್ಟಿದ್ದರು. ಆ ಸಂದರ್ಭದಲ್ಲಿ, ಮದುವೆಯಾದ ಮೇಲೂ ತಾವು ಗಂಡ ಕಪ್ಪು ಎಂಬ ಬಗೆಗೆ ತಮ್ಮ ಅಸಮಾ

ಧಾನ ಕೋಪಗಳನ್ನು ನಾನಾ ಬಗೆಗಳಲ್ಲಿ ತೋರ್ಪಡಿಸಿದ್ದುದನ್ನು ಅವರು ನೆನೆದರು. ತಮ್ಮ ಪತಿಯಲ್ಲಿ ಭಕ್ತಿ ಗೌರವ ತೋರಲು ಸಾಧ್ಯವಾಗ ಬಹುದು; ಪ್ರೇಮವನ್ನು ತೋರಿಸುವುದು ಹೇಗೆ ಎಂದು ತಾವೇ ಸಂಶಯ ಪಡುತ್ತಿದ್ದರು. ಗಂಡನ ಮನೆಗೆ ಬಂದ ಹೊಸದರಲ್ಲಿ ಕೂಡ ಹಿಂದಿನ ಅಸಮಾಧಾನ, ಬೇಸರ, ಸಂದೇಹಗಳು ನಿವಾರಣೆಯಾಗಿರಲಿಲ್ಲ. ಆದರೆ, ಈ ಎಲ್ಲ ಭಾವನೆ ತಮಗೊಬ್ಬರಿಗೆ ಮಾತ್ರ ತಿಳಿದ ಅಂತರಂಗದ ರಹಸ್ಯವಾಗಿತ್ತು. ಆದರೆ, ಪತಿ ತಮ್ಮನ್ನು ಕಣ್ಣಬೊಂಬೆಯಂತೆ ಕಾಪಿಟ್ಟುಕೊಂಡು ಬಂದು, ನೋಟದಲ್ಲಿ ನಡೆಯಲ್ಲಿ, ಕನಸು ಮನಸುಗಳಲ್ಲಿ ಕೂಡ ತಮ್ಮ ಬಗೆಗೆ ತೋರುತ್ತಿದ್ದ ಪ್ರೇಮವನ್ನು ಅರಿತು, ಆ ಪ್ರೇಮ ಸೂರ್ಯನ ಎದುರು ತಮ್ಮ ಹಿಂದಿನ ಎಲ್ಲ ಭಾವನೆಯು ಮಂಜು ಅದು ಹೇಗೆ ಕರಗುತ್ತ ಬಂದಿತು!

ಹೆಂಡತಿಯಿಂದ ಗಂಡನಿಗೆ ಬೇಕಾದ್ದು ಹೃದಯಕ್ಕೆ ಒಲವು, ಕಣ್ಣಿಗೆ ಚೆಲುವು, ಕಿವಿಗೆ ಇಂಪು ನುಡಿ, ನಾಲಗೆಗೆ ರುಚಿಯಾದ ಅಡಿಗೆ, ಮೈಸುಖ; ಹೆಣ್ಣಿಗೆ ಪತಿಯ ರೂಪಿಗಿಂತ ಹೆಚ್ಚಾಗಿ ತನ್ನ ರೂಪನ್ನೆ ಕಾದುಕೊಳ್ಳಲು, ಹೆಚ್ಚಿಸಿಕೊಳ್ಳಲು, ಒಡವೆ ವಸ್ತ್ರ; ಮನೆಯೆಂಬ ನೆರಳು, ಅದರಲ್ಲಿ ನಿತ್ಯ ಜೀವನಕ್ಕೆ ಕಾರ್ಪಣ್ಯವಿಲ್ಲದಂತೆ ಇರಲು ಸಾಮಗ್ರಿ, ಹಬ್ಬ ಹರಿದಿನಗಳಲ್ಲಿ ಸಡಗರ ಸಂಭ್ರಮಗಳಿಗೆ ಪೂರ್ಣ ಅವಕಾಶ, ತನ್ನ ಇಷ್ಟಬಂದ ಹಾಗೆ ಅಲಂಕಾರ ಮಾಡಿಕೊಳ್ಳಲು ಸ್ವಾತಂತ್ರ್ಯ, ಕೆಲವು ಕಾಲವಾದ ಮೇಲೆ ಮನೆಯನ್ನು ಬೆಳಗಲು ಮನೆ ತುಂಬ ಮಕ್ಕಳು—ಓ, ಎಷ್ಟೊಂದು! ಇಷ್ಟನ್ನೂ ಒದಗಿಸಿದ ಪತಿಯ ರೂಪ ಹೇಗಿದ್ದರೇನು?

ರತ್ನ–ಶಾಮಣ್ಣ ಇವರ ದಾಂಪತ್ಯಕ್ಕೆ ಸುಂದರಮ್ಮನವರು ಈ ಸುಭದ್ರವಾದ ಸುಂದರವಾದ ನಿಜವಾದ ಪ್ರೇಮಸೀತವನ್ನು ತಮ್ಮ ಅನುಭವ ಸಾಮಗ್ರಿಯಿಂದ ರಚಿಸಿ, ಅದನ್ನು ಹಾಕಿ, ಅದರ ಮೇಲೆ ಅವ ರಿಬ್ಬರನ್ನೂ ಕೂರಿಸಿ, ನೋಡಿ ನೋಡಿ ನಲಿದು ನಲಿದು ಆನಂದಪಟ್ಟರು— ತಮ್ಮ ಭಾವನೆಯ ಮಂದಿರದಲ್ಲಿ.

ಮದುವೆಯ ವಿಚಾರ ಪ್ರಸ್ತಾಪಿಸಿ ರತ್ನನ ಮನಸ್ಸನ್ನು ಈಗ ಹದ ಗೆಡಿಸುವುದಕ್ಕಿಂತ ಸುಮ್ಮನೆ ಕಾಲದ ನಿರ್ಣಯಕ್ಕೆ ಬಿಡುವುದು ಒಳ್ಳೆಯ ದೆಂದು ಸುಂದರಮ್ಮನವರು ನಿರ್ಧರಿಸಿದರು.

೧೬

ವಿದ್ಯಾಭ್ಯಾಸವನ್ನು ಮುಂದುವರಿಸುವ ವಿಚಾರದಲ್ಲಿ ಶಾಮಣ್ಣನ ಆಶೆ ಈಡೇರಿತ್ತು. ಅವನು ಎಂದಿನಂತೆ ತನ್ನ ಬಟ್ಟೆಬರೆಯ ಟ್ರಂಕು, ಪುಸ್ತಕಗಳ ಟ್ರಂಕು—ಇವನ್ನು ತೆಗೆದುಕೊಂಡು ಸಕಾಲದಲ್ಲಿ ಮೈಸೂರಿಗೆ ಪ್ರಯಾಣ ಮಾಡಿ, ಎಂ.ಎ. ತರಗತಿಗೆ ಸೇರಿ, ಹೋಟಲೊಂದರಲ್ಲಿ ಬಿಡಾರ ಮಾಡಿದ. ಹಿಂದೆ, ಒಂದು ವರ್ಷ ಅವನು ಮಹಾರಾಜಾ ಕಾಲೇಜಿನ ಹಾಸ್ಟಲಿನಲ್ಲಿ ಇದ್ದು, ಅಲ್ಲಿನ ಜೀವನಕ್ರಮ ಅವನಿಗೆ ಸರಿಬಿದ್ದಿರಲಿಲ್ಲ. ಅಲ್ಲಿನ ವಾತಾವರಣ ಸುಖಜೀವನಕ್ಕೆ ಒತ್ತಾಸೆ ಕೊಡುತ್ತಿತ್ತೇ ಹೊರತು ಅಬಾಧಿತ ಅಖಂಡ ವ್ಯಾಸಂಗಕ್ಕೆ ಸದವಕಾಶವನ್ನು ಕಲ್ಪಿಸುವಂತಿರಲಿಲ್ಲವೆಂಬ ತೀರ್ಮಾನಕ್ಕೆ ಬಂದಿದ್ದನವನು. ಅಲ್ಲಿನ ಕೋಣೆಗಳಲ್ಲಿನ ಮಂಚ, ಕೆಲವರು ಉಪಯೋಗಿಸುತ್ತಿದ್ದ ಸೊಳ್ಳೆಯ ಪರದೆ, ವಾರ ವಾರದ ಅಭ್ಯಂಜನ, ಔತಣದೂಟ, ಹಬ್ಬದ ದಿನಗಳ ಸಂಭ್ರಮ, ಸೇವಕರ ಉಪಚಾರ, ಅಲ್ಲಿ ಬಿಡಾರ ಮಾಡಿದ ಬಹು ಸಂಖ್ಯೆಯ ವಿದ್ಯಾರ್ಥಿಗಳ ಭೋಗಜೀವನಾಕಾಂಕ್ಷೆ—ಇವೆಲ್ಲ ಒಂದು ವರ್ಷಕ್ಕೇ ಅವನಿಗೆ ವೆಗಟಾಗಿ ಕಂಡಿದ್ದುವು. ಹಾಸ್ಟೆಲಿನ ಸೇವಕಿಯೊಂದಿಗೆ ಒಬ್ಬಿಬ್ಬರು ವಿದ್ಯಾರ್ಥಿಗಳು ಆಡುತ್ತಿದ್ದ ಚೆಲ್ಲಾಟ ಪ್ರಣಯಕೇಳಿಯಲ್ಲಿ ಪರಿಣಮಿಸಿದ್ದ ಸಂಗತಿ ಕಡೆಗೂ ಅವನು ಹಾಸ್ಟೆಲನ್ನು ಬಿಡುವಂತೆ ಮಾಡಿತು. ಅಲ್ಲದೆ, ತಾಯಿ ಕೇಳಿದಷ್ಟು ಹಣ ಕೊಡಲು ಸಿದ್ಧರಾಗಿದ್ದರೂ ಅವನು ಮಾತ್ರ ವೆಚ್ಚಮಾಡಲು ಸಿದ್ಧನಾಗಿರಲಿಲ್ಲ. ಸಾಧ್ಯವಾದಷ್ಟು ಮಿತವ್ಯಯ ಮಾಡಿ, ತನ್ನ ವಿದೇಶ ಪ್ರಯಾಣಕ್ಕೆ ಹಣ ಉಳಿಸಬೇಕೆಂದು ಅವನ ಹಂಬಲು. ತಾಯಿ ಧಾರಾಳವಾಗಿ ಕಳಿಸಿಕೊಡುತ್ತಿದ್ದ ಹಣದಲ್ಲಿ ಅವನು ಆಕೆಗೆ ತಿಳಿಯದಂತೆ ಉಳಿತಾಯ ಮಾಡುತ್ತಿದ್ದ. ಈ ಉಳಿತಾಯ ಬುದ್ಧಿಯಿಂದ, ಅವನ ಉಡುಗೆ ತೊಡುಗೆಗಳೂ ಸರ್ವಸಾಮಾನ್ಯವಾಗಿದ್ದವು. "ಬಿ.ಎ. ಗೆ ಓದುತ್ತಿದ್ದರೂ ಶಾಮಣ್ಣನಿಗೆ ಅಹಂಕಾರವಿಲ್ಲ" ಎಂದು

ಸುಂದರಮ್ಮನವರು ಎಷ್ಟೋ ವೇಳೆ ಡಾಕ್ಟರಿಗೆ ಹೇಳಿದ್ದರು. ಇಂಗ್ಲೆಂಡಿನಿಂದ ಇದೇ ತಾನೆ ಹಡಗು ಇಳಿದು ಬಂದವನಂತೆ ಉಡುಪು ಹಾಕಲು ಕಲಿತಿದ್ದ ರಾಜುವಿನ ದೃಷ್ಟಿಯಲ್ಲಿ ಮಾತ್ರ ಶಾಮಣ್ಣ 'ಜಿಪುಣ'.

ರಾಜು ತನ್ನ ಇಷ್ಟಕ್ಕೆ ವಿರುದ್ಧವಾಗಿ ಇಂಟರ್‌ಮೀಡಿಯಟ್ ತರಗತಿಗೆ ಸೇರಬೇಕಾಯಿತು. "ನಾನು ಕಣ್ಣು ಮುಚ್ಚಿದ ಮೇಲೆ ನೀನು ಸಿನಿಮಾಕ್ಕಾದರೂ ಸೇರಿಕೋ, ನಾಟಕದಲ್ಲಾದರೂ ಸಲಿ. ನಾನು ಬದುಕಿ ರುವವರೆಗೆ ಅದಕ್ಕೆ ಅವಕಾಶ ಕೊಡುವುದಿಲ್ಲ. ಬೊಂಬಾಯಿಗೆ ಹೋಗಲೇ ಬೇಕು ಅಂತ ಹಟಮಾಡಿದರೆ, ಹೋಗು; ರೈಲು ಚಾರ್ಜಿಗೂ ನಾನು ಮೂರು ಕಾಸೂ ಕೊಡುವುದಿಲ್ಲ" ಎಂದು ಸುಂದರಮ್ಮನವರು ಖಂಡಿತವಾಗಿ ಹೇಳಿಬಿಟ್ಟಿದ್ದರು.

ವಾಸ್ತವವಾಗಿ, ರಾಜುವಿನ ಹೃದಯದಲ್ಲಿ ಯಾವ ಕಲೆಯ ಕರೆಯೂ ಭೋರ್ಗರೆಯುತ್ತಿರಲಿಲ್ಲ! ಅವನು ಯಾವುದೋ ಕಲ್ಪನಾ ಪ್ರಪಂಚದಲ್ಲಿ ವಿಹರಿಸುತ್ತಿದ್ದನು. ಮಾಧ್ಯಮಿಕ ಶಾಲೆಯಲ್ಲಿದ್ದಾಗಲೇ ಮನೆಯವರ ಅಪ್ಪಣೆ ಪಡೆಯದೆ ಚಲನಚಿತ್ರಗಳನ್ನು ನೋಡುವುದನ್ನು ಕಲಿತಿದ್ದನು. ಪುಸ್ತಕಕ್ಕೆ, ತಿಂಡಿ ತೀರ್ಥಕ್ಕೆ, ಬಸ್ ಚಾರ್ಜಿಗೆ ಎಂದು ಕೊಡುತ್ತಿದ್ದ ಹಣವೆಲ್ಲ ಸಿನಿಮಾ ಮಂದಿರಗಳ ಒಡೆಯರ ಜೇಬಿಗೆ ಹೋಗುತ್ತಿತ್ತು. ಅವನು ಹೈಸ್ಕೂಲಿಗೆ ಬಂದ ಮೇಲೆ ಈ ಪ್ರವೃತ್ತಿ ಹೆಚ್ಚಾಯಿತು. 'ಸಿನಿಮಾಕ್ಕೆ ಹೋಗಬೇಕು. ಹನ್ನೆರಡಾಣೆ ಕೊಡಮ್ಮ' ಎಂದು ಕೇಳಿ, ಕೊಡದಿದ್ದರೆ ಕಾಡುವ ಧೈರ್ಯವನ್ನೂ ವಹಿಸಿಬಿಟ್ಟಿದ್ದನು. ಹೈಸ್ಕೂಲಿನ ವಿದ್ಯಾರ್ಥಿ ಸಂಘದಲ್ಲಿ ಅಭಿನಯಿಸುವ ನಾಟಕದಲ್ಲಿ ಪಾತ್ರವಹಿಸುವ ಚಪಲ ಕೂಡ ಅವನಿಗೆ ಇರಲಿಲ್ಲ. ಕಲೆಯ ಹುಚ್ಚು ಅವನಿಗೆ ಹಿಡಿದೇ ಇರಲಿಲ್ಲ; ಸುತ್ತಣ ಪ್ರಪಂಚಕ್ಕಿಂತ ಹೆಚ್ಚಾಗಿ ಕಲಾ ಪ್ರಪಂಚದಲ್ಲಿ ಹೆಚ್ಚಿನ ನಲಿದಾಟಕ್ಕೆ ಅವಕಾಶವಿದೆಯೆಂದು, ಆ ಪ್ರಪಂಚದ ಮೋಹಕತೆಗೆ ಅವನು ಮಾರು ಹೋಗಿದ್ದನು: ಸಿನಿಮಾ ನಟನಾದರೆ, ತಾನು ನಟಿಯರೊಂದಿಗೆ ಸ್ವರ್ಗ ಲೋಕದ ಸುಖವನ್ನನುಭವಿಸಬಹುದು, ಲಕ್ಷಾಂತರ ಮಂದಿ ತರುಣ ತರುಣಿ ಯರು ತನ್ನನ್ನು ಆರಾಧಿಸುತ್ತಾರೆ ಎಂಬ ಬುಡವಿಲ್ಲದ ಭಾವನೆಯ ಅಮಲು ಅವನ ನೆತ್ತಿಗೇರಿತ್ತು. ಚಲನಚಿತ್ರ ಪ್ರಪಂಚವನ್ನು ಸೇರಲು ಅವನಿಗಿದ್ದ

ಒಂದೇ ಅರ್ಹತೆಯೆಂದರೆ, ದೈವದತ್ತವಾದ ಅವನ ಸುಂದರ ರೂಪ. ಚಲನ ಚಿತ್ರಗಳ ನಾಯಕರನ್ನು ಅನುಕರಿಸಿ, ಅವನು ಆ ಸುಂದರ ರೂಪಕ್ಕೆ ಒಪ್ಪ ವಿಡಲು ಕಲಿತಿದ್ದನು. ಬೊಂಬಾಯಿನ ಚಲನಚಿತ್ರ ನಿರ್ಮಾಪಕರಿಗೆ ಕಳಿಸ ಬೇಕೆಂದು ಹಲವಾರು ಫೋಟೋಗಳನ್ನೂ ತೆಗೆಯಿಸಿ ಇಟ್ಟುಕೊಂಡಿದ್ದನು.

ಶಾಮಣ್ಣ ಮೈಸೂರಿಗೆ ಹೊರಡುವ ಮುನ್ನ ಸುಂದರಮ್ಮನವರು ಶಾಮಣ್ಣನನ್ನು ಕೇಳಿದ್ದರು: "ಏನಪ್ಪಾ, ರತ್ನನಿಗೆ ಓದು ಇಷ್ಟೇ ಸಾಕೋ, ಅಥವಾ ಅವಳನ್ನೂ ಇಂಟರ್‌ಮೀಡಿಯಟ್ ಕ್ಲಾಸಿಗೆ ಸೇರಿಸೋಣವೋ? ನನಗೇನೋ ಸಾಕು ಅಂತ ಕಾಣುತ್ತಪ್ಪ, ಇಷ್ಟೇ? ನಿನ್ನ ಇಷ್ಟ ಹೇಗೆ?" ಎಂದು. "ಮನೆಯಲ್ಲಿ ಕುಳಿತು ಏನು ಮಾಡಬೇಕು? ಓದಲಿ" ಎಂದಿದ್ದ ಶಾಮಣ್ಣ. ರತ್ನನೇ ಆಗಲಿ ಯಾರೇ ಆಗಲಿ, ತಾನು ಮದುವೆಯಾಗುವ ಹೆಣ್ಣು ಇಂಟರ್‌ಮೀಡಿಯಟ್ ಮಾಡಿರಬೇಕೆಂದು ಅವನು ಇಷ್ಟಪಟ್ಟಿದ್ದ ನಷ್ಟೆ. "ಹಾಗೇ ಆಗಲಿ, ಕಳಿಸಿದರಾಯಿತು, ಅದಕ್ಕೇನು" ಎಂದು ಸುಂದರಮ್ಮನವರೂ ಒಪ್ಪಿದ್ದರು. ಅದೇ ಮೇರೆಗೆ, ರತ್ನ ಇಂಟರ್‌ಮೀಡಿ ಯಟ್ ತರಗತಿಗೆ ಸೇರಿದ್ದಳು.

ರತ್ನ ಕಾಲೇಜಿಗೆ ಸೇರಿದ್ದು ಅವಳ ಗೆಳತಿಯರಾದ ಕುಸುಮ ಶ್ಯಾಮಲೆಯರಿಗೆ ತುಂಬ ಹರ್ಷದ ಸಂಗತಿಯಾಗಿತ್ತು. ರತ್ನನ್ನ ಕಾಲೇಜಿಗೆ ಸೇರಿಸುವ ನೆಪದಲ್ಲಿ ರಾಜು, ಕುಸುಮ ಶ್ಯಾಮಲೆಯರ ಜೊತೆಗೂಡಿ, ಮಹಾ ರಾಣಿ ಕಾಲೇಜಿಗೆ ಎರಡು ಮೂರು ದಿನ ಯಾತ್ರೆ ಮಾಡಿ, ಅವರೊಂದಿಗೆ ಕೆಲದಿನಗಳ ಕೆಳಗೆ ಮೊಳೆತಿದ್ದ ಪರಿಚಯವನ್ನು ಬೆಳಸಿದ.

ಪ್ರತಿನಿತ್ಯ ಸಾಧಾರಣವಾಗಿ ಮೂವರು ಗೆಳತಿಯರೂ ಒಟ್ಟಿಗೆ ಕಾಲೇಜಿಗೆ ಹೋಗುವ ವಿಶೇಷ ಬಸ್ಸಿನಲ್ಲಿ ಹೋಗುತ್ತಿದ್ದರು. ರಾಜು ತನ್ನ ಕಾಲೇಜಿಗೆ ಬೈಸಿಕಲ್ಲಿನ ಮೇಲೆಯೋ, ನಡೆದೋ, ಬಸ್ಸಿನಲ್ಲಿಯೋ—ಆಯಾ ದಿನ ಹೇಗೆ ಮನಸ್ಸು ಬಂದರೆ ಹಾಗೆ ಹೋಗುತ್ತಿದ. ಹಿಂದಿರುಗುವಾಗಲೂ ಅವರು ಒಟ್ಟಿಗೆ ಬಸ್ಸಿನಲ್ಲಿ ಹಿಂದಿರುಗುತ್ತಿದ್ದರು. ರಾಜು ತನ್ನ ಪಾಡಿಗೆ ತಾನು ಒಂಟಿಯಾಗಿಯೋ ಇತರ ಗೆಳೆಯರೊಂದಿಗೆಯೋ ಕ್ರಿಕೆಟ್ ಆಡಿ, ಆಗೊಮ್ಮೆ ಈಗೊಮ್ಮೆ ಚಲನಚಿತ್ರ ದರ್ಶನಕ್ಕೆ ಹೋಗಿ, ಹಿಂದಿರುಗುತ್ತಿದ್ದ.

* * * *

ವಾಣೀವಿಲಾಸ ಹೈಸ್ಕೂಲಿನಲ್ಲಿ ಓದುತ್ತಿದ್ದ ರತ್ನ ಸಾಮಾನ್ಯ ರೀತಿಯಲ್ಲಿ ಉಡಿಗೆ ತೊಡಿಗೆ ಧರಿಸುತ್ತಿದ್ದಳು. ಮಹಾರಾಣಿ ಕಾಲೇಜಿಗೆ ಸೇರಿದ ಮೇಲೆ ಅಲ್ಲಿನ ಶ್ರೀಮಂತ ಕನ್ಯೆಯರ ಕೊಳ್ಳುಬೆಳ್ಳುಗೊಳಿಸುವ ವಿಲಾಸ ವಿಭ್ರಮಗಳ ವೈಖರಿ ಅವಳ ಮೇಲೆ ತುಂಬ ಪ್ರಭಾವ ಬೀರಿತು. ತಬ್ಬಲಿ ಹೆಣ್ಣಾದ ರತ್ನ ತನ್ನ ಸೋದರತ್ತೆಯನ್ನು ಅದು ಬೇಕು ಇದು ಬೇಕು ಎಂದು ಕಾಡಿಬೇಡುವ ಸ್ವಾತಂತ್ರ್ಯ ವಹಿಸುವ ಹಾಗಿರಲಿಲ್ಲ. ಅವರಾಗಿ ಇವಳಿಗೆ ಹೆಚ್ಚಿನ ವೆಚ್ಚಗಳಿಗೆಂದು ಕೈಗೆ ಹಣ ಇತ್ತರುಂಟು, ಇಲ್ಲದಿದ್ದರೆ ಇಲ್ಲ. ಅವಳೇನೋ ಮೌನವಾಗಿ, ತನ್ನ ಸ್ಥಿತಿಯನ್ನರಿತು, ಸೊಬಗು ಪಡೆಯುವ ಚಪಲದ ಬಳ್ಳಿಯ ಕುಡಿಯನ್ನು ಚಿವುಟಿಹಾಕುತ್ತಲೇ ಇದ್ದಳು. ಆದರೆ, ಕಾಲೇಜಿನ ಸಾಲಂಕೃತ ಕನ್ಯೆಯರ ಅಗ್ರಪಂಕ್ತಿಗೆ ಆಗಲೇ ಸೇರಿದ್ದ ಕುಸುಮನ ಒತ್ತಾಸೆಯ ಹೊಯ್ನೀರು ಆ ಬಳ್ಳಿಯನ್ನು ಬೆಳೆಯಗೊಟ್ಟಿತು; ಕಾಲಕ್ರಮದಲ್ಲಿ ಅದು ಕುಸುಮಿಸಲೂ ತೊಡಗಿತು.

ಒಂದು ದಿನ ಅವಳು ರಾಜುವಿನ ಮರೆಹೊಕ್ಕಳು:

"ರಾಜೂ, ಕಾಲೇಜಿಗೆ ಬಂದರೂ ಹಳ್ಳಿಯ ಹುಡುಗಿಯಹಾಗೆ ಕಾಣುತ್ತೀಯಲ್ಲೇ ಅಂತ ಕುಸುಮ ಶ್ಯಾಮಲಾ ಎಲ್ಲಾ ಹಾಸ್ಯಮಾಡುತ್ತ ಇದ್ದಾರೆ. ಅತ್ತೆಯನ್ನ ಹೊಸತರಹ ಸೀರೆ ತೆಗೆಸಿಕೊಡಿ, ಅದು ತೆಗೆಸಿಕೊಡಿ ಇದು ತೆಗೆಸಿಕೊಡಿ ಅಂತ ಹೇಗೋ ನಾನು ಬಾಯಿಬಿಟ್ಟು ಕೇಳುವುದು? ನನಗೆ ಕಾಲೇಜಿಗೆ ಹೋಗೋದಕ್ಕೇ ಸಂಕೋಚವಾಗುತಪ್ಪ. ಏನು ಮಾಡಲೋ?" ಎಂದು ಮಕ್ಕಳು ತಾಯ ಮುಂದೆ ಲಲ್ಲೆಗರೆಯುವ ದನಿಯಲ್ಲಿ ಬೇಡಿದಳು.

ರಾಜು ಕ್ಷಣಹೊತ್ತು ಗಲ್ಲದಮೇಲೆ ಕೈಯಿಟ್ಟ; ಹುಬ್ಬೆತ್ತಿ ಮೇಲು ದಿಟ್ಟಿ ಮಾಡಿದ; ರತ್ನನ ಹಂಬಲನ್ನು ಹಣ್ಣಾಗಿಸುವ ಹಂಚಿಕೆಯನ್ನು ಹುಡುಕಿದ. ಒಂದು ಕಲ್ಲಿಸತಕ್ಕೆ ಎರಡು ಹಣ್ಣು ಉದುರಿಸುವ ಚತುರ ಮತಿಯ ಹಂಚಿಕೆ ಅದು.

"ಕಾಲೇಜಿಗೆ ಸೇರಿದಮೇಲೆ ಕುಸುಮ ಯಾಕೆ ಈಕಡೆ ಸುಳಿಯುತ್ತಲೇ ಇಲ್ಲವಲ್ಲಾ?" ಎಂದು ಕೇಳಿದ.

"ಅವಳ ಮನೆ ಕಾಲೇಜಿಗೆ ಹೋಗುವ ದಾರಿಯಲ್ಲಿದೆ. ನಾನೆ ಅವಳ

ಮನೆಗೆ ಹೊರಟುಹೊಗುತ್ತೇನೆ. ಅವಳೇ ಇಲ್ಲಿಗೆ ಬರುವುದಕ್ಕೆ ಏನೂ ಪ್ರಮೇಯ ಬಿದ್ದಿಲ್ಲ"—ಎಂದು ಉತ್ತರ ಕೊಟ್ಟಳು ರತ್ನ.

"ಅವಳ ಮನೆಯವರ ಶ್ರೀಮಂತಿಕೆ ಕೊಳ್ಳೆಹೋಗುವುದು ಅಷ್ಟರಲ್ಲೇ ಇದೆ. ಅವರ ಮನೆಯಲ್ಲಿ ಮೆರೆಯುತ್ತಾರೆ, ನಮ್ಮ ಮನೆಯಲ್ಲಿ ಮೆರೆಂಗುವುದಿಲ್ಲ ಅಷ್ಟೆ. ನವಿಲನ್ನ ನೋಡಿ ಕೆಂಬೂತಿ ಪುಕ್ಕ ತರಿದುಕೊಳ್ಳಬೇಕೆ?"

"ಹೌದು, ಕುಸುಮಾ ನವಿಲು, ನಾನು ಕೆಂಬೂತಿ. ಅಷ್ಟೇ ತಾನೆ? ನಿನ್ನ ಕೈಲಿ ಹೇಳಿಕೊಂಡರೆ ಅತ್ತೆಗೆ ಒಂದು ಮಾತು ಹೇಳುತ್ತೀಯೇನೋ ಅಂದುಕೊಂಡರೆ ನೀನು ಹಾಸ್ಯಮಾಡುತ್ತಿ."—ನೊಂದು ನುಡಿದಳು ರತ್ನ.

"ನೀನು ನವಿಲೇ ಆಗು, ಬೇಡ ಅಂದವರು ಯಾರು? ಆಚೆ ಬೀದಿಯಲ್ಲಿ ಒಂದು ನವಿಲು, ಮನೆಯಲ್ಲೇ ಒಂದು ನವಿಲು! ನಾನು ಹೇಳೋದು ಅದೇ: ಆ ನವಿಲು ನಮ್ಮ ಮನೆಯ ಅಂಗಳಕ್ಕೆ ಬಂದು ಸ್ವಲ್ಪ ಕುಣಿದಾಡಲಿ; ಅತ್ತೆಯ ಕಣ್ಣಿಗೆ ಅದು ಬೀಳುತ್ತ ಇದ್ದರೆ, ತಮ್ಮ ಮನೆಯ ಕೆಂಬೂತಿ ನವಿಲಾಗಲಿ ಅಂತ ಅವರೇ ಆಶೆಪಡುತ್ತಾರೆ. ನಾನು ಅಮ್ಮನಿಗೆ ಹೇಳುವುದು ಚೆನ್ನಾಗಿರೋದೂ ಇಲ್ಲ. ಹೀಗಾದರೆ, ತಾನಾಗಿ ತಾನೇ ಎಲ್ಲ ನೆರವೇರುತ್ತೆ. ಆಗ, ಕುಸುಮನ ಕೈಲಿ ಬೇಕಾದರೆ ಒಂದು ಮಾತು ಹೇಳಿಸಬಹುದು, ಹೌದೋ ಅಲ್ಲವೋ?"

ರಾಜುವಿನ ಸಲಹೆ ರತ್ನನಿಗೆ ಸೂಕ್ತವಾಗಿ ಕಂಡಿತು. ಅದರಂತೆ ಅವಳು ಕುಸುಮನನ್ನೂ ಶ್ಯಾಮಲೆಯನ್ನೂ ವಾರಕ್ಕೆ ಒಂದು ಸಲ ಎರಡು ಸಲ ಬರಮಾಡಿಕೊಳ್ಳುವುದಕ್ಕೆ ಮೊದಲು ಮಾಡಿದಳು. ಆ ವೇಳೆಯಲ್ಲೆಲ್ಲ ರಾಜು ತಪ್ಪದೆ ಮನೆಯಲ್ಲಿದ್ದು, ಕನ್ನೆಯರ ಕೆಳೆತನದ ಸವಿಯನ್ನು ಸವಿಯುತ್ತಿದ್ದ.

ಹಿಂದೊಮ್ಮೆ ಮೊದಲ ಬಾರಿಗೆ ಕುಸುಮ ಶ್ಯಾಮಲೆ ತಮ್ಮ ಮನೆಗೆ ಬಂದಿದ್ದಾಗ ಸುಂದರಮ್ಮನವರು ಅವರ ವೇಷಭೂಷಣಗಳನ್ನು ಗಮನಿಸ ಹೋಗಿರಲಿಲ್ಲ. ಈಗ ಅವರೊಂದಿಗೆ ತಾವೂ ಒಮ್ಮೊಮ್ಮೆ ಮಾತಿನಲ್ಲಿ ಬೆರೆಯುತ್ತಿದ್ದರು. ಅವರ ಶೃಂಗಾರದ ನಾವೀನ್ಯ, ರತ್ನನ ಅಲಂಕಾರದ ಸಾಮಾನ್ಯ ಸರಳತೆ—ಇವುಗಳಿಗಿದ್ದ ವ್ಯತ್ಯಾಸ ಅವರಿಗೇ ಸ್ಪಷ್ಟವಾಗಿ ಕಾಣ ತೊಡಗಿತು. ಆದರೆ ಅವರಾಗಿ ಅಲಂಕರಣದ ವಿಷಯದಲ್ಲಿ ತಮ್ಮ ಮುಂದಿನ

ಸೊಸೆಗೆ ಇಲ್ಲದ ಪ್ರೋತ್ಸಾಹ ಕೊಡಲು ಸಿದ್ಧರಾಗಿರಲಿಲ್ಲ.

ಒಂದು ದಿನ ಮೂವರು ಗೆಳತಿಯರು ಮಾತ್ರ ಸುಂದರಮ್ಮನವರ ಮನೆಯ ಕೊಠಡಿಯಲ್ಲಿ ಸರಸ ಸಲ್ಲಾಪದಲ್ಲಿ ತೊಡಗಿದ್ದಾಗ, ಕುಸುಮನೇ ಮಾತೆತ್ತಿದಳು:

"ಇದೇನೇ, ನೀನು ಕಾಲೇಜಿಗೆ ಸೇರಿ ಇಷ್ಟು ದಿನ ಆದರೂ ಇನ್ನೂ ಹಳ್ಳಿಯ ಹುಡುಗಿಯ ಹಾಗೇ ಇದ್ದೀಯೆ ?'' ಎಂದಳು ಕುಸುಮ.

ರತ್ನನೂ ಈ ಮಾತಿಗಾಗಿಯೇ ಕಾಯುತ್ತಾ ಇದ್ದಳು ; ಆದರೂ ಹುಸಿಮುನಿಸನ್ನು ತಂದುಕೊಂಡು, "ಹೀಗೆ ನಿತ್ಯ ಹಾಸ್ಯಮಾಡುವ ಬದಲು ನನ್ನನ್ನ ದಿಳ್ಳಿಯ ಹುಡುಗಿಯನ್ನಾಗಿ ಮಾಡಿಕೊಳ್ಳಿ, ಬೇಡ ಅಂದವರು ಯಾರು ? ಹಳ್ಳಿಯ ಹುಡುಗಿಯ ಸಹವಾಸ ಬೇಡದೆ ಇದ್ದರೆ ನನ್ನ ಜೊತೆ ಬಿಟ್ಟುಬಿಡಿ, ಇವೊತ್ತಿನಿಂದ'' ಎಂದಳು.

"ಕೋಪಿಸಿಕೊಳ್ಳಬೇಡವೇ, ರತ್ನಾ. ನಿಮ್ಮ ರೀತಿ ನೋಡಿದರೆ ಬಡವರ ಹಾಗೇನೂ ಕಾಣುವುದಿಲ್ಲ. ನಿನ್ನ ಒಂದು ಸೀರೆ ಕೊಳ್ಳುವ ಹಣಕ್ಕೆ ಈಗಿನ ಕಾಲದ ಎರಡು ನಾಜೂಕಾದ ಸೀರೆ ಬರುತ್ತವೆ. ಒಂದು ಕಣದ ಕುಪ್ಪಸ ಆಗುವ ಕಡೆ ಮೂರು 'ಸಿಲ್ಕ್ ಬ್ಲೌಸ್' ಆಗುತ್ತೆ. ನಿಮ್ಮ ಅತ್ತೆಗೆ ಹೇಳಿದರೆ ಬೇಡ ಅನ್ನುತ್ತಾರೆಯೇ? ಹೋಗಲಮ್ಮ, ಕೊಂಡುಕೊಳ್ಳುವರು ಯಾರು ?'' ಎಂದು ಸಮಾಧಾನ ಮಾಡುವ ರೀತಿಯಲ್ಲಿ ಶ್ಯಾಮಲೆ ನುಡಿದಳು.

"ನಾನೇ ರಾಜುವಿನ ಜೊತೆ ಸೊಸೈಟಿಗೆ ಹೋಗಿ ಕೊಂಡುಕೊಳ್ಳುತ್ತೇನೆ........"

"ಸರಿ ಮತ್ತೆ. ಇನ್ನೊಂದು ಸಲ ಹೊಸ ಬಟ್ಟೆ ಕೊಳ್ಳುವಾಗ, ನಿನ್ನ ಕಣ್ಣಿಗೆ ಬೇಕಾದ್ದು ತೆಗೆದುಕೊಂಡರಾಯಿತು. ವೆಚ್ಚ ಹೆಚ್ಚಾಗದಿದ್ದರೆ ಸರಿ. ಇದಕ್ಕೆ ನಿಮ್ಮ ಅತ್ತೆ ಏಕೆ ಆಕ್ಷೇಪಣೆ ಮಾಡುತ್ತಾರೆ ?'' ಎಂದಳು.

"ನೀನು ಹೇಳುವುದು ಸರಿ ಅನ್ನು. ಆದರೂ, ನಮ್ಮ ಅತ್ತೆಗೆ ತಿಳಿಸದೆ ಹಾಗೆ ಮಾಡುವುದು ಸರಿಯಲ್ಲಮ್ಮ. ನಿಮ್ಮ ಜೊತೆಗೆ ನಾನು ತಕ್ಕ ಹಾಗೆ ಆಗಬೇಕಾದರೆ, ನಮ್ಮ ಅತ್ತೆಗೆ ನೀವು ಸಮಯ ನೋಡಿ ಒಂದು ಮಾತು ಹೇಳಿ. ಆಗಬಹುದಲ್ಲ ?" ಎಂದು ರತ್ನ ಕುಸುಮನ ಮುಂದೆ ತನ್ನ ಕೋರಿಕೆಯನ್ನಿಟ್ಟಳು.

"ಆಗಲಿ" ಎಂದು ಕುಸುಮ ಒಪ್ಪಿಕೊಂಡಳು.

* * *

ವರಮಹಾಲಕ್ಷ್ಮಿ ಹಬ್ಬದ ದಿನ ರತ್ನ ತನ್ನ ಅತ್ತೆಗೆ ಮೊದಲೇ ತಿಳಿಸಿ ತನ್ನ ಕೆಲವು ಗೆಳತಿಯರನ್ನು ದೇವಿಯ ಆರತಿಗೆ ಆಹ್ವಾನಿಸಿದ್ದಳು. ಚೆನ್ನ ಕೇಶವಯ್ಯನವರು ಬದುಕಿದ್ದಾಗ ಈ ವ್ರತವನ್ನು ಸುಂದರಮ್ಮನವರು ತುಂಬ ವೈಭವದಿಂದ ಆಚರಿಸುತ್ತಿದ್ದರು. ಈಚೆಗೆ ಶಾಸ್ತ್ರ ಬಿಡಬಾರದೆಂದು ಲಕ್ಷ್ಮೀ ದೇವಿಯ ಪಟವನ್ನು ಮಾತ್ರ ಇರಿಸಿ, ಪುರೋಹಿತರನ್ನು ಕರೆಯಿಸಿ, ರತ್ನನ ಕೈಲಿ ಪೂಜೆಯ ಶಾಸ್ತ್ರ ಮಾಡಿಸುತ್ತಿದ್ದರು, ಅಷ್ಟೆ. ಈ ವರ್ಷ ರತ್ನ ತನ್ನ ಕೆಲವು ಗೆಳತಿಯರನ್ನು ಸಂಜೆ ಆರತಿಗೆ ಕರೆಯುವೆನೆಂದಾಗ, ಸುಂದರಮ್ಮ ನವರು ಸಂತೋಷದಿಂದಲೇ ಒಪ್ಪಿದರು. ಭಟ್ಟರಿಗೆ ಹೇಳಿ ಬಂದ ಹೆಣ್ಣು ಮಕ್ಕಳಿಗೆ 'ಪ್ರಸಾದ' ಕೊಡಲು ಮೈಸೂರುಪಾಕು, ಕಾರಾಬೂಂದಿ ಮಾಡಿಸಿ, ಬಾಳೆಯ ಹಣ್ಣು ಹೂವು ವೀಳೆಯವೆಲೆ ತರಿಸಿದರು. ಹೇಗಿದ್ದರೂ ಆರತಿ ಮಾಡುವುದಾಗುತ್ತೆ ಎಂದು ರತ್ನನ ಕೈಲಿ ನೆರೆಹೊರೆಯ ಮುತ್ತೈದೆ ಯರನ್ನೂ ಆರತಿಗೆ ಕರೆಯಿಸಿದರು. ಅವರು ರತ್ನನನ್ನು ಶಾಮಣ್ಣನ ಹೆಂಡತಿ ಯೆಂದು ಆಗಲೇ ಭಾವಿಸಿಕೊಂಡುಬಿಟ್ಟಿದ್ದರು. ಸರ್ವವಿಧದಲ್ಲೂ ಅವಳ ಇಚ್ಛೆಯನ್ನು ನೆರವೇರಿಸಿ, ಕಾಲ ಬಂದಾಗ ಮದುವೆ ಮಾತನ್ನು ಅವಳ ಮುಂದೆ ಎತ್ತಿದರೆ ತಮ್ಮ ಇಷ್ಟಕ್ಕೆ ಅವಳು ಸಂತೋಷದಿಂದಲೇ ಸಮ್ಮತಿಸು ವಳೆಂದು ಎಣಿಸಿದರು.

ಆ ಸಂಜೆ ತಕ್ಕಮಟ್ಟಿಗೆ ವಿಜೃಂಭಣೆಯಿಂದಲೇ ಆರತಿ ನಡೆಯಿತೆನ್ನ ಬೇಕು. ರಾಜು ಬಹು ಕಷ್ಟಪಟ್ಟು ಲಕ್ಷ್ಮಿಯ ಪಟಕ್ಕೆ ಮಂಟಪದ ಏರ್ಪಾಡುಮಾಡಿ, ಹೂವಿನಿಂದ ಅಲಂಕರಿಸಿದ್ದ. ಮನೆಯ ಕೆಲಸಗಳಲ್ಲಿ ಎಂದೂ ಕೈಹಾಕದ ರಾಜು ಇಂದು ಇಷ್ಟು ಶ್ರದ್ಧೆ ತೋರಿದ್ದು ಸುಂದರಮ್ಮ ನವರ ಮನಸ್ಸಿಗೆ ನೆಮ್ಮದಿಯುಂಟುಮಾಡಿತ್ತು. ರತ್ನನಿಗಿಂತ ಹೆಚ್ಚಾಗಿ ಅವಳ ಗೆಳತಿಯರನ್ನು ಮೆಚ್ಚಿಸಲು ರಾಜುವಿನ ಪ್ರಯತ್ನ. ರತ್ನನ ಗೆಳತಿಯರು ದೇವಿಯ ಅಲಂಕಾರವನ್ನು ಮೆಚ್ಚಿಕೊಂಡಾಗ, ಸಹಜವಾಗಿಯೆ ಆ ಮಾತು ಹುಟ್ಟಿತು. ಕುಸುಮ ಕೇಳಿದಳು: "ಇಷ್ಟು ಚೆನ್ನಾಗಿ ನೀನು ಅಲಂಕಾರ ಮಾಡಿದೆಯಾ" ಎಂದು. "ನಾನಲ್ಲ, ರಾಜು" ಎಂದು ಉತ್ತರ

ಕೊಟ್ಟಳು ರತ್ನ. ಆಗ ಉಳಿದೆಲ್ಲ ಹೆಂಗಳೆಯರೂ ಬೀಳ್ಕೊಂಡು ಹೊರಟದ್ದು, ರಾಜು ನಿರೀಕ್ಷಿಸಿದ್ದಂತೆ, ಕುಸುಮ ಶ್ಯಾಮಲೆ ಇಬ್ಬರೇ ಉಳಿದಿದ್ದರು. ರಾಜು ಒಂದು ಕೈಯನ್ನು ಸೊಂಟದ ಮೇಲೂ, ಇನ್ನೊಂದು ಕೈಯನ್ನು ಷರಾಯಿ ಕಿಸೆಯೊಳಗೂ ಇಟ್ಟು, ಕುಸುಮನ ಮೆಚ್ಚಿಗೆಯ ಮಾತನ್ನು ಹೆಮ್ಮೆಯ ಗೆಲವಿನಿಂದ ಆಲಿಸುತ್ತ ನಿಂತಿದ್ದ. ಸುಂದರಮ್ಮನವರೂ ಮೆಲ್ಲನೆ ನಡೆದು ಬಂದು ಹೆಣ್ಣುಮಕ್ಕಳ ಬಳಿ ಕುಳಿತರು.

ತುಸುಹೊತ್ತು ಲೋಕಾಭಿರಾಮದ ಮಾತುಕತೆ ನಡೆಯಿತು. ಆಗ, ನಿಂತಿದ್ದ ರಾಜು ಸೋಫಾದ ಮೇಲೆ ಕುಳಿತು, ತಾನೂ ಮಾತುಕತೆಯಲ್ಲಿ ಒಮ್ಮೊಮ್ಮೆ ಕಲೆಯುತೊಡಗಿದ್ದ. ಮಾತು ಕಾಲೇಜಿನ ಪಾಠಪ್ರವಚನ, ಆಟಪಾಟ ಇವುಗಳ ಕಡೆಗೆ ಹೊರಳಿ, ಸುಂದರಮ್ಮನವರಿಗೆ ತೃಪ್ತಿ ಸಂತೋಷಗಳುಂಟಾಗುವಂತೆ ಮೂವರು ಕನ್ನೆಯರೂ ಉತ್ತರ ಕೊಡುತ್ತಿದ್ದಾಗ, ಕುಸುಮ ತನ್ನ ಪ್ರೀತಿಯ ಗೆಳತಿ ರತ್ನನ ವಕೀಲಿ ವಹಿಸಲು ತಕ್ಕ ಸಮಯಕ್ಕಾಗಿ ಹೊಂಚುಹಾಕುತ್ತಿದ್ದಳು.

"ನೀವು ಕಾಲೇಜಿಗೆ 'ಟಿಫಿನ್ ಕ್ಯಾರಿಯರ್'ನಲ್ಲಿ ಅನ್ನಗಿನ್ನ ತೆಗೆದುಕೊಂಡು ಹೋಗುವುದಿಲ್ಲವೇ?" ಎಂದು ಸುಂದರಮ್ಮನವರು ಕೇಳಿದರು.

"ಇಲ್ಲ" ಎಂದು ಉತ್ತರ ಕೊಟ್ಟಳು ಶ್ಯಾಮಲಾ.

"ಹಾಗಾದರೆ ಏನು ಮಾಡುತ್ತೀರಿ ?"

"ಬಡವರ ಮಕ್ಕಳು ಕೆಲವರು ಅನ್ನ ತರುತ್ತಾರೆ; ಹೆಚ್ಚು ಜನ 'ಫ್ರೀ ಕ್ಯಾಂಟೀನಿ'ನಲ್ಲಿ ಏನಾದರೂ ಮಾಡಿಕೊಟ್ಟ ತಿಂಡಿಯನ್ನು ಈಸಿಕೊಳ್ಳುತ್ತಾರೆ. ನಾವೆಲ್ಲಾ ದುಡ್ಡುಕೊಟ್ಟು ಕ್ಯಾಂಟೀನಿನಲ್ಲಿ ತಿಂಡಿ ಕಾಫಿ ತೆಗೆದುಕೊಳ್ಳುತ್ತೇವೆ."

"ಏನೋಮ್ಮಾ, ಕರಿದ ತಿಂಡಿ ಕಾಫಿ ಒಳ್ಳೆಯದಲ್ಲ. ಓದುವ ಮಕ್ಕಳು ಮಧ್ಯಾಹ್ನ ಒಂದು ತುತ್ತು ಮೊಸರನ್ನ ತಿಂದರೆ ಮೈಗೆ ಎಷ್ಟೋ ತಂಪಾಗಿರುತ್ತೆ. ನಮ್ಮ ರತ್ನ ಮೂರು ನಾಲ್ಕು ದಿನ ಅನ್ನ ತೆಗೆದುಕೊಂಡು ಹೋದಳು. ಆಮೇಲೆ, 'ಜೋತೆಯೋರೆಲ್ಲ ಹಾಸ್ಯಮಾಡುತ್ತಾರೆ ಬುತ್ತಿ ತಂದಿದೀಯಾ ಅಂತ' ಅನ್ನ ತೆಗೆದುಕೊಂಡುಹೋಗುವುದನ್ನ ಬಿಟ್ಟುಬಿಟ್ಟಳು. ತಾವು ತರದೆ ಇದ್ದರೆ ಬೇಡ. ತಂದವರನ್ನ ಹಾಸ್ಯಮಾಡುವುದೆ? ಹಾಸ್ಯ

ಮಾಡುತಾರೆ ಅಂದಾಗ ನಾನು ನಂಬಲೇ ಇಲ್ಲ."

"ಸುಳ್ಳು ಯಾಕೆ ಹೇಳುತ್ತಾಳೆ, ಪಾಪ. ಅವಳು ಹೇಳಿದ್ದು ನಿಜ. ಅನ್ನ ತರುವ ಮಾತು ಹಾಗಿರಲಿ, ರತ್ನ ಒಂದು ಹೊರೆ ಪುಸ್ತಕ ತರುವುದನ್ನ ನೋಡಿಯೇ ಹಾಸ್ಯಮಾಡಿದರು. ಈಗ ತರುವುದಿಲ್ಲ. ಇನ್ನು ಮಿಕ್ಕ ವಿಚಾರ ಬಿಡುತ್ತಾರೆಯೆ? ಈಗ ರತ್ನ ಉಟ್ಟಿರುವ ಜರಿಯ ಧರ್ಮಾವರದ ಸೀರೆಯ ಬೆಲೆ ಎಷ್ಟು?" ಎಂದು ಸಮಯವನ್ನು ಸಾಧಿಸಿ ಮಾತೆತ್ತಿದ ಕುಸುಮ ಕೇಳಿದಳು.

"ಎಪ್ಪತ್ತೈದು ರೂಪಾಯಿ."

"ನೋಡಿದಿರಾ, ಅದೇ ಬೆಲೆಗೆ ನಾನು ಉಟ್ಟಿರುವಂಥ ಎರಡು ಬನಾರೆಸ್ ಸಿಲ್ಕ್ ಸೀರೆ ಬರುತ್ತೆ. ರತ್ನನ ಉಡಿಗೆ ತೊಡಿಗೆ ನೋಡಿಯೇ ಎಲ್ಲರೂ ಅವಳನ್ನ ಹಾಸ್ಯಮಾಡುತ್ತಾರೆ. ಆಗ ಅವಳು ಮುಖ ಚಿಕ್ಕದು ಮಾಡಿಕೊಂಡದ್ದನ್ನ ನಾನೇ ಎಷ್ಟೋಸಲ ನೋಡಿದ್ದೇನೆ. ಅವಳು ಸಂಕೋಚ ಪಟ್ಟುಕೊಂಡು ನಿಮ್ಮ ಕೂಡ ಅದನ್ನೆಲ್ಲಾ ಬಾಯಿಬಿಟ್ಟಿಲ್ಲ, ಅಷ್ಟೆ."— ಕುಸುಮ ವಾದಿಸಿಳು.

"ಓ, ಹಾಗೇನು!" ಎಂದು ಸುಂದರಮ್ಮನವರು ನಿಜವಾದ ಆಶ್ಚರ್ಯ ದಿಂದ ಬಾಯಿಬಿಟ್ಟರು.

"ಹೌದು ಮತ್ತೆ" ಎಂದು ಕುಸುಮ ಮುಂದುವರಿಸಿದಳು: "ನಿಮ್ಮ ಮಗಳಾಗಿದ್ದರೆ ಅವಳು ಸುಮ್ಮನೆ ಬಿಡುತ್ತಿದ್ದಳೆ? ಉಪವಾಸ ಸತ್ಯಾಗ್ರಹ ಹೂಡಿ ತನ್ನ ಇಷ್ಟವನ್ನು ನೆರವೇರಿಸಿಕೊಳ್ಳುತ್ತಿದ್ದಳು. ಈಗ, ಪಾಪ,...."

'ಪಾಪ, ಕುಸುಮ ತಿಳಿಯದೆ ಈ ಮಾತು ಆಡಿದ್ದಾಳೆ' ಎಂದುಕೊಂಡರು ಸುಂದರಮ್ಮನವರು, ತಮ್ಮ ಮನಸ್ಸಿನಲ್ಲಿ. ಆದರೂ ಅವರ ಅಂತಃಕರಣ ಕಳಕ್ ಎಂದಿತು. ತುಸ ನೊಂದ ದನಿಯಲ್ಲಿಯೆ, ನಡುವೆ ಹೇಳಿದರು:

"ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲವೇ ಹೊರತು ಮಗಳು ಅಂತಲೇ ತಿಳಿದುಕೊಂಡಿದೇವೆ. ಮಗಳೇನು; ಮಗಳಿಗಿಂತ ಹೆಚ್ಚು........" ಇಷ್ಟವಿಲ್ಲ ದಿದ್ದರೂ ಮನಸ್ಸು ಈ ಮಾತನ್ನು ಹೊರಹಾಕಿಬಿಟ್ಟಿತು,"........ಈಗ ಸೋದರ ಸೊಸೆ. ಅವರೂ ಆಶೆಪಟ್ಟುಕೊಂಡಿದ್ದರು; ನನಗೂ ಅದೇ ಆಶೆ. ಋಣಾನುಬಂಧ ಇದ್ದರೆ, ರತ್ನ ಮನೆಯ ಸೊಸೆಯೇ ಆಗಬಹುದು......."

ಎಂದು ಸುಂದರಮ್ಮನವರು ಭಾವಪರವಶರಾಗಿ ತಮ್ಮ ಯಜಮಾನರ ಚಿತ್ರದ ಅವಲೋಕನದಲ್ಲಿ ತಲ್ಲೀನರಾದರು.

"ರತ್ನ ಮನೆಯ ಸೊಸೆಯಾಗುವಳು" ಎಂಬ ಮಾತು ರತ್ನನ ಮನಸ್ಸಿನಲ್ಲಿ ಭಾವನಾತರಂಗಗಳನ್ನೆಬ್ಬಿಸಿತು; ಅವಳ ಗೆಳತಿಯರ ಮುಖ ಗಳಲ್ಲಿ ತುಂಟನಗೆಯನ್ನು ಅರಳಿಸಿತು,; ರಾಜುವಿನ ಮನಸ್ಸನ್ನು ಊಹೆಯ ಗೊಂದಲದಲ್ಲಿ ಸಿಲುಕಿಸಿ, ಕುಸುಮನ ಮುಖದತ್ತ ತಿರುಗುವಂತೆ ಮಾಡಿತು.

"Congratulations, Raj and Ratna" (ರಾಜ–ರತ್ನ ನಿಗೈಅಭಿ ನಂದನೆಗಳು) ಎಂಬ ಮಾತುಗಳು ಕುಸುಮನ ನಾಲಗೆಯ ತುದಿಗೆ ಬಂದು, ಅಲ್ಲಿಯೇ ನಿಂತುವು. ಅವಳ ತುಟಿಗಳು ಮಾತ್ರ ಅರೆಬಿರಿದ ದಾಳಿಂಬೆ ಹೂವಿ ನಂತೆ ನಸುತೆರೆದಿದ್ದುವು; ಅವಳ ದೃಷ್ಟಿಯಲ್ಲಿ ಪ್ರಶ್ನೆಯಿದ್ದಿತು.

"ಅಲ್ಲ, ಅಲ್ಲ" ಎನ್ನುವಂತೆ ರಾಜು ತಲೆತೂಗಿದ. ಕುಸುಮನ ತೆರೆದ ತುಟಿ ಮುಚ್ಚಿತು ; ಅವಳು ಸುಂದರಮ್ಮನವರ ಕಡೆ ತಿರುಗಿದ್ದಳು. ಅವರೂ ಭಾವಚಿತ್ರದಿಂದ ದೃಷ್ಟಿಯನ್ನು ಈ ಕಡೆ ತಿರುಗಿಸಿದರು.

ಸುಂದರಮ್ಮನವರೇ ಮತ್ತೆ ಮಾತು ಮುಂದುವರಿಸಿದರು :

"....ನೋಡಿದೆಯಾಮ್ಮ, ರತ್ನನಮೇಲೆ ನನಗೆ ಅಕ್ಕರಾಸ್ಥೆ ಇಲ್ಲ ಅಂದರೆ ನನಗೇ ಸಂಕಟವಾಗುತ್ತೆ. ನಾನು ಹೊರಕ್ಕೆ ಹೋಗಿ ಎಷ್ಟೋ ವರ್ಷಗಳಾಯ್ತು. ಈಗಿನ ಕಾಲದ ರೀತಿ ನೀತಿ ನನಗೆ ಹೇಗೆ ಗೊತ್ತಾಗ ಬೇಕು? ಇನ್ನುಮೇಲೆ, ಅವಳು ತನ್ನ ಕಣ್ಣಿಗೆ ಬೇಕಾದ ಬಟ್ಟೆಬರೆ ಕೊಂಡು ಕೊಳ್ಳಲಿ. ನೀವೇ ಜೊತೆಯಲ್ಲಿ ಹೋಗಿ ಆರಿಸಿಕೊಡಿ, ಸರಿಯೆ? ಅವಳಿಗೆ ಸಂತೋಷವಾದರೆ ನನಗೂ ಸಂತೋಷ. ಆಗಬಹುದು ತಾನೆ ?...." ಸುಂದರಮ್ಮನವರ ಹೃದಯ ಸಿಹಿ–ಕಹಿ ಭಾವನೆಗಳಿಂದ ತುಂಬಿ, ಕಣ್ಣು ತುಸ ತೇವವಾಯಿತು. ರತ್ನನೂ ಅತ್ತೆಯ ಮಾತು ಉಕ್ಕಿಸಿದ್ದ ಪ್ರೇಮ ಕೃತಜ್ಞತಾ ಭಾವಗಳಿಂದ ಕಣ್ಣಿನ ಕಡೆಯಲ್ಲಿ ಹನಿ ತಂದುಕೊಂಡಿದ್ದಳು.

"ನೀವು ಅವಳ ಅತ್ತೆಯಲ್ಲ, ನಿಜವಾದ ತಾಯಿ" ಎಂದಳು ಶ್ಯಾಮಲೆ.

"ನಿಮ್ಮ ವಿಶ್ವಾಸ ಈ ಮಾತು ಆಡಿಸಿದೆ" ಎಂದರು ಸುಂದರಮ್ಮ ನವರು.

ಈ ಮಾತು ಅಲ್ಲಿಗೆ ನಿಂತಿತು.

ಆಮೇಲೆ, ಕುಸುಮ ಶ್ಯಾಮಲ ಮನೆಗೆ ಹಿಂದಿರುಗಲು ಎದ್ದರು. ಸುಂದರಮ್ಮನವರಿಗೆ ಉಪಚಾರದ ಮರ್ಯಾದೆಯ ಮಾತುಗಳನ್ನು ಹೇಳಿ, ರತ್ನನನ್ನು ಬೀಳ್ಕೊಳ್ಳುತ್ತಿದ್ದಾಗ, ರಾಜು ಎದ್ದುಬಂದು ಹೇಳಿದ :

"ರತ್ನ, ನಿನ್ನ ಸ್ನೇಹಿತೆಯರಿಗೆ ಲಕ್ಷ್ಮಿಯ 'ಸ್ಪೆಷಲ್' (ವಿಶೇಷ) ಪ್ರಸಾದ ಕೊಡಲೇ ಇಲ್ಲವಲ್ಲ ?"

"ಏನು ?" ಎಂದಳು ರತ್ನ, ಬೆರಗುಬಾಯಿ ಬಿಟ್ಟು.

"ಏನೇ? ಇದು. ನೀನು ಮರೆತೇಬಿಟ್ಟೆ" ಎಂದು ರಾಜು ಲಕ್ಷ್ಮಿಯ ಪಟಕ್ಕೆ ಅಲಂಕಾರ ಮಾಡಿದ್ದ ಕೆಂದಾವರೆ ಹೂಗಳಲ್ಲಿ ಕಡೆಯವು ಎರಡನ್ನು ತೆಗೆದು, ಪೂರ್ತಿ ಅರಳಿದ್ದುದನ್ನು ಶ್ಯಾಮಲೆಗೂ ನಸುಬಿರಿದಿದ್ದುದನ್ನು ಕುಸುಮಳಿಗೂ ಕೊಟ್ಟನು.

"ಓ, ನನಗೆ ಹೊಳೆಯಲೇ ಇಲ್ಲ!" ಎಂದು ರತ್ನ ಅಚ್ಚರಿಯ ನಗೆ ಬೀರಿದಳು.

"ರಾಜು, ಕೆಂಚಪ್ಪನ್ನ ಕೂಗಿ ಇವರನ್ನ ಮನೆಗೆ ಬಿಟ್ಟು ಬಾ ಅಂತ ಹೇಳಪ್ಪ" ಎಂದರು ಸುಂದರಮ್ಮನವರು.

"ಏನು ಮಹಾದೂರ, ನಾನೇ ಹೋಗಿಬರುತ್ತೇನೆ" ಎಂದು ರಾಜುವೇ ಇಬ್ಬರು ಪೆಣ್ಮಣಿಗಳ ಮೈಗಾವಲಾಗಿ ಹಿಮ್ಮೆಯಿಂದ ನಡೆದುಹೋದ.

ಕುಸುಮನೊಂದಿಗೆ ಏಕಾಂತದಲ್ಲಿ ಮಾತಾಡಬೇಕೆಂದು ಅವನ ಬಯಕೆ. ಆದರೆ ಅದಕ್ಕೆ ಅವಕಾಶವಾಗಲಿಲ್ಲ. ಕುಸುಮನ ಮನೆಯೇ ಮೊದಲು ಸಿಕ್ಕುವುದು.

ಆದರೂ, ಕುಸುಮನನ್ನು ಬೀಳ್ಕೊಳ್ಳುವಾಗ ಅವಳಿಗೇ ಕುರಿತ ಒಂದು ಮುಚ್ಚುಮಾತನಾಡಿದ :

"ತಾವರೆಯ ಹೂವಿನೊಳಗೆ ದುಂಬಿ ಇರುತ್ತೆ. ಬೆಳಗ್ಗೆ ಹೊರಕ್ಕೆ ಹಾರಿಬಂದು ಮುಖಕ್ಕೆ ಮುತ್ತಬಹುದು. ಈಗಲೇ ಹೊರಕ್ಕೆ ಹೊರಡಿಸಿ ಬಿಟ್ಟರೆ, ಅದು ಮತ್ತಾಗಿ ಮಲಗಿರುತ್ತೆ, ಏನು ಮಾಡುವುದಿಲ್ಲ."

"ಶ್ಯಾಮಲೆಯ ಹೂವಿನಲ್ಲಿ?"—ಕುಸುಮ ಪ್ರಶ್ನಿಸಿದಳು.

"ಅದು ಪೂರ್ತಿ ಅರಳಿದೆ. ಅವಳು ದುಂಬಿಯಿಂದ ಕಚ್ಚಿಸಿಕೊಳ್ಳುವಷ್ಟು ಪುಣ್ಯವಂತೆಯಲ್ಲ" ಎಂದು ರಾಜು ನಕ್ಕು ನುಡಿದನು.

"ಹಾಗಾದರೆ ಅವಳು ಯಾರಿಂದ ಕಚ್ಚಿಸಿಕೊಳ್ಳುವ ಪುಣ್ಯಮಾಡಿದ್ದಾಳೆಯೋ?" ಎಂದು ಕುಸುಮ ನಗುನಗುತ್ತ ಮನೆಯ ಆವರಣಕ್ಕೆ ಚಿಗರೆಯಂತೆ ಹಾರಿಹೋದಳು.

"ಹೋಗಿ, ರಾಜಗೋಪಾಲ್. ನೀವು ಏನೇನೋ ಮಾತಾಡುತ್ತೀರಿ" ಎಂದು ನಸುಮುನಿಸಿನಿಂದ ನುಡಿದಳು ಶ್ಯಾಮಲೆ.

"ಅದು ಅವಳಿಗೆ ತಕ್ಕಮಾತು. ನಿಮ್ಮ ಕೈಲಿ ಹಾಗೆ ಆಡುತ್ತೇನೆಯೆ?" ಎಂದು ರಾಜು ಸಮಾಧಾನಪಡಿಸುವ ಮಾತನ್ನಾಡಿದಾಗ, ಶ್ಯಾಮಲೆ ತೃಪ್ತಿಗೊಂಡಳು.

ಕುಸುಮ ಮನೆಗೆ ಹೋದವಳೇ ಲಕ್ಷ್ಮಿಯ ಪ್ರಸಾದವನ್ನು ತನ್ನ ಚಿಕ್ಕ ತಮ್ಮ ತಂಗಿಯರಿಗೆ ಹಂಚಿ, ತಾನೂ ರುಚಿನೋಡಿ, ರಾಜು ಕೊಟ್ಟಿದ್ದ 'ವಿಶೇಷ ಪ್ರಸಾದ'ವನ್ನೂ ತನ್ನ ಕೋಣೆಗೆಹೋಗಿ ಮೇಜಿನ ಮೇಲೆ ಇಟ್ಟಳು. ಕುರ್ಚಿಯಮೇಲೆ ವಿಶ್ರಮಿಸಿಕೊಳ್ಳುತ್ತ ಕುಳಿತಿದ್ದಾಗ, ರಾಜುವಿನ ನಗೆನುಡಿ ನೆನಪಿಗೆ ಬಂದಿತು. ಅವನು ಹುಡುಗಾಟಕ್ಕೆ ಆಡಿದನೋ ನಿಜವಾಗಿ ನುಡಿದನೋ ಎಂಬ ಸಂದೇಹದಿಂದ ಕಮಲಪುಷ್ಪವನ್ನು ತನ್ನ ಕರಕಮಲದಲ್ಲಿ ಹಿಡಿದು, ಅದರ ದಳಗಳನ್ನು ಬೆರಳಿಂದ ಮೆಲ್ಲನೆ ಅರಳಿಸಿ, ಆ ದುಂಬಿಯನ್ನು ನಿರೀಕ್ಷಿಸಿ ನೋಡಿದಳು. ದುಂಬಿಗೆ ಬದಲು ಒಂದು ಸಣ್ಣ ಕಾಗದದ ಮಡಿಕೆ ಚೀಟಿ ಸಿಕ್ಕಿತು. ಆಶ್ಚರ್ಯ ಕುತೂಹಲಗಳಿಂದ ಅದನ್ನು ತೆರೆದು ಓದಿಕೊಂಡಳು:

"ಪ್ರಿಯ ಕುಸುಮಾ,

ನಿನ್ನ ಕರಕಮಲಕ್ಕೆ ಒಪ್ಪಿಸಿದ ನನ್ನ ಹೃದಯಕಮಲದ ಸಂಕೇತ ಈ ಕಮಲಪುಷ್ಪ. ಅದರಲ್ಲಿ ನೆಲಸಿರುವ ದುಂಬಿ ಹೊರಕ್ಕೆ ಹಾರಿಬಂದಾಗ ಅದಕ್ಕೆ ನಿನ್ನ ಹೃದಯಕಮಲದಲ್ಲಿ ಆಶ್ರಯಕೊಡು. ನೀನು ಕುಸುಮ—ನಾನು ದುಂಬಿ. ಆಕರ್ಷಿಸಿದ ತಪ್ಪು ಯಾರದ್ದು? —ಜಾರ."

ಕುಸುಮನ ಸೂಕ್ಷ್ಮ ಬುದ್ಧಿಗೆ ಎಲ್ಲವೂ ತೆಟ್ಟಂದೆರೆದಂತೆ ಹೊಳೆಯಿತು. ರಾಜ ತನ್ನ ನಾಮಾಕ್ಷರಗಳನ್ನು ಹಿಂದು ಮುಂದು ಮಾಡಿ ಬರೆದಿದ್ದ; ಪರಿಣಾಮದ ಅರ್ಥ ಅವನಿಗೆ ಆಗಿತ್ತೋ ಇಲ್ಲವೋ, ಕುಸುಮನಿಗಂತೂ ಆಯಿತು. ತನ್ನಲ್ಲಿ ತಾನು ನಕ್ಕಳು. ಮಾತಿನ ಸೊಗಸುಗಾರಿಕೆ ಅವಳಿಗೆ ಅಚ್ಚರಿಯನ್ನುಂಟುಮಾಡಲಿಲ್ಲ. ಮಾತುಗಳು, ಅವುಗಳ ಅರ್ಥ—

ಇಬ್ಬರಿಗೂ ತಿಳಿದಿದ್ದ ಪ್ರಸಿದ್ಧ ಚಲನಚಿತ್ರದ ಹಿಂದಿಯ ಹಾಡೊಂದರ ಕನ್ನಡ ಅನುವಾದವಾಗಿತ್ತು!.

ರಾಜಗೋಪಾಲ್ ಇಷ್ಟು ಮುಂದುವರಿದು ಬಂದದ್ದಕ್ಕೆ ಈ ಹಿಂದೆ ತಾನು ಅವನಿಗೆ ಕೊಟ್ಟ ಸಲಿಗೆಯ ಸ್ವಾತಂತ್ರ್ಯವೆ ಕಾರಣವೆಂದು ಅವಳು ಅರಿತಳು. ಅವನಮೇಲೆ ತಪ್ಪು ಹೊರಿಸ ಹೋಗಲಿಲ್ಲ. ಇನ್ನು ಮುಂದೆ ಅವನೊಂದಿಗೆ ಎಷ್ಟರಮಟ್ಟಿನ ಒಡನಾಟದ ಸುಖ ಅನುಭೋಗಿಸಬಹು ದೆಂಬ ಇತಿಮಿತಿಯ ನಿರ್ಧಾರ ನಾಳೆಗಿರಲಿ ಎಂದು, ಕೈಯ ಚೀಟಿ ಇತರರ ಗಮನಕ್ಕೆ ಬಾರದಿರಲೆಂಬ ಉದ್ದೇಶದಿಂದ ಅದನ್ನು ಸಣ್ಣ ಸಣ್ಣ ಚೂರು ಮಾಡಿ, ಚೂರುಗಳನ್ನು ಕಿಟಕಿಯಿಂದ ಹೊರಕ್ಕೆ ತೂರಬಿಟ್ಟಳು.

## ೧೭

ಸುಂದರಮ್ಮನವರು ಹೊಸದಾಗಿ ರತ್ನನಿಗೆ ಸ್ವಸಂತೋಷದಿಂದ ಕೊಟ್ಟ ಹೊಸಬಗೆಯ ಸ್ವಾತಂತ್ರ್ಯದ ಪರಿಣಾಮವಾಗಿ ಅವಳು ಹೊಸಬಗೆಯ ಚೆಲುವಿನ ಮೂರ್ತಿಯಾದಳು. ಕುಸುಮನಿಗಿಂತ ರತ್ನ ಚೆನ್ನೋ ರತ್ನನಿಗಿಂತ ಕುಸುಮ ಚೆನ್ನೋ ಎಂಬ ಸುಮಧುರ ಸಂದೇಹ ರಾಜಗೋಪಾಲನ ಮನ ಸ್ಸನ್ನು ಕಾಡತೊಡಗಿತು.

ಹಿತ್ತಿಲ ಗಿಡ ಮದ್ದಲ್ಲ ಎನ್ನುವಂತೆ, ಮನೆಯ ಹೆಣ್ಣು ಮನಕ್ಕೆ ಬರ ಬೇಕಾದರೂ ತಡವೆ. ದೂರದ ಬೆಟ್ಟ ನೀಲಿಯಾಗಿ ಕಾಣುವಂತೆ, ದೂರದ ಹೆಣ್ಣೂ ಅಂತೆಯೆ ಮೋಹಕ. ರಾಜುವಿಗೆ ರತ್ನನೊಂದಿಗೆ ಎಂದಿನಿಂದಲೂ ಸಲಿಗೆಯೇ ಇದ್ದರೂ, ಈಗಂತು ಕುಸುಮ ಅವನ ಮನಸ್ಸನ್ನು ಅಪಹರಿಸಿ ಬಿಟ್ಟಿದ್ದಳು. 'ಬಹುಶಃ ರತ್ನ ಶಾಮನ ಮಡದಿಯಾಗುವಳು' ಎಂದು ಅವನೇನೋ ಊಹಿಸಿದ್ದನು ; ಹಾಗೆಯೆ ತಿಳಿದಿದ್ದನು. ತನಗೂ ರತ್ನನಿಗೂ ವಯಸ್ಸಿನ ಅಂತರ ಅಷ್ಟು ಹೆಚ್ಚು ಇಲ್ಲದ್ದರಿಂದ, ತನ್ನ ಅವಳ ಮದುವೆಯ ಸಂಬಂಧ ಬಹುಶಃ ಒದಗದೆಂದೇ ಅವನು ಎಣಿಸಿದ್ದನು. ಶಾಮ ರತ್ನನನ್ನು ಯಾವಾಗಲೂ ಸಲಿಗೆಯಿಂದ, ಪ್ರೀತಿಯ ರೀತಿಯಿಂದ, ಕಂಡಿಲ್ಲವೆಂಬುದು

ಅವನು ಬಲ್ಲ ವಿಷಯ. ರತ್ನನಿಗೂ ಶಾಮನಿಗೂ ಸರಿಜೋಡಿಯಲ್ಲವೆಂದೂ ಅವನ ಎಣಿಕೆ. ಮದುವೆಯಕಾಲ ಬಂದಾಗ ಶಾಮನನ್ನು ರತ್ನ ಒಪ್ಪುವಳೋ ಇಲ್ಲವೋ ಎಂದೂ ಅವನ ಸಂದೇಹ. 'ರತ್ನನ್ನ ನೀನೆ ಮದುವೆಯಾಗು' ಎಂದು ತಾಯಿ ಕೇಳಿದರೆ ಏನು ಮಾಡಬೇಕು? ಎಂಬ ಅಂಶವನ್ನೂ ಈಚೆಗೆ ಅವನು ಅನೇಕ ಸಲ ತನ್ನ ಮನಸ್ಸಿನಲ್ಲಿಯೇ ತಿರುವಿಹಾಕಿದ್ದನು. ಕುಸುಮನ ಪರಿಚಯು ನಿಕಟವಾದ ಮೇಲೆ ರತ್ನನ ಬಗೆಗಿದ್ದ ಭಾವನೆಗಳು ಅವನ ಅಂತರಾಳದಲ್ಲಿ ಮುಳುಗಿಹೋಗಿದ್ದುವು. ರತ್ನ ಸಾಣೆಹಿಡಿದ ರತ್ನ ದಂತಾದ ಮೇಲೆ, ಆ ಭಾವನೆಗಳು ಮತ್ತೆ ಮೇಲಕ್ಕೆ ಬಂದುವು. ನಿಜದ ಲೋಕದಲ್ಲಿ ಅವನ ಮನಸ್ಸೆಲ್ಲಾ ಕುಸುಮನ ಕಡೆಗೇ ಇದ್ದರೂ, ಭಾವನಾ ಲೋಕದಲ್ಲಿ ಮಾತ್ರ ಅವನು ಇಬ್ಬರ ಕೈಯನ್ನೂ ಹಿಡಿದು, ರುಕ್ಮಿಣಿ ಸತ್ಯ ಭಾಮೆಯರ ನಡುವೆ ಕೃಷ್ಣನಂತೆ, ನಡೆದುಹೋದನು. ಶ್ಯಾಮಲೆಯೂ ರಾಧೆಯಂತೆ ಒಲಿದು ಬಂದರೆ ಅವನ ಭಾವನಾಪೀಠದಲ್ಲಿ ಎಡೆಯಿದ್ದಿತು.

ರಾಜುವೇನು? ಸುಂದರಮ್ಮನವರೆ ಮೂಗಿನಮೇಲೆ ಬೆರಳಿಡತೊಡಗಿ ದ್ದರು, ದಿನದಿನಕ್ಕೆ ರಂಗೇರುತ್ತಿದ್ದ ರತ್ನನ ಚೆಲುವಿನ ಬೆಡಗನ್ನು ಕಂಡು. ಆದರೂ, 'ಇದನ್ನೆಲ್ಲಾ ಶಾಮು ಒಪ್ಪುತ್ತಾನೋ ಇಲ್ಲವೋ' ಎಂದು ಅವರ ಸಂದೇಹ. 'ಏನೋ ಹುಡುಗುತನ. ಮೂರು ದಿನ ಸಂತೋಷವಾಗಿ ನಲಿ ಯಲಿ. ಆಮೇಲೆ ಅವನುಂಟು ಇವಳುಂಟು. ಅವನು ಹೇಳಿದ ರೀತಿ ಇರುತ್ತಾಳೆ' ಎಂದು ಒಡನೆಯೆ ಸಮಾಧಾನಗೊಳ್ಳುತ್ತಿದ್ದರು.

ರತ್ನ ವಸ್ತ್ರಾಲಂಕಾರಗಳಲ್ಲಿ ತಮಗೆ ಎಣೆಯಾದುದನ್ನು ಕಂಡು ಕುಸುಮ ಶ್ಯಾಮಲೆಯರಿಗೂ ಹಿಗ್ಗು. ಈಗ ಅವರು ಕರಸಿಕೊಳ್ಳವೆಯೇ ತಾವಾಗಿ ರತ್ನನ ಮನೆಗೆ ಬಂದು ಹೋಗತೊಡಗಿದ್ದರು. ಈಗಲೀಗ ರತ್ನ ಸರ್ವ ವಿಧದಲ್ಲಿಯೂ ತಮ್ಮ ಸಹಚರ್ಯೆಗೆ ಯೋಗ್ಯೆ ಎಂದು ಅವರ ಭಾವನೆ.

ಈಗ ಮೂವರೂ ವಾರಕ್ಕೊಮ್ಮೆಯಾದರೂ ಒಟ್ಟಿಗೆ ಅಂಗಡಿಗಳಿಗೆ ವ್ಯಾಪಾರಕ್ಕೆ ಹೋಗುವರು. ಕೈಗೆ ಬಳೆ, ಜಡೆಗೆ ಟೇಪು, ಕಣ್ಣಿಗೆ ಕಾಡಿಗೆ, ಮುಖಕ್ಕೆ ಸ್ನೋ ಪೌಡರ್, ಕೂದಲಿಗೆ ಹೇರ್‌ಪಿನ್, 'ಬಾಡಿ,' ಕರ್ಚೀಫ್, ಉಗುರಿಗೆ ಬಣ್ಣ, ಕೊರಳಿಗೆ 'ನೆಕ್‌ಲೆಸ್' (ಹಾರ), ಕಾಲಿಗೆ ಹೊಸ ನಮೂ ನೆಯ ಚಪ್ಪಲಿ-ಹೋ! ಹಿಂದೆ ಕೊಳ್ಳದೆ ಇದ್ದ ಎಷ್ಟೊಂದು ಸಾಮಾನುಗಳನ್ನು

ಕೊಳ್ಳಬೇಕಾಯಿತು ರತ್ನ ಈಗ! ಅರಿವಿನಿಂದಲೇ ಆದ ಈ ಪರಿವರ್ತನೆ ರತ್ನನ ತಲೆಯಲ್ಲಿ ಹಿಂದೆ ಸುಳಿಯದಿದ್ದ ಭಾವನೆಗಳನ್ನು ತುಂಬಿದವು. ಈ ಹೊಸ ಸನ್ನಿವೇಶದಲ್ಲಿ, ಕುಸುಮ ಶ್ಯಾಮಲೆ ರಾಜು ಇವರೊಂದಿಗೆ ಅವಳ ಒಡನಾಟ ಆ ಭಾವನೆಗಳನ್ನು ಬಲಿಯಗೊಟ್ಟುವು.

ಈಗ ರಾಜು ಧೈರ್ಯವಾಗಿಯೇ ತಾಯಿಯನ್ನು ಕೇಳಿಬಿಡುತ್ತಿದ್ದ: "ಅಮ್ಮಾ, ಇವೊತ್ತು ಸಿನಿಮಾಕ್ಕೆ ಹೋಗಬೇಕು ಅಂತ ಮಾಡಿಕೊಂಡಿದ್ದೇನೆ. ಕನ್ನಡ ಚಿತ್ರ, 'ಕೃಷ್ಣಲೀಲೆ'. ರತ್ನನನ್ನೂ ಕರೆದುಕೊಂಡು ಹೋಗಲೆ? ನೀನು ಒಪ್ಪಿದರೆ ಕರೆದುಕೊಂಡು ಹೋಗುತ್ತೇನೆ. ಇಲ್ಲದಿದ್ದರೆ ಬೇಡ" ಎಂದು. "ಪದೇ ಪದೇ ಹೋಗಬೇಡಿ. ಎರಡು ತಿಂಗಳಿಗೋ ಮೂರು ತಿಂಗಳಿಗೋ ಒಂದು ಸಲ ಆದರೆ ಚೆನ್ನ. ಯಾವ ಅಭ್ಯಾಸವೂ ಚಾಳಿಯಾಗ ಬಾರದು, ಚಟ ಆಗಬಾರದು" ಎಂದು ಸುಂದರಮ್ಮನವರು ಉಪದೇಶ ಮಾಡಿ ಅವರನ್ನು ಕಳಿಸಿಕೊಡುತ್ತಿದ್ದರು. ಆದರೆ, ರಾಜುವೇನೋ ಹದಿನೈದು ದಿನಕ್ಕೊಮ್ಮೆ ಈ ಬಗೆಯ ಬೇಡಿಕೆಯನ್ನು ತಾಯಿಯ ಮುಂದಿಡುತ್ತಿದ್ದ; "ರತ್ನನಿಗೆ ಕೇಳಲು ಸಂಕೋಚ, ಕುಸುಮನೂ ಜೊತೆಗೆ ಬರುತ್ತಾಳಂತೆ, ಗಂಡಸರು ಜೊತೆಗಿರಲಿ ಅಂತ ನನ್ನನ್ನು ಕರೆಯುತ್ತಾರೆ" ಎಂದು ಸಭ್ಯನಂತೆ ನುಡಿಯುತ್ತಿದ್ದ. ಅಂತೂ, ಪುರಾಣ ಚಿತ್ರಗಳ ಹೆಸರು ಹೇಳಿ, ಪ್ರೇಮ ಚಿತ್ರಗಳಿಗೆ ಮೂವರನ್ನೂ ಕರೆದೊಯ್ಯುತ್ತಿದ್ದ. ತಾಯಿಯ ಅಪ್ಪಣೆ ಪಡೆದು ಹದಿನೈದು ಇಪ್ಪತ್ತು ದಿನಗಳಿಗೊಮ್ಮೆ ಸಂಜೆಯ ಹೊತ್ತು ಚಿತ್ರ ಸಂದರ್ಶನವಾದರೆ, ಅಪ್ಪಣೆಯಿಲ್ಲದೆಯೇ ವಾರಕ್ಕೆ ಒಂದು ಸಲವಾದರೂ ನಾಲ್ವರೂ ಕಾಲೇಜಿನ ಕಡೆಯ ಗಂಟೆಯ ಪಾಠಗಳಿಗೆ 'ಚಕ್ಕರ್' ಹಾಕಿ 'ಮ್ಯಾಟಿನಿ' (ಹಗಲು) ಪ್ರದರ್ಶನಗಳಿಗೆ ಹೋಗಿ, ಹೆಚ್ಚುಕಡಮೆ ಕಾಲೇಜಿ ನಿಂದ ಮನೆಗೆ ಹಿಂದಿರುಗುವ ಹೊತ್ತಿಗೇ ಬಂದುಬಿಡುತ್ತಿದ್ದರು. ಆದರೂ ಸ್ವಲ್ಪ ತಡವಾಗಿಯೇ ಆಗುತ್ತಿತ್ತು. ಕಾಲೇಜಿನಲ್ಲಿ ಚರ್ಚಾಕೂಟವಿತ್ತು ಎಂದೋ, ಉಪನ್ಯಾಸವಿತ್ತು ಎಂದೋ ಕಾಣಬಾರದ ನಿಜಕ್ಕೊಂದು ಸುಳ್ಳಿನ ಮುಸುಕು ಸಿದ್ಧವಾಗಿಯೇ ಇರುತ್ತಿತ್ತು. ಇಂಥ ದಿನಗಳಲ್ಲಿ ರತ್ನನಿ ಗಿಂತ ರಾಜು ಬೇಕೆಂದೇ ತಡವಾಗಿಯೇ ಮನೆಗೆ ಬರುತ್ತಿದ್ದ—ತಾವಿಬ್ಬರೂ ಕೂಡಿ ಎಲ್ಲಿಯೂ ಹೋಗಿರಲಿಲ್ಲವೆಂದು ತೋರ್ಪಡಿಸುವ ಸಲುವಾಗಿ. ಹೇಳ

ಬೇಕಾದ ಸುಳ್ಳನ್ನೆಲ್ಲಾ ರತ್ನನ ನಾಲಗೆಯೇ ನುಡಿಯಬೇಕಾಗಿತ್ತು. ಅತ್ತ ಶ್ಯಾಮಲೆಗೂ ಅವಳ ಮನೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದ್ದಿತು. ಸ್ವಭಾವತಃ ಮುಗ್ಧರೂ ಸರಳಶೀಲರೂ ಆದ ರತ್ನ ಶ್ಯಾಮಲೆಯರು ರಾಜು-ಕುಸುಮ ಇವರ ಭೋಗವಿಲಾಸದ ಪ್ರವೃತ್ತಿಯ ಸುಳಿಯಲ್ಲಿ ಸಿಕ್ಕಿ ಗಿರಗಿರನೆ ಸುತ್ತುತ್ತಿದ್ದರು.

ಸುಳಿ ಯಾವಾಗ ಯಾರು ಯಾರನ್ನು ಒಳಕ್ಕೆ ಎಳೆದುಕೊಳ್ಳುವುದೋ ಯಾರು ತಾನೆ ಬಲ್ಲರು?

ಇವರ ಕಾರ್ಯಕ್ರಮದಲ್ಲಿ ಚಲನಚಿತ್ರ ಸಂದರ್ಶನವೊಂದೇ ಅಲ್ಲ; ಸಂಜೆಯ ಸುತ್ತಾಟ, ವಾರಾಂತ್ಯದ ವನವಿಹಾರ ಇವೂ ಸೇರಿದ್ದುವು. ಒಂದು ಶನಿವಾರ ಸಂಜೆ ಕಬ್ಬನ್ ಪಾರ್ಕ್, ಇನ್ನೊಂದು ಸಂಜೆ ಲಾಲ್‌ಬಾಗ್, ಮತ್ತೊಂದು ಸಂಜೆ ನರಹರಿರಾಯನ ಗುಡ್ಡ, ಮತ್ತೊಂದು ದಿನ ವಸಂತಪುರ —ಹೀಗೆ ಸಾಗುತಿತ್ತು ಇವರ ವನವಿಹಾರ ಕಾರ್ಯಕ್ರಮದ ಪರ್ಯಾಯ. ಒಂದು ದಿನ ಕುಸುಮನ ಮನೆಯ ಅಂಬೊಡೆ ಸಕ್ಕರೆಪೊಂಗಲ ಸರಬರಾಯಿ; ಒಂದು ದಿನ ಶ್ಯಾಮಲನ ಮನೆಯಿಂದ ಮಾಡಿಸಿ ತರಿಸಿದ ಪುಳಿಯೋಗರೆ ಮೊಸರನ್ನ; ಇನ್ನೊಂದು ದಿನ ರತ್ನನ ಆತಿಥ್ಯ—ಕೇಸರಿಭಾತ್, ವಾಂಗೀ ಭಾತ್, ಉಪ್ಪೇರಿ; ಇವುಗಳ ಜೊತೆಗೆ ರಾಜು ತನ್ನ ಸ್ವಂತದ್ದೆಂದು ಜೊತೆಗೆ ಒಯ್ಯುತ್ತಿದ್ದ, ಹಣ್ಣುಹಂಪಲು, ಕಾರದ ಗೋಡಂಬಿ, ಬೊಂಬಾಯಿ ಆನಂದ ಭವನದ ಬಗೆಬಗೆಯ ಸಿಹಿತಿಂಡಿಗಳು, ಬಿಸ್ಕತ್ತು, ಪೆಪ್ಪರ್‌ಮಿಂಟ್, ಚಾಕೊಲೇಟ್, ಬೀಡ. ಈಚೆಗೆ ಅವನು ಗೆಳತಿಯರ ಮುಂದೆ ಸಿಗರೇಟು ಸೇದುವ 'ಪೌರುಷ'ವನ್ನೂ ಮೆರೆಯುತ್ತಿದ್ದ.

* * *

ಇತ್ತ ಈ 'ವಿದ್ಯಾರ್ಥಿ'–'ವಿದ್ಯಾರ್ಥಿನಿ'ಯರು ವಿನೋದ ವಿಹಾರ ವಿಲಾಸಗೋಷ್ಠಿಯಲ್ಲಿ ನಲಿಯುತ್ತಿದ್ದ ವೇಳೆ ಮೈಸೂರಿನಲ್ಲಿ ಶಾಮಣ್ಣ ನಿರಂತರ ವ್ಯಾಸಂಗ ನಿರತನಾಗಿದ್ದ. ವಿನೋದ ವಿಹಾರಗಳಿಗೆ ವೆಚ್ಚಮಾಡಬಹುದಾಗಿದ್ದ ಹಣವನ್ನೆಲ್ಲಾ ಪುಸ್ತಕ ಪತ್ರಿಕೆಗಳನ್ನು ಕೊಳ್ಳಲು ವ್ಯಯ ಮಾಡುತ್ತಿದ್ದ. ಚಂದಾ ಕೊಟ್ಟು 'ಹಿಂದೂ' ಪತ್ರಿಕೆ, 'ಪ್ರಬುದ್ಧ ಕರ್ಣಾಟಕ' Times Literary Supplement, New Statesman & Nation,

'John o' London's Weekly,' Modern Review, ಮೊದಲಾದ ವಿಚಾರಪೂರ್ಣ ಪತ್ರಿಕೆಗಳನ್ನು ತರಿಸಿಕೊಳ್ಳುತ್ತಿದ್ದ. ಅವನ ತಲೆಯಲ್ಲಿ ಪ್ರಣಯ, ಮದುವೆ, ಚಲನಚಿತ್ರ—ಇವು ಯಾವುದಕ್ಕೂ ಎಡೆಯೇ ಇರಲಿಲ್ಲ. ಹೋಟಲಿನ ಇತರ ಗಿರಾಕಿಗಳು ನಿರ್ದಾಕ್ಷಿಣ್ಯವಾಗಿ ನಿತ್ಯವೂ ಅಡಿಗೆಯ ರುಚಿಯನ್ನು ಟೀಕಿಸುತಿದ್ದರು; ಮಾಲಿಕನ ಮೇಲೆಯೋ ಅಡಿಗೆಯವನ ಮೇಲೆಯೋ ಹಾರಾಡುತಿದ್ದರು. ಶಾಮಣ್ಣನ ನಾಲಗೆಗೆ ರುಚಿಯ ಸೂಕ್ಷ್ಮ ವ್ಯತ್ಯಾಸಗಳು ಅರಿವಿಗೇ ಬರುತ್ತಿರಲಿಲ್ಲ. ಊಟ ಮಾಡುವಾಗಲೂ ಅವನ ಕೈಲಿ ಒಂದು ಪುಸ್ತಕವೋ ಪತ್ರಿಕೆಯೋ ಇದ್ದೇ ಇರುತ್ತಿತ್ತು.

ಇಷ್ಟಾದರೂ, ಮೈಸೂರಿನಲ್ಲಿ ಎಲ್ಲಿ ಸಂಗೀತ ಕಚೇರಿಯಾದರೂ ಅಲ್ಲಿ ಅವನು ಸಿದ್ಧ. ಓದಿನ ಶ್ರಮದ ಆಯಾಸವನ್ನು ಆಗಿಂದಾಗ್ಗೆ ಸಂಗೀತ ಶ್ರವಣದಿಂದ ಪರಿಹರಿಸಿಕೊಳ್ಳುತ್ತಿದ್ದನು.

ಇದರ ಜೊತೆಗೆ, ಶಾಮಣ್ಣ ಬೆಳಗ್ಗೆಯ ಹೊತ್ತು ಕುಕ್ಕರಹಳ್ಳಿಯ ಕೆರೆಯ ಏರಿಯ ಮೇಲೂ, ಸಂಜೆ ಕಾರಂಜಿಯ ಕೆರೆಯವರೆಗೂ ಗಾಳಿ ಸಂಚಾರವಿಟ್ಟುಕೊಂಡು, ಆರೋಗ್ಯವನ್ನು ಕಾಪಾಡಿಕೊಂಡಿದ್ದನು.

ಹದಿನೈದು ದಿನಕ್ಕೊಮ್ಮೆ ತಪ್ಪದೆ ಮನೆಗೆ ಯೋಗಕ್ಷೇಮದ ಕಾಗದ ಬರೆಯುತ್ತಿದ್ದನು. ಆಗಲೆ ಅವನಿಗೆ ಮನೆಯ ನೆನಪು; ತಾಯಿಯ ನೆನಪು. ಯಾವುದೋ ಕಾರಣಕ್ಕಾಗಿ ರತ್ನನ ನೆನಪು ಅಪ್ಪಿತಪ್ಪಿ ಆದರೂ ಅದರಲ್ಲಿ ಯಾವ ಮಧುರಭಾವದ ಮೆರಗೂ ಇರುತ್ತಿರಲಿಲ್ಲ.

ದಸರಾ ರಜಾಕ್ಕೆ ಶಾಮಣ್ಣ ಎಂದಿನಂತೆ ಊರಿಗೆ ಬರುತ್ತಾನೆಂದು ಸುಂದರಮ್ಮನವರು ನಿರೀಕ್ಷಿಸಿದ್ದರು. ಆದರೆ, ಶಾಮಣ್ಣ ಕಾಗದ ಬರೆದುಬಿಟ್ಟ: "ರಜದಲ್ಲಿ ಲೈಬ್ರರಿ (ಪುಸ್ತಕ ಭಂಡಾರ) ಪುಸ್ತಕಗಳ ವಿಶೇಷ ವ್ಯಾಸಂಗ ಮಾಡಬೇಕು" ಎಂದು. ಸುಂದರಮ್ಮನವರಿಗೇನೋ ಹಿರಿಯ ಮಗನ ಈ ಓದಿನ ಹುಚ್ಚು ಕಂಡು ಹಿಗ್ಗು. ಆ ಹಿಗ್ಗಿನ ಹಿಂದೆಯೇ ಕೊರಗೂ ಬರುತ್ತಿತ್ತು: "ಅವನು ಹಾಗೆ, ಇವನು ಹೀಗೆ. ಯಾರ ಯಾರ ಹಣೆಯಲ್ಲಿ ಏನು ಬರೆದಿದೆಯೋ ಕಂಡವರು ಯಾರು?" ಎಂದುಕೊಳ್ಳುತ್ತಿದ್ದರು.

೧೮

ವರಮಹಾಲಕ್ಷ್ಮಿಯ ಹಬ್ಬದ ಸಂಜೆ ರಾಜು ಕುಸುಮನಿಗೆ ತನ್ನ ಪ್ರಣಯ ಸಂದೇಶವನ್ನು ಮುಟ್ಟಿಸಲು ಕುಸುಮುವನ್ನೇ ಸಾಧನವನ್ನಾಗಿ ಮಾಡಿಕೊಂಡು ತನ್ನ ಜಾಣತನಕ್ಕೆ ತಾನೇ ಹಿಗ್ಗಿದ್ದನು. ಆದರೆ ತನ್ನ ಬರಹಕ್ಕೆ ಪ್ರತಿಯಾಗಿ ಬರಹದ ಉತ್ತರವಾಗಲಿ, ಅದರ ಪ್ರಸ್ತಾಪವಾಗಲಿ ಅವಳಿಂದ ಎಂದೂ ಬರಲಿಲ್ಲ. ಮಾತಿಗಂತೂ ಅವಕಾಶವಿರಲಿಲ್ಲ. ಏಕೆಂದರೆ, ಇಬ್ಬರೂ ಎಂದೂ ಏಕಾಂತದಲ್ಲಿ ಸೇರಿದ್ದುದೇ ಇಲ್ಲ. ಅವಳೊಬ್ಬಳನ್ನೇ ಏಕಾಂತದಲ್ಲಿ ಸಂಧಿಸಿ, ಅವಳೊಂದಿಗೆ ಇನ್ನೇನಿಲ್ಲದಿದ್ದರೂ ಪುಸ್ತಕಗಳಿಂದಲೂ, ಚಲನಚಿತ್ರಗಳಿಂದಲೂ ಕಲಿತಿದ್ದ ಪ್ರಣಯದ ಮಾತುಗಳನ್ನೆಲ್ಲ ಆಡಿಬಿಡಬೇಕೆಂದು ಅವನು ಕಾತುರಗೊಂಡಿದ್ದನು.

ರತ್ನ ತನ್ನ ಗೆಳತಿಯರೊಂದಿಗೆ ಬಸ್ಸಿನಲ್ಲಿ ಕಾಲೇಜಿಗೆ ಹೋಗುತ್ತಿದ್ದಳು; ರಾಜು ಬೈಸಿಕಲ್ ಮೇಲೆ ಕಾಲೇಜಿಗೆ ಹೋಗುತ್ತಿದ್ದ. ಕುಸುಮು ಶ್ಯಾಮಲೆಯರೊಂದಿಗೆ ವಿಹರಿಸಬಯಸಿದಾಗ ವಾಹನವನ್ನು ಮನೆಯಲ್ಲೇ ಬಿಟ್ಟು ಹೊರಡುತ್ತಿದ್ದ.

ರತ್ನ ಕಾಲೇಜಿಗೆಂದು ಮನೆಯನ್ನು ಬಿಟ್ಟು ಹೊರಟಾಗ ಒಂದು ದಿನ ರಾಜುವೂ ಅವಳ ಜೊತೆಗೂಡಿದ್ದ. ಕೈಯ್ಯಲ್ಲಿ ಒಂದು 'ನೋಟ್' ಪುಸ್ತಕ ಮಾತ್ರ ಇದ್ದಿತು. ಅವನ ಕೈ ಎಂದೂ ಪುಸ್ತಕಗಳ ಹೊರೆ ಹೊತ್ತು ಬಳಲಿದ್ದಿಲ್ಲ. ರತ್ನನೇನೋ ತನ್ನ ಇತರ ಜೊತೆಗಾತಿಯರಂತೆ ಕೈತುಂಬ ಪುಸ್ತಕಗಳನ್ನು ಹೇರಿಕೊಂಡು ಹೊರಟಿದ್ದಳು; 'ಕತ್ತೆ ಅಗಸರ ಮೂಟೆ ಹೊರುವಹಾಗೆ ಯಾಕೇ ಇಷ್ಟು ಪುಸ್ತಕಗಳ ಕಂತೆ ಹೊತ್ತು ತರುತ್ತೀಯೇ? ನಮ್ಮ ಲೆಕ್ಚರರುಗಳೆಲ್ಲ ನೋಟ್ಸು ಬರಸುತ್ತಾರೆ, ಹೇಗಿದ್ದರೂ. ಕೈಯಲ್ಲಿ ಒಂದು ನೋಟ್ ಬುಕ್ಕು ಹಿಡಿದುತಂದರೆ ಸಾಕು" ಎಂದು ಕುಸುಮನೇನೋ ಇವಳಿಗೆ ಉಪದೇಶ ಮಾಡಿದ್ದಳು. ಈ ಒಂದು ಅಂಶದಲ್ಲಿ ಮಾತ್ರ ಅವಳು

ಕುಸುಮನ ಶಿಷ್ಯೆಯಾಗಿರಲಿಲ್ಲ. ಪುಸ್ತಕಗಳನ್ನು ಹೊತ್ತು ಹೋಗುವ ತನ್ನ ಕಡೆಗೆ ಕಾಲೇಜು:ಮೆಟ್ಟಿಲು ಹತ್ತಲಾಗದ ಬಡಕನ್ಯೆಯರು ತಿರುಗಿನೋಡಿದರೆ ರತ್ನನಿಗೆ ಅದೇನೋ ಹಿಗ್ಗು, ಹೆಮ್ಮೆ. ಬೀದಿಯವರ, ತನ್ನ ಅತ್ತೆ ಸುಂದರಮ್ಮನವರ ಮೆಚ್ಚುಗೆ ಪಡೆಯಲು ಅವಳು ತನ್ನ ಈ ಒಂದು ರೂಢಿಯನ್ನು ಅವಳು ಇನ್ನೂ ಬಿಟ್ಟಿರಲಿಲ್ಲ.

ಜೊತೆಗೂಡಿ ನಡೆದೇ ಬಂದ ರಾಜುವನ್ನು ಕಂಡು ರತ್ನ ಪ್ರಶ್ನಿಸಿದಳು:

"ಇವೊತ್ತು ಕಾಲೇಜಿಗೆ ಹೋಗುವುದಿಲ್ಲವೆ ರಾಜು ?"

"ಹೋಗುತ್ತೇನೆ" ಎಂದ ರಾಜು.

"ಯಾಕೆ, ಬೈಸಿಕಲ್ ತರಲಿಲ್ಲ? ಸಂಜೆ ಏನಾದರೂ 'ಪ್ರೋಗ್ರಾಂ' (ವಿಶೇಷ ಕಾರ್ಯಕ್ರಮ) ಉಂಟೋ'' ಎಂದು ರತ್ನ ಅವನ ಮುಖವನ್ನು ನೋಡಿ, ಮುಗುಳುನಗೆ ಬೀರಿದಳು.

ಮುಗುಳುನಗೆಯ ಅರ್ಥವನ್ನು ರಾಜು ಗ್ರಹಿಸಿದ. ಆದರೆ, ಅವಳು ನಿರೀಕ್ಷಿಸಿದ ಉತ್ತರ ಅವನ ಬಾಯಿಂದ ಹೊರಡಲಿಲ್ಲ,

"ರತ್ನ ನಿನ್ನಿಂದ ಒಂದು ಉಪಕಾರ ಆಗಬೇಕಲ್ಲ ?"

ರಾಜು ಎಂದೂ ಹೀಗೆ ತನ್ನನ್ನು ಪ್ರಶ್ನಿಸಿದವನಲ್ಲ. ತನ್ನಿಂದ ಅವನಿಗೆ ಏನು ಉಪಕಾರವಾಗುವುದು ಇದ್ದೀತು ? ಅವನಿಗೆ ಏನು ಹಣ ಕಾಸಿನ ಕೊರತೆಯೆ ? ಅದಕ್ಕೆ ಕಾರಣವಿಲ್ಲ. ತಾಯಿ ಕೊಟ್ಟಷ್ಟನ್ನೂ ವೆಚ್ಚಮಾಡಿ, ಕೊರತೆಬಿದ್ದಾಗ ನಿಸ್ಸಂಕೋಚವಾಗಿ ಎಷ್ಟೋ ವೇಳೆ ಗೋಗರೆಯುತ್ತಿದ್ದ, ಕಾಡುತ್ತಿದ್ದ, ಬೇಡುತ್ತಿದ್ದ; ಬಾರದೆ ಹೋದರೆ ಬೆದರಿಸಿ ಕಸಿದುಕೊಳ್ಳುತ್ತಿದ್ದ. ಇದನ್ನೆಲ್ಲ ರತ್ನ ಕಂಡು ಬಲ್ಲಳು. ಆದರೆ ಇದಕ್ಕೂ ಒಂದು ಮಿತಿಯುಂಟಲ್ಲ. ಬಹುಶಃ ಸಿಗರೇಟಿಗೆ ತನ್ನಿಂದ ನಾಲ್ಕಾಣೆಯನ್ನೋ ಆರಾಣೆಯನ್ನೋ ಬಯಸುತ್ತಾನೆ ಎಂದುಕೊಂಡಳು ರತ್ನ.

"ಏನಾದರೂ ಚಿಲ್ಲರೆ ಬೇಕಾಗಿದೆಯೇನು ?" ಎಂದು ಕೇಳಿಯೂ ಬಿಟ್ಟಳು, ಧೈರ್ಯಮಾಡಿ.

"ಇಲ್ಲ ಇಲ್ಲ, ನನ್ನ ಹತ್ತಿರ ಸಾಕಷ್ಟು ಇದೆ" ಎಂದು ರಾಜು ತನ್ನ ಷರಾಯಿ ಜೇಬಿಗೆ ಕೈಹಾಕಿ, ಹಣ ಬೇಕಿಲ್ಲವೆಂಬ ಬಗ್ಗೆ ಅದರ ಝಣತ್ಕಾರದ ಸಾಕ್ಷ್ಯವನ್ನು ಸೂಚಿಸಿದ. ಜೇಬಿನಿಂದ ಕೈಯನ್ನು ಹೊರ

ತೆಗೆದಾಗ, ಅಭ್ಯಾಸಬಲದಿಂದ ಸಿಗರೇಟಿನ ಪೆಟ್ಟಿಗೆಯೂ ಬೆಂಕಿಕಡ್ಡಿಯ ಪೆಟ್ಟಿಗೆಯೂ ಹೊರಕ್ಕೆ ಬಂದುವು. ರಾಜು ಸಿಗರೇಟೊಂದನ್ನು ಹೊತ್ತಿಸಿ ಕೊಂಡು, ಮನಸ್ಸನ್ನು ನಿರ್ಧಾರಕ್ಕೆ ತರಲು ಹೊಗೆಯ ಸೇವನೆಯ ಉತ್ತೇಜನವನ್ನು ಪಡೆದುಕೊಂಡ.

"ಏನೂ ಅಂದರೆ........" ರಾಜು ಇನ್ನೂ ಸಂದೇಹಿಸುತ್ತಲೇ ಇದ್ದ.

ಏನಿರಬಹುದೆಂದು ರತ್ನನಿಗೆ ಅರ್ಥವಾಗಲಿಲ್ಲ. ಮೌನವಾಗಿದ್ದೇ ಅವನ ಮುಂದಿನ ಮಾತನ್ನು ನಿರೀಕ್ಷಿಸಿದಳು.

ರಾಜು ತನ್ನ ನೋಟ್ ಬುಕ್ಕಿನ ಹಾಳೆಗಳ ನಡುವೆಯಿಂದ ಒಂದು ಕವರನ್ನು ತೆಗೆದು, "ಇದನ್ನ...." ಎಂದು ಅದನ್ನು ರತ್ನನ ಮುಂಮೊಡ್ಡಿದ.

ಅದನ್ನು ಅವಳು ನೋಡದವೆಯೇ, "ಲೀವ್ ನೋಟೋ (Leave Note: ರಜದ ಕಾಗದ)....?" ಎಂದು ಕೇಳಿದಳು.

"ಅಲ್ಲ. ನನಗೆ ಅಷ್ಟು ಗೊತ್ತಿಲ್ಲವೆ? ನಮ್ಮ ಕಾಲೇಜಿಗೆ ನಿನ್ನ ಕೈಲಿ ಕಾಗದ ಕಳಿಸುತ್ತೇನೆಯೇ? ಇದನ್ನ........" ಎಂದು ಮತ್ತೆ ತಡವರಿಸಿ, "....ಕುಸುಮನಿಗೆ...." ಎಂದು ಅಪೂರ್ಣವಾದರೂ ಅರ್ಥಪೂರ್ಣವಾಗಿಯೇ ನುಡಿದ.

"ಓಹೋ! 'ಲವ್ ನೋಟೋ'! (ಪ್ರಣಯ ಪತ್ರ)" ಎಂದು ರಾಜುವಿನ ಮುಖವನ್ನು ನೋಡಿ, ತುಂಟನಗೆಯನ್ನು ತುಳುಕಿಸಿದಳು.

"ಹಾಗೇನೂ ಇಲ್ಲ. ಏನೋ ಒಂದು ಗುಟ್ಟಿನ ವಿಚಾರ...." ಎಂದು ಗಂಭೀರ ಮುಖಮುದ್ರೆಯನ್ನು ನಟಿಸಿ, "ಅವಳಿಗೆ ಮರೆಯದೆ ಕೊಟ್ಟು ಬಿಡುತ್ತೀಯಾ? ಶ್ಯಾಮಲಾಗೆ ಕಾಣುವ ಹಾಗೆ ಮಾತ್ರ ಕೊಡಬೇಡ" ಎಂದು ಕೇಳಿಕೊಂಡ.

ಗೆಳತಿಯ ಸಂಬಂಧದ ಗುಟ್ಟು ಏನೆಂಬುದು ರತ್ನನಿಗೆ ಗೊತ್ತಾಗದೆ ಹೋಗಲಿಲ್ಲ.

"ಆಗಲಿ" ಎಂದು ಒಪ್ಪಿಕೊಂಡಳು. "ನನಗೆ ಕೂಲಿ?" ಎಂದು ನಕ್ಕಳು.

"Thanks (ವಂದನೆಗಳು)" ಎಂದು ರಾಜು ಇನ್ನೊಂದು ಸಿಗರೇಟನ್ನು ಹೊತ್ತಿಸಿಕೊಂಡು, ಬೇಗಬೇಗನೆ ನಡೆದು ಹೋದ.

ಪತ್ರದ ವಿಷಯ ಏನೆಂಬುದನ್ನು ರತ್ನ ಊಹಿಸಿದ್ದರೂ, ಅದನ್ನು ಓದಿನೋಡಬೇಕೆಂಬ ಚಪಲ ಅವಳನ್ನು ಕಾಡತೊಡಗಿತು. ಅದನ್ನು ತಡೆಯಲಾಗಲಿಲ್ಲ. ಕವರನ್ನು ಹರಿದು, ಪತ್ರದ ಮೇಲೆ ಕಣ್ಣಾಡಿಸುತ್ತ ನಿಧಾನವಾಗಿ ಕುಸುಮನ ಮನೆಯ ಕಡೆ ಹೆಜ್ಜೆಯಿಡುತ್ತಿದ್ದಳು. ಅಷ್ಟು ಹೊತ್ತಿಗೆ ರಾಜು ಬೀದಿಯ ಕೊನೆಯ ತಿರುವಿನಲ್ಲಿ ಕಣ್ಮರೆಯಾಗಿದ್ದ.

ರತ್ನನ ನಿರೀಕ್ಷೆ ಪೊಳ್ಳಾಗಿರಲಿಲ್ಲ. ಆದರೂ ಕಾಗದದ ಮಾತು ಮಾತನ್ನೂ ಮನದಲ್ಲಿ ಮೆಲುಕುಹಾಕಲು ಸಾಧ್ಯವಾಗಲಿಲ್ಲ. ಕುಸುಮನ ಮನೆ ಸಮಿೀಪಿಸುತ್ತಿತ್ತು. ಕವರನ್ನು ತನ್ನ ಒಂದು ಪುಸ್ತಕದ ಹಾಳೆಗಳ ನಡುವೆ ಸೆರೆಹಾಕಿ, ಕುಸುಮನನ್ನು ಕರೆಯಲು ಅವಳ ಮನೆಹೊಕ್ಕಳು.

ಸಂಜೆ ರಾಜು ಎಂದಿಗಿಂತ ಮುಂಚೆಯೇ ಮನೆಗೆ ಹಿಂದಿರುಗಿ, ರತ್ನನ ಆಗಮನಕ್ಕಾಗಿ ತವಕದಿಂದ ಕಾದಿದ್ದ. ಅವಳು ಬಂದೊಡನೆಯೇ, ಬಾಗಿಲಲ್ಲೆ ಕೇಳಿದ : "ಕಾಗದ ಕೊಟ್ಟೆಯಾ?'' ಎಂದು ಅವಳು "ಕೊಟ್ಟೆ" ಎಂದು ತಿಳಿಸಿದಳು. "ಏನಾದರೂ ತಿಳಿಸಿದಳೇ?'' ಎಂದು ಅವನು ಕೇಳಿದ್ದಕ್ಕೆ, ''ಇಲ್ಲ'' ಎಂದು ರತ್ನ ಉತ್ತರ ಕೊಟ್ಟಳು.

"ಬಹುಶಃ ಉತ್ತರವನ್ನೇ ಬರೆದು ಕಳಿಸುತ್ತಾಳೆ" ಎಂದುಕೊಂಡು, ರಾಜು ಹಿಗ್ಗಿದ ಮನಸ್ಸಿನ ಹಕ್ಕಿಯನ್ನು ಸ್ವಚ್ಛಂದ ವಿಹಾರಕ್ಕೆ ಹಾರಬಿಟ್ಟು, ಆಕಾಶ ಮಾರ್ಗದಲ್ಲಿ ನಡೆದುಹೋಗುವಂತೆ ಭೂಮಿಯ ಮೇಲೆ ನಡೆದು ಹೋದ. ಹಗುರವಾದ ಮನಸ್ಸಿಗೆ ತಕ್ಕಂತೆ ನಡೆಯೂ ಹಗುರವಾಗಿತ್ತು.

ರತ್ನ ಅಡಿಗೆಯ ಭಟ್ಟರು ಕೊಟ್ಟ ತಿಂಡಿ–ಕಾಫಿಯನ್ನು ಸೇವಿಸಿಯಾದ ಮೇಲೆ, ತನ್ನ ಕೋಣೆಗೆ ಧಾವಿಸಿದಳು. ಬಾಗಿಲನ್ನು ಹಾಕಿಕೊಂಡು, ರಾಜು ಕುಸುಮನಿಗೆ ಬರೆದಿದ್ದ ಪತ್ರವನ್ನು ಓದಿಕೊಳ್ಳತೊಡಗಿದಳು.

"ಪ್ರಿಯೆ ಕುಸುಮಾ,

"ಕುಸುಮದಲ್ಲಿ ಕುಳಿತು ಮಧುಪಾನ ಮಾಡಿ ನಲಿಯಲು ದುಂಬಿ ಹಾತೊರೆಯುತ್ತಿದೆ. ಆದರೆ ಕುಸುಮ ಅದೇಕೋ ತನ್ನ ದಳಗಳ ಬಾಗಿಲನ್ನು ತೆರೆಯದೆ ಮೌನದ ಬೀಗ ಹಾಕಿಕೊಂಡಿದೆ. ಈ ದುಂಬಿಯನ್ನು

ಕಂಡು ತಿರಸ್ಕಾರವೆ? ಬೇರೆಯ ದುಂಬಿಗೆ ಏನಾದರೂ ಆಶ್ರಯ ದೊರೆ ತಿದೆಯೆ ?

"ಏನಾದರೂ ಇರಲಿ. ಅಂತೂ, ನಿನ್ನ ಮೌನ ಮಾತ್ರ ನನಗೆ ಅರ್ಥವಾಗುತ್ತಿಲ್ಲ.

"ನೀನು ನನಗೆ ಸುಖದ ಸುಳಿವು ತೋರಿಸಿದ್ದೀಯೋ ಹೊರತು, ಅದನ್ನು ಸೂರೆಗೊಟ್ಟಿಲ್ಲ. ನಿನ್ನ ಹೃದಯ ಬಹಳ ಕ್ರೂರವಾದುದು. ನಿನ್ನೊಂದಿಗೆ ಏಕಾಂತದಲ್ಲಿ ಪ್ರೇಮದ ಸರ್ವಸುಖವನ್ನೂ ಪಡೆಯಬೇಕೆಂದು ನಾನು ಎಂದಿನಿಂದಲೂ ಬಯಸುತ್ತಿದ್ದೇನೆ. ನೀನು ನನಗೆ ಎಲ್ಲ ಬಗೆ ಯಲ್ಲೂ ಪ್ರೋತ್ಸಾಹ ಕೊಟ್ಟು ನನ್ನ ಅಂದಿನ ಪತ್ರಕ್ಕೆ ಉತ್ತರ ಕೊಡದೆ ಮೌನವಾಗಿರುವುದು ಸರಿಯಲ್ಲ. ನನ್ನಲ್ಲಿ ನಿನಗೆ ನಿಜವಾಗಿ ಪ್ರೇಮ ವಿಲ್ಲದಿದ್ದರೆ, ಹಾಗೆಂದು ತಿಳಿಸಿಬಿಡು. ನಿನ್ನ ಪ್ರೇಮದ ನಟನೆಯನ್ನು ಸಾಕುಮಾಡು.

"ಈ ಸಲವೂ ನಿನ್ನಿಂದ ಖಂಡಿತವಾದ ಉತ್ತರ ಬಾರದಿದ್ದರೆ, ನಿಲುಕದ ಹಣ್ಣನ್ನು ಬಿಟ್ಟು ನಿಲುಕುವ ಹಣ್ಣಿಗಾದರೂ ಕೈಚಾಚುತ್ತೇನೆ.

"ಈ ಪತ್ರದ ವಿಷಯ ಏನಿರಬಹುದೆಂದು ನಿನ್ನ ಕೈಗೆ ಈ ಕಾಗದವನ್ನು ಕೊಡುವ ರತ್ನ ಊಹಿಸಿದ್ದಾಳು. ಅವಳನ್ನು ನಮ್ಮ ಅಂತರಂಗಕ್ಕೆ ತೆಗೆದು ಕೊಳ್ಳುವ ಉಪಾಯವನ್ನು ಆಲೋಚಿಸುತ್ತಿದ್ದೇನೆ. ನೀನು ಸುಮುಖವಾದ ಉತ್ತರ ಕೊಟ್ಟರೆ, ನಮ್ಮ ಮುಂದಿನ ಪತ್ರಗಳಿಗೆ ಬೇರೆಯ ಏರ್ಪಾಡನ್ನು ಮಾಡಬಹುದು.

"ಅಥವಾ ಪತ್ರಗಳ ಗೊಂದಲ ತಾನೆ ಏಕೆ? ನಾವಿಬ್ಬರೂ ಒಟ್ಟಿಗೆ ಗೋಪ್ಯವಾಗಿ ಸೇರುವ ಆಲೋಚನೆಯನ್ನು ಮಾಡಬಹುದು.

"ಪ್ರೇಮಿಗಳಿಗೆ ಯಾವ ಸಾಹಸವೂ ಹೆಚ್ಚಲ್ಲ. ನಿಜವಾದ ಪ್ರೇಮ ವೊಂದಿದ್ದರೆ, ಅವರಿಗೆ ಯಾವ ಕಟ್ಟೂ ಇಲ್ಲ. ಕಟ್ಟಳೆಯೂ ಇಲ್ಲ.

"'ಶ್ರೀ'ಯವರ ಇಂಗ್ಲಿಷ್ ಗೀತಗಳ ಪುಸ್ತಕದಲ್ಲಿ My Love is like a red red rose ಎಂಬ ಕವನ ಓದಿದ್ದೀಯಲ್ಲವೇ?! ಅದರ ವಿಚಾರ ಆವೊತ್ತೇ ನಾನು ನಿನಗೆ ಹೇಳಿದ್ದೆ. ಅವರು Rose ಎಂದರೆ ತಾವರೆ ಎಂದು ಭಾಷಾಂತರಮಾಡಿದ್ದಾರೆ. ಅದು ತುಂಬ ಚೆನ್ನಾಗಿದೆ. ನೀನು ನನ್ನ

ಕೆಂದಾವರೆ. ಅದಕ್ಕೇ ನಾನು ನಿನಗೆ ಕೆಂದಾವರೆ ಹೂವು ಕೊಟ್ಟಿದ್ದು.

"ಕೆಂದಾವರೆಯು ಕೆಳೆತನವನ್ನು ದುಂಬಿ ಬಯಸುತ್ತಿದೆ. ಅದಕ್ಕೆ ಸ್ಥಳಕೊಡು.

ನಿನ್ನ ಪ್ರೇಮಕ್ಕಾಗಿ ಕಾದಿರುವ,
ರಾಜ."

ಕಾಗದವನ್ನು ಓದಿಕೊಂಡು ರತ್ನ ನೀಳವಾಗಿ ಉಸಿರುಬಿಟ್ಟಳು. ಕಾಗದವನ್ನು ಕುಸುಮನಿಗೆ ತಲಪಿಸುವುದಾದರೆ, ಅದನ್ನು ಬೇರೆಯ ಕವರಿನಲ್ಲಿಟ್ಟು, ರಾಜುವಿನ ಅಕ್ಷರವನ್ನು ಹೋಲುವಂತೆ ಕವರಿನಮೇಲೆ ಅವನ ಹೆಸರು ಬರೆದು, ಮಾರನೆಯ ದಿನ ತಲಪಿಸುವುದಾಗಿ ರತ್ನ ತನ್ನ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡಳು.

ಇದೇತಾನೆ ಪ್ರಾರಂಭವಾದ ರಾಜುವಿನ ಪ್ರಣಯ ನಾಟಕದಲ್ಲಿ ತನ್ನ ಪಾತ್ರವೇನೆಂಬುದನ್ನು ಅವಳು ಕಲ್ಪಿಸಿಕೊಳ್ಳತೊಡಗಿದಳು.

## ೧೯

ಕುಸುಮನ ಒಲವಿನೋಲೆಯನ್ನು ರಾಜು ಕಾತುರನಾಗಿ ನಿರೀಕ್ಷಿಸುತ್ತಿದ್ದ.

ನಾಲ್ಕೈದು ದಿನಗಳಾದರೂ ಅವಳಿಂದ ಉತ್ತರ ಬರಲಿಲ್ಲ. ಒಂದೆರಡು ಸಲ ಕುಸುಮನನ್ನು ಕಂಡಿದ್ದಾಗ, ಅವಳ ಎಂದಿನ ನಡೆನುಡಿಯ ಬಗೆಯುಲ್ಲಿ ಯಾವ ಮಾರ್ಪಾಟೂ ಅವನಿಗೆ ಕಾಣಲಿಲ್ಲ. ಅವನ ಪಾಲಿಗೆ ಅವಳು ಎಂದಿನ ಕಮನೀಯ ಕುಸುಮ.

ಎರಡು ಮೂರು ದಿನ ಕಳೆದಮೇಲೆ ನಾಲ್ಕಾರು ಪಂಕ್ತಿಗಳ ನೆನಪಿನ ಕಾಗದವೊಂದನ್ನು ಅವಳಿಗೆ ಬರೆದು, ಅದನ್ನೂ ಅವಳಿಗೆ ಮುಟ್ಟಿಸಬೇಕೆಂದು ರತ್ನನನ್ನು ದೀನನಾಗಿ ಕೇಳಿಕೊಂಡ. ಅವಳು ಅವನ ದೂತಿಯಾಗಲು ಒಪ್ಪಿಕೊಂಡಳು.

"ನನ್ನ ಈಚಿನ ಎರಡು ಕಾಗದಗಳು ನಿನಗೆ ಸೇರಿದುವೇ?" ಎಂದು

ಕೇಳಿಬಿಡಬೇಕೆಂದು ಅವನ ಮನಸ್ಸು. ಕುಸುಮನನ್ನು ಸಂಧಿಸಿದಾಗಲೆಲ್ಲ ಶ್ಯಾಮಲೆಯೂ ಜೊತೆಗಿರುತ್ತಿದ್ದಳು. ಆ ಪ್ರಶ್ನೆ ಕೇಳಲು ಅವಕಾಶವೇ ಆಗಲಿಲ್ಲ.

ಇನ್ನೂ ಎರಡು ಮೂರು ದಿನ ಕಳೆದಮೇಲೆ, ಅನಿರೀಕ್ಷಿತವಾಗಿ ರತ್ನ ನಿಂದ ಅವನ ಕೈಗೆ ಅವನು ನಿರೀಕ್ಷಿಸಿದ್ದ ಕಾಗದ ಬಂದಿತು.

ರಾತ್ರಿ ಊಟವಾದಮೇಲೆ ರಾಜು ತನ್ನ ಕೋಣೆಗೆ ಹೋದಾಗ ಹಿಂದೆಯೇ ಹೋಗಿ ರತ್ನ ಆ ಕಾಗದವನ್ನು ಅವನ ಕೈಗಿತ್ತಳು.

"ಇವೊತ್ತು ಕೊಟ್ಟಳೇ?" ಎಂದು ಕೇಳಿದ ರಾಜು.

"ಮೊನ್ನೆಯೇ ಕೊಟ್ಟಳು. ಮರೆತುಹೋಯಿತು, ನಿನಗೆ ಕೊಡುವುದು. ಇವೊತ್ತು ಬೆಳಗ್ಗೆ ಓದಲು ಪುಸ್ತಕ ತೆರೆದಾಗ ಜ್ಞಾಪಕವಾಯಿತು. ನೀನು ಒಬ್ಬನೇ ಇದ್ದಾಗ ಕೊಡೋಣ ಅಂತ ಮಾಡಿಕೊಂಡೆ...." ಎಂದು ತಡೆದು ತಡೆದು ಹೇಳಿದಳು.

ರಾಜು ತವಕದಿಂದ ಮೇಜಿನ ಮುಂದೆ ಕುಳಿತು, ಕವರನ್ನು ಬಿಡಿಸಿ ಕುಸುಮನ ಕಾಗದ ಓದಿಕೊಳ್ಳತೊಡಗಿದ:

"ಪ್ರಿಯ ರಾಜಗೋಪಾಲ್,

"ನಿನ್ನ ಹಿಂದಿನ ಪತ್ರ ಮತ್ತು ಈ ಪತ್ರ—ಎರಡಕ್ಕೂ ಏನು ಉತ್ತರ ಬರೆಯಬೇಕಾಗಿದೆಯೋ ನಾನು ಕಾಣೆ.

"ನಿನ್ನೊಂದಿಗೆ ನಾನು ಸಲಿಗೆಯಿಂದ ನಡೆದುಕೊಂಡಿರುವುದು ದಿಟ. ರತ್ನ ಅಂತೂ ಸರಿಯೇ ಸರಿ: ನಿನ್ನ ಸೋದರಮಾವನ ಮಗಳಂತೆ. ಅವ ಳೊಂದಿಗೆ ನೀನು ಯಾವ ಬಗೆಯ ಸಲಿಗೆ ವಹಿಸಿದರೂ ಬಾಧಕವಿಲ್ಲ. ನೀನೂ ಅವಳೂ ಇಷ್ಟಪಟ್ಟರೆ ಗಂಡ ಹೆಂಡಿರಾಗಬಹುದು. ನಾವಿಬ್ಬರೂ ನಿನ್ನಲ್ಲಿ ಇಟ್ಟಿರುವ :ಸಲಿಗೆಯನ್ನೇ ಶ್ಯಾಮಲೆಯೂ ನಿನ್ನಲ್ಲಿ ತೋರುತ್ತಿದ್ದಾಳೆ. ಅವರಿಬ್ಬರ ಸಲಿಗೆಗಿಂತ ನನ್ನ ಸಲಿಗೆ ಹೆಚ್ಚಿನದೂ ಅಲ್ಲ, ಬೇರೆಯ ರೀತಿ ಯದೂ ಅಲ್ಲ. ನೀನು ಅದನ್ನು ತಪ್ಪಾಗಿ ಅರ್ಥಮಾಡಿಕೊಂಡಿರಬಹುದು, ಅಷ್ಟೆ.

"ನನ್ನ ನಿನ್ನ ವಯಸ್ಸಿನ ತರುಣ ತರುಣಿಯರಲ್ಲಿ ಈ ರೀತಿಯ ಸಲಿಗೆ ಬೆಳೆಯುವುದು ಸಹಜ. ಅದು ಸಾರ್ಥಕವಾಗಬೇಕಾದರೆ ಅದು ಮದುವೆ

ಯಲ್ಲಿ ಕೊನೆಗೊಳ್ಳಬೇಕು. ಮದುವೆಯಾಗುವ ಅವಕಾಶ ಇದ್ದು ಅಂತಹ ಒಂದು ಒಳ್ಳೆಯ ಗುರಿ ಇದ್ದರೆ, ಸಲಿಗೆ ತಪ್ಪುದಾರಿಯಲ್ಲಿ ನಡೆದರೂ ಚಿಂತೆ ಯಿಲ್ಲ. ಮದುವೆಯ ಮುದ್ರೆ ಒತ್ತಿ ಎಲ್ಲವನ್ನೂ ಮುಚ್ಚಿಬಿಡಬಹುದು.

"ನಾನೂ ನೀನೂ ಮದುವೆಯಾಗುವ ಅವಕಾಶ ಇಲ್ಲದಿರುವುದರಿಂದ ಮದುವೆಯ ಆಸೆ ಇಟ್ಟುಕೊಳ್ಳುವುದೂ ಸಾಧ್ಯವಿಲ್ಲ. ಒಂದು ವೇಳೆ ನಾವಿಬ್ಬರೂ ಆಸೆಪಟ್ಟರೂ, ಅದು ನಡೆಯದ ಮಾತು. ನಾವು ಬೇರೆ ಬೇರೆಯ ಜಾತಿ ಪಂಗಡಗಳಿಗೆ ಸೇರಿದವರು. ನಮ್ಮ ಹಿರಿಯರು ನಮ್ಮ ಇಷ್ಟವನ್ನು ನಡಸಿಕೊಡುತ್ತಾರೆ ಎಂಬ ಖಾತರಿಯೇನಿಲ್ಲ. ಅವರ ಇಷ್ಟಕ್ಕೆ ವಿರುದ್ಧವಾಗಿ ನಾವು ಮದುವೆಯಾಗಬೇಕಾದರೆ, ಸಿನಿಮಾಗಳಲ್ಲಿ ನಾವು ನೋಡುತ್ತಿರುವ ಹಾಗೆ, ಮದರಾಸಿಗೋ ಬೊಂಬಾಯಿಗೋ ಓಡಿ ಹೋಗ ಬೇಕು; ಅಪಾಯಗಳನ್ನು ಎದುರಿಸಬೇಕು; ಕೊನೆಗೆ, ಎದುರಿಸಲಾಗದೆ ಅವಕ್ಕೆ ಬಲಿಯಾಗಬೇಕು. ಸುಖವಾಗಿ ಜೀವನ ನಡಸಬೇಕೆಂದಿರುವ ನಾನು ಇದಕ್ಕೆಲ್ಲಾ ಸಿದ್ಧವಾಗಿಲ್ಲ.

"ನನ್ನ ನಿನ್ನ ಮದುವೆಯ ಮಾತು ಬಿಸಿಲುಗುದುರೆಯ ಬೆನ್ನು ಹತ್ತಿದಹಾಗೆ. ಆದ್ದರಿಂದ, ನೀನು ನನ್ನಲ್ಲಿ ಕೈಗೂಡದ ಅನಾವಶ್ಯಕವಾದ ಸಲ್ಲದ ರೀತಿಯ ಪ್ರೀತಿಯ ಭಾವನೆಯನ್ನು ಇಟ್ಟುಕೊಳ್ಳಬೇಡ.

"ನನ್ನ ನಿನ್ನ ಪ್ರೇಮ, ಗೆಳೆಯ ಗೆಳತಿಯರ ಪರಿಶುದ್ಧ ಪ್ರೇಮ ವಾಗಿರಲಿ. ಇದು ನನ್ನ ನಿಜವಾದ ಹಾರೈಕೆ. ಇಲ್ಲದ ಸಲ್ಲದ ಆಶೆಯ ಬಳ್ಳಿಯನ್ನು ಬೆಳಸಿಕೊಂಡು ಅದರಿಂದ ನನ್ನನ್ನೂ ಕಟ್ಟಿಹಾಕಲು ಪ್ರಯತ್ನಿ ಸಬೇಡ; ನನ್ನ ನಿನ್ನ ಇಬ್ಬರ ಭವಿಷ್ಯವನ್ನೂ ಹಾಳುಮಾಡಬೇಡ.

"ನೀನರಿಯದ ಇನ್ನೂ ಒಂದು ಸಂಗತಿಯನ್ನು ನಿನಗೆ ತಿಳಿಸಲು ಇದು ಸರಿಯಾದ ಅವಕಾಶವೆಂದು ನಾನು ತಿಳಿದಿದ್ದೇನೆ. ನೀನು ನನ್ನಲ್ಲಿ ತೋರುತ್ತಿರುವ ಅಲ್ಪ ಸ್ವಲ್ಪ ಪಕ್ಷಪಾತ ನಿಮ್ಮ ರತ್ನನ ಚುರುಕು ಕಣ್ಣಿಗೆ ಬೀಳದೆಹೋಗಿಲ್ಲ. ಇದು ಅವಳಲ್ಲಿ ನನ್ನ ಮೇಲೆ ಅಪಾರ ಅಸೂಯೆಯನ್ನು ಹುಟ್ಟಿಸಿದೆ. ಇದರಲ್ಲೇನೂ ತಪ್ಪಿಲ್ಲ; ಇದು ತೀರ ಸಹಜ. ಅವಳು ನನ್ನಲ್ಲಿ ಸ್ನೇಹವನ್ನು ನಟಿಸುತ್ತಿದ್ದಾಳೆಯೇ ಹೊರತು, ನ್ಯಾಯವಾಗಿ ತನಗೆ ದೊರೆಯಬೇಕಾದ ಪ್ರೇಮಫಲವನ್ನು ನಾನು ಕಸಿದುಕೊಂಡಿದ್ದೇನೆ ಎಂದು

ಅವಳಿಗೆ ನನ್ನ ಮೇಲೆ ಇನ್ನಿಲ್ಲದ ಕೋಪ. ಇದನ್ನು ನೀನು ಅರಿಯೆ; ನಾನು ಚೆನ್ನಾಗಿ ಬಲ್ಲೆ.

"ನನ್ನ ಮೇಲೆ ಅವಳಿಗೆ ಅಸೂಯೆ, ಕೋಪ! ಇದರ ಅರ್ಥವೇನು ಬಲ್ಲೆಯಾ? ನಿನ್ನ ಮೇಲೆ ಅವಳಿಗೆ ಅತಿಶಯವಾದ ಪ್ರೇಮ. ಬೇರೆಯ ರೀತಿಯಿಂದಲೂ ಇದನ್ನು ನಾನು ಅರ್ಥಮಾಡಿಕೊಂಡಿದ್ದೇನೆ.

"ಅವಳನ್ನು ನಿಮ್ಮ ಅಣ್ಣನಿಗೋ ನಿನಗೋ ಕೊಟ್ಟು ಮದುವೆಮಾಡು ವುದು ಖಂಡಿತ. ವಯಸ್ಸಿನಲ್ಲಿ ನಿನಗೂ ಅವಳಿಗೂ ಹೆಚ್ಚು ವ್ಯತ್ಯಾಸವಿಲ್ಲ ವಂತೆ. ಆದ್ದರಿಂದ ಅವಳನ್ನು ನಿಮ್ಮ ಅಣ್ಣನಿಗೆ ಮದುವೆ ಮಾಡುವ ಸಂಭವವೇ ಹೆಚ್ಚು. ಆದರೆ, ಅವಳಿಗೆ ನಿಮ್ಮ ಅಣ್ಣನನ್ನು ಮದುವೆಯಾಗಲು ಖಂಡಿತ ಇಷ್ಟವಿಲ್ಲ. ಆದರೆ, ಹಾಗೆಂದು ತನ್ನನ್ನು ಸಾಕಿ ಸಲಹಿದ ಅತ್ತಿಗೆ ಹೇಳಿಕೊಳ್ಳಲು ಅವಳಿಗೆ ಮನಸ್ಸುಬಾರದು. ನೀನೇ ಅವಳನ್ನು ಮದುವೆಯಾಗುವುದಾಗಿ ನಿಮ್ಮ ತಾಯಿಗೆ ತಿಳಿಸಿದರೆ, ಅವರೂ ಒಪ್ಪುತ್ತಾರೆ. ನಿಮ್ಮಿಬ್ಬರ ಪರಸ್ಪರ ಪ್ರೇಮವನ್ನು ಅವರು ಅರಿತರೆ, ಅವರು ನಿಮ್ಮಿಬ್ಬರ ಮದುವೆ ಮಾಡುವುದು ಖಂಡಿತ.

"ಆದ್ದರಿಂದ, ಈಗ ನೀನು ನನ್ನ ಕಡೆಗೆ ಹರಿಯಬಿಟ್ಟಿರುವ ಪ್ರೇಮ ವನ್ನು ರತ್ನನ ಕಡೆಗೆ ತಿರುಗಿಸುವುದು ನಿನ್ನ ಕರ್ತವ್ಯ, ನಿನ್ನ ಧರ್ಮ. ನಿನ್ನ ಪ್ರೇಮ ಅವಳಲ್ಲಿ ವ್ಯರ್ಥವಾಗುವುದಿಲ್ಲ.

"ಅವಳು ರೂಪವತಿಯಲ್ಲದಿದ್ದರೆ ನಾನು ನಿನಗೆ ಇಷ್ಟೆಲ್ಲ ಹೇಳುವ ಸಾಹಸಮಾಡುತ್ತಿರಲಿಲ್ಲ. ನನ್ನ ಮೇಲಿನ ಮೋಹ ನಿನ್ನ ಕಣ್ಣನ್ನು ಮಂಜು ಮಾಡಿದೆ. ಈ ಕುರುಡು ಮೋಹವನ್ನು ನೀನು ತ್ಯಜಿಸಿದರೆ, ಅವಳು ನಿನಗೆ ನನಗಿಂತ ಚೆಲುವೆಯಾಗಿ ಕಾಣುತ್ತಾಳೆ. ಇದರಲ್ಲಿ ಸಂದೇಹವಿಲ್ಲ.

"ಮನೆಯಲ್ಲಿ ರತ್ನವನ್ನಿಟ್ಟುಕೊಂಡು, ಬೀದಿಯಲ್ಲಿ ಕಂಡ ಬೆಣಚು ಕಲ್ಲಿನ ಚೂರಿಗೆ ನೀನೇಕೆ ಬಾಯಿಬಿಡುತ್ತಿರುವೆ? ನಿನ್ನ ಮರುಳುತನವನ್ನು ಕಂಡು ನನಗೆ ಆಶ್ಚರ್ಯವಾಗಿದೆ.

"ಯಾವುದಕ್ಕೂ ಕಾಲ ಮೀರಿಲ್ಲ. ಕಾಲ ಮೀರುವುದಕ್ಕೆ ಮುಂಚೆ, ಕೈಗೆ ಸಿಕ್ಕುವಂತಿರುವುದನ್ನು ಕಳೆದುಕೊಳ್ಳಬೇಡ. ಕೈಗೆ ಸಿಕ್ಕದ್ದಕ್ಕಾಗಿ ಈ ರೀತಿ ತೊಳಲಬೇಡ.

"ಕಾಗದವನ್ನು ಓದಿಕೊಂಡಾದ ಮೇಲೆ, ಇದನ್ನು ನಾಶಮಾಡಿ ಬಿಡು.

ನಿನ್ನ ನಚ್ಚಿನ ಗೆಳತಿ,
ಕುಸುಮ."

ತಕ್ಕಮಟ್ಟಿಗೆ ದೀರ್ಘವಾಗಿಯೇ ಇದ್ದ ಪತ್ರವನ್ನು ಓದಿಕೊಂಡು, ರಾಜು ನಿರಾಶೆಯ ನಿಟ್ಟುಸಿರನ್ನು ಬಿಟ್ಟನು. ಅವನು ಕುಸುಮನಿಂದ ನಿರೀಕ್ಷಿಸಿದ್ದ ಒಲವಿಗೆ ಪ್ರತಿಯಾಗಿ ಉಪದೇಶ ದೊರಕಿತ್ತು! ಅದು ಸಮಂಜಸವಾಗಿಯೂ ಅವನಿಗೆ ಕಂಡಿತು. ಆದರೆ, ಅದರಂತೆ ನಡೆಯುವುದು ಮಾತ್ರ ಅವನಿಗೆ ವಿಚಿತ್ರವೆನಿಸಿತು. ಒಂದು ದಿಕ್ಕಿದಲ್ಲಿ ಹರಿಯುತ್ತಿದ್ದ ಪ್ರೇಮವನ್ನು ಇನ್ನೊಂದು ದಿಕ್ಕಿಗೆ ತಿರುಗಿಸುವುದಾದರೂ ಹೇಗೆ ಸಾಧ್ಯ?

ಅದು ಪ್ರೇಮವೋ ಬರಿಯ ಆಕರ್ಷಣೆಯೋ ಯಾವುದೂ ಅವನಿಗೆ ಗೊತ್ತಿರಲಿಲ್ಲ. ಹೆಣ್ಣಿನ ಸೆಳೆತಕ್ಕೆ ಅವನ ತಾರುಣ್ಯ ಸಿಲುಕಿತು, ಅದನ್ನು ತಡೆಗಟ್ಟಬೇಕೆಂದು ಅವನಿಗನ್ನಿಸಿರಲಿಲ್ಲ. ನಿರಾಶೆಯ ಭಾವದಲ್ಲಿಯೇ ಅವನು ಷರಾಯಿಯ ಜೇಬಿಗೆ ಕೈಹಾಕಿ ಒಂದು ಸಿಗರೇಟನ್ನು ಪೆಟ್ಟಿಯಿಂದ ಹೊರ ತೆಗೆದ. ಇನ್ನೇನು ಹೊತ್ತಿಸಬೇಕೆನ್ನುವಲ್ಲಿ, ನೆನಪಾಯಿತು: ತಾನಿರುವುದು ತನ್ನ ಮನೆ ಎಂದು. ಎಂದೂ ಅವನು ಮನೆಯಲ್ಲಿ ಸಿಗರೇಟು ಸೇದಿದ್ದುದಿಲ್ಲ. ಇಂದೂ ಆ ಧೈರ್ಯವಾಗಲಿಲ್ಲ. ಇನ್ನೇನು ಆರುವುದರಲ್ಲಿದ್ದ ಬೆಂಕಿಯ ಕಡ್ಡಿಯ ಉರಿಯ ಕುಡಿಗೆ, ಮೇಜಿನ ಮೇಲೆ ಬಿದ್ದಿದ್ದ ಕುಸುಮನ ಕಾಗದದ ತುದಿಯನ್ನು ಸೋಕಿಸಿದ. ಅದು ಭಗ್ಗನೆ ಹೊತ್ತಿಕೊಂಡು ಉರಿಯತೊಡಗಿತು. ಅದು ಸಂಪೂರ್ಣವಾಗಿ ಕರಿಕಾಗುವವರೆಗೂ ಕೈಯಲ್ಲೆ ಹಿಡಿದುಕೊಂಡಿದ್ದ.

ಕುಸುಮನ ಮೇಲಿನ ಪ್ರೇಮಕುಸುಮವೂ ತನ್ನ ಕೋಪಾಗ್ನಿಯಲ್ಲಿ ಕರಿಕಾದಂತೆ ಅವನಿಗೆ ಭಾಸವಾಯಿತು:

ಕಾಗದದ ಕರಿಕನ್ನು ಪುಡಿಪುಡಿಮಾಡಿ ಅದನ್ನು ಕಿಟಕಿಯಿಂದ ಹೊರಕ್ಕೆ ಉಃಫೆಂದು ಉರುಬಿದ.

ಕುಸುಮನ ಮೇಲಿನ ಪ್ರೇಮವನ್ನೂ ಗಾಳಿಗೆ ತೂರಿದಂತೆ ಅವನಿಗೆ ಭಾಸವಾಯಿತು.

ಶಕ್ತಿಯುಡುಗಿದವನಂತೆ ಅವನು ಕುರ್ಚಿಯಲ್ಲಿ ಕುಸಿದು ಕುಳಿತ. ಇದುವರೆಗೂ ತನ್ನ ಹೃದಯದಲ್ಲಿ ಪ್ರತಿಷ್ಠಿತಳಾಗಿದ್ದ ಕುಸುಮನನ್ನು ಒಳಗೆ ನಿರೀಕ್ಷಿಸಿ ನೋಡುವ ರೀತಿಯಲ್ಲಿ ಕಣ್ಣು ಮುಚ್ಚಿಕೊಂಡ; ಮುಚ್ಚಿದ ಕಣ್ಣುಗಳನ್ನೆ ಮತ್ತೆ ಕೈಗಳಿಂದ ಮುಚ್ಚಿಕೊಂಡ.

ಕಣ್ಣುಮುಚ್ಚಿನ ಕತ್ತಲೆಯಲ್ಲಿ ಅವನ ಹೃದಯವೂ ಕತ್ತಲೆ ಕವಿದಿದ್ದಂತೆ ಅವನಿಗೆ ತೋರಿತು.

ನಿರಾಶೆಯ ಮೌನದ ಅಂಧಕಾರದಲ್ಲಿ ಎರಡು ಮೂರು ನಿಮಿಷಗಳು ಕಳೆದುವು.

ಮೆಲ್ಲನೆ ಕೋಣೆಯಬಾಗಿಲನ್ನು ಹಾಕಿದಂತೆ ಅವನಿಗೆ ಸದ್ದು ಕೇಳಿಸಿತು. ಪರಿಮಳವೊಂದು ಹತ್ತಿರಕ್ಕೆ ಸುಳಿದು ಬಳಸಿದಂತೆ ಅನುಭವವಾಯಿತು. ಕುಸುಮನ ಕಾಗದದ ಕವರನ್ನು ಕೈಗೆ ತೆಗೆದುಕೊಂಡಿದ್ದಾಗ ನಾಸಿಕದ ಬಳಿ ಸುಳಿದ ನರುಗಂಪೇ ಇದೆಂದು ನೆನಪಾಯಿತು.

ಮನಸ್ಸಿನ ಪಟದಮೇಲೆ ಕುಸುಮನ ಚಿತ್ರ ಮೂಡಿ ನಿಂತು, ಇನ್ನು ನನ್ನ ಬಳಿಗೆ ಬರಬೇಡ ಎಂದು ಸೂಚಿಸಿ, ಯಾರ ಕಡೆಗೋ ಕೈ ತೋರಿಸುತ್ತಿರುವಂತೆ ಕಂಡಿತು. ಆಗ—

"ರಾಜೂೂೂ...."ಎಂದು ಮೃದು ಮಧುರವಾದ ದನಿಯೊಂದು ಹಿಂದಿನಿಂದ ಬಂದು ಅವನನ್ನು ಎಚ್ಚರಿಸಿತು. ಆದರೂ ಅವನು ಕಣ್ಣು ಮುಚ್ಚಿಯೇ ಇದ್ದ.

"ರಾಜೂ...." ಅದೇ ಮೆಲುದನಿ. ಮರುಕದಿಂದ ಸಂತೈಸುವ ರೀತಿಯ ದನಿ.

"ಕುಸುಮನಿಗೆ ನಿನ್ನ ಮೇಲೆ ಕೋಪ ಅಂತ ಕಾಣುತ್ತೆ, ಅಲ್ಲವೆ?"— ಅದೇ ದನಿಯಿಂದ ಪ್ರಶ್ನೆ ಬಂದಿತು.

ರಾಜು ಮೌನವಾಗಿದ್ದ.

"ರಾಜೂ......." ದನಿಯಲ್ಲಿ ಈಗ ಮರುಕವಿರಲಿಲ್ಲ; ಬೇಡಿಕೆಯ ಬಗೆಯಿತ್ತು, ಮುದ್ದುಗರೆಯುವ ಮಗುವಿನ ಮುಗ್ಧ ತಂತ್ರವಿತ್ತು.

ಕುಸುಮನ ಚಿತ್ರ ಅಳಿಸಿಹೋಗಿ, ಅದರ ಸ್ಥಾನದಲ್ಲಿ ರತ್ನನ ಚಿತ್ರ

ನೆಲಸಿದ್ದಂತೆ ಅವನಿಗೆ ತೋರಿತು.

"ರಾಜೂ....ರಾಜೂ...." ಚಿಗುರಿನಂಥ ಕೈಬೆರಳು ತನ್ನ ಕ್ರಾಪಿನ ಕುರುಳ ನಡುವೆ ಆಡಿದಂತೆ ಅವನಿಗೆ ಅರಿವಾಯಿತು; ಅವೇ ಬೆರಳುಗಳ ಬೆಚ್ಚನೆಯ ಸೋಂಕು ಕೆನ್ನೆಯ ಮೇಲೆ ಹರಿದಾಡಿದಂತೆ ಅನುಭವ ವಾಯಿತು.

"ರತ್ನಾ...." ಎಂದು ಕೆನ್ನೆಯ ಮೇಲೆ ಆಡಿ, ಹೆಗಲ ಮೇಲೆ ಹೂಕುಳಿತಿದ್ದ ಮೃದುವಾದ ಕೈಯನ್ನು ರಾಜು ತನ್ನ ಕೈಯಿಂದ ಹಿಡಿದು ಕೊಂಡ.

"ರಾಜೂ........"

ರಾಜು ಕಣ್ಣುಬಿಟ್ಟು ಹಿಂತಿರುಗಿ ನೋಡಿದ. ರತ್ನ ಇರಲಿಲ್ಲ. ಕೋಣೆಯ ಬಾಗಿಲು ಮುಚ್ಚಿತ್ತು.

ರತ್ನ ಬಾಗಿಲನ್ನು ಎಳೆದುಕೊಂಡು ಹೋಗಿದ್ದಾಳೆ ಎಂದುಕೊಂಡ ರಾಜು.

ರತ್ನನ ಉಪಾಯ ಫಲಕಾರಿಯಾಗಿ ಪರಿಣಮಿಸಿತ್ತು.

## ೨೦

ಕುಸುಮನ ಕಾಗದದಲ್ಲಿ ವ್ಯಕ್ತವಾಗಿದ್ದ ಭಾವನೆಗಳಿಗೆ ಅವಳ ನಡೆ ನುಡಿವಕನ್ನಡಿಯಾಗಿರಲಿಲ್ಲ. ಎಂದಿನಂತೆಯೇ ಮೋಹಕ ರೂಪ; ಒಲಿಸಿ ಕೊಳ್ಳುವ ಕಣ್ಣ ನೋಟ, ತುಟಿಯ ಕುಡಿನಗೆ; ಸಲಿಗೆಯ ಮಾತುಕತೆ. ಉಪದೇಶ ಮಾಡಬಲ್ಲ ಸ್ವಾಭಿಮಾನದ ಗಂಭೀರ ಕನ್ಯೆಯೆ ಇವಳು ಎಂದು ರಾಜುವಿನ ಮನಸ್ಸಿಗೆ ಸಂದೇಹವಾಯಿತು. ಅವಳ ಕಾಗದದ ನೆನಪು ಮುಳ್ಳಿನಂತೆ ಇರಿಯತೊಡಗಿದಾಗ, ದೂರದಿಂದ ಮನಸ್ಸನ್ನು ಸೆಳೆದು ಕೊಯ್ಯಲು ಹೋದಾಗ ಮುಳ್ಳಿನಿಂದ ಚುಚ್ಚುವ ಚೆಲುಗುಲಾಬಿಯಂತೆ ಕಾಣತೊಡಗಿದಳು—ಕುಸುಮ. ಅವಳು ಅವನ ಭಾಗಕ್ಕೆ ಅರ್ಥವಾಗದ ಒಗಟಾಗಿ ಪರಿಣಮಿಸಿದಳು.

ರತ್ನನಿಗೇನೋ ತನ್ನ ರಹಸ್ಯ ಬಯಲಾಗಿದೆಯೆಂದು ರಾಜುವಿನ ಭಾವನೆ. ಒಳಗೊಳಗೆ ಅನುಭವಿಸುತ್ತಿದ್ದ ತಿರಸ್ಕಾರದ ನೋವನ್ನು ರಾಜು ಹೊರಕ್ಕೆ ತೋರಗೊಡಲು ಇಷ್ಟಪಡಲಿಲ್ಲ. ಎಂದಿನಂತೆ ಅವನು ತನ್ನ ಮೂವರು ಗೆಳತಿಯರೊಂದಿಗೆ ಹೊರಕ್ಕೆ ಹೊರಟಾಗ ಮೊದಲಿನ ಸ್ನೇಹದ ಬಗೆಯನ್ನೇ ಬಳಸಿಕೊಂಡು ಬಂದ. ಆದರೂ, ಅವನು ಎಷ್ಟೇ ಇಷ್ಟಪಡದಿದ್ದರೂ, ಅವನು ಮೊದಲು ಕುಸುಮನ ಬಗೆಗೆ ತೋರುತ್ತಿದ್ದ ಪಕ್ಷಪಾತ ಈಗ ಕ್ರಮಕ್ರಮೇಣ ಕುಗ್ಗುತ್ತ ಬರುತ್ತಿತ್ತು. ಇತರರಿಗೆ ಮೊತ್ತ ದಲ್ಲಿ ಇದು ಗೊತ್ತಾಗದಿದ್ದರೂ, ಒಂದೊಂದು ವಿವರದಲ್ಲಿಯೂ ಕುಸುಮನ ತುಸತುಸ ಒಲಿದಿದ್ದ ಹೃದಯಕ್ಕೆ ಅರಿವುಗೊಳ್ಳದೆ ಇರಲಿಲ್ಲ.

ತಿರುಗಾಡಲು ಹೊರಟರೆ ತನ್ನ ಪಕ್ಕಕ್ಕೇ ಸರಿದು ಬರುತ್ತಿದ್ದ ರಾಜು ಈಗ ಶ್ಯಾಮಲೆ ಇಲ್ಲ ರತ್ನ ಇವರ ಪಕ್ಕವನ್ನೇ ಹಿಡಿಯುತ್ತಿದ್ದ.

ಮೊದಲಿನಂತಲ್ಲದೆ, ಈಗ ಚಲನಚಿತ್ರಕ್ಕೆ ಅವನ ಆಹ್ವಾನಗಳು ಕಡಮೆಯಾಗಿದ್ದುವು. ರತ್ನ ಕರೆಯುವುದೇ ಹೆಚ್ಚು; ಜೊತೆಗೆ ಮಾತ್ರ ರಾಜು. ಚಲನಚಿತ್ರಮಂದಿರದೊಳಗೂ ಅವನ ಸಾಮೀಪ್ಯದ ಸವಿ ದುರ್ಲಭ ವಾಗುತ್ತಾ ಬಂದಿತು. ಬಳಿಯಲ್ಲಿ ಇದ್ದರೂ ಅದೇಕೋ ಮೊದಲಿನ ಸುಖೋ ಷ್ಣವಾದ ಸಂಸ್ಪರ್ಶದ ಸೌಭಾಗ್ಯವನ್ನು ತನಗೆ ನೀಡುವುದನ್ನು ನಿಲ್ಲಿಸಿ ಬಿಟ್ಟಿದ್ದ. ಮಂಜುಗಡ್ಡೆಯ ಬಂಡೆಯ ಪಕ್ಕದಲ್ಲಿ ಕುಳಿತಂತೆ ಅವಳಿಗನಿಸು ತಿತ್ತು. ಇದೇಕೆ ರಾಜು ಹೀಗೆ ತನ್ನಿಂದ ದೂರವಾಗುತ್ತಿದ್ದಾನೆ?

ಅವನು ಬಯಸುತ್ತಿರಬಹುದಾದ ಅತಿ ಸಲಿಗೆಗೇನೋ ತಾನು ಪ್ರೋತ್ಸಾಹ ಕೊಟ್ಟಿಲ್ಲ. ಅವನನ್ನು ತಾನು ಮದುವೆಯಾಗುವುದು ಬಹುಶಃ ಸಾಧ್ಯವಾಗದು. ರಾಜುವಿನ ಕಾಗದದ ನೆನಪಾಯಿತು ಕುಸುಮ ನಿಗೆ. ಅವನು ಕೋರುವ ಬಗೆಯ ಪ್ರೇಮವನ್ನು ಅವನಿಗೆ ತೋರಬೇಕಾ ದರೆ, ಅವನನ್ನು ಮದುವೆಯಾಗಲು ತಾನು ಸಿದ್ಧವಾಗಿರಬೇಕು ; ತನ್ನನ್ನು ಮದುವೆಯಾಗಲು ಅವನು ಸಿದ್ಧನಾಗಿರಬೇಕು.

ಇದು ಸಾಧ್ಯವಿಲ್ಲ. ತನ್ನ ತಾಯಿ ತನ್ನ ದೂರದ ಸಂಬಂಧಿಕರ ಮಗನನ್ನು ತನಗೆ ಸಂಕಲ್ಪಿಸಿದ್ದಾರೆ. ಅವರು ಬೊಂಬಾಯಿಯಲ್ಲಿದ್ದಾರೆ. ತಾಯಿಯ ಮಾತಿನಂತೆ ವರ ಸುಂದರ, ವಿದ್ಯಾವಂತ; ಅಲ್ಲದೆ, ಮದುವೆ

ಯಾದರೆ ತಾನು ಬೊಂಬಾಯಿಯಲ್ಲಿ ನೆಲಸಬಹುದು. ಅವನು ದೊಡ್ಡ ಉದ್ಯೋಗಕ್ಕೆ ಸೇರಬಹುದು; ಬಹುಶಃ ಕೇಂದ್ರ ಸರ್ಕಾರ; ಐ. ಎ. ಎಸ್. ಅಂಥ ಒಳ್ಳೆಯ ಕಡೆ ಬಿಟ್ಟು ತಮ್ಮ 'ಜನ'ವೇ ಅಲ್ಲದ ರಾಜುವಿಗಾಗಿ ತಾನೇಕೆ ಹಂಬಲಿಸಬೇಕು ?

ಆದರೆ, ಅವನ ಸಹವಾಸವೇನೋ ಸುಖಮಯವಾಗಿತ್ತು. ನಡೆದಷ್ಟು ದಿವಸ ನಡೆಯಿತು. ಈಗ ಅವನೇ ಹಿಂದಕ್ಕೆ ಸರಿಯುತ್ತಿದ್ದಾನೆ. ತಾನೂ ಹೆಚ್ಚಿನ ಒತ್ತಾಸೆಯನ್ನು ಅವನಿಗೆ ಕೊಡುತ್ತಿಲ್ಲ. ಇದು ಸರಿಯಾಗಿಯೇ ಇದೆ.

ರಾಜು ಬಹುಶಃ ರತ್ನನನ್ನು ಮದುವೆಯಾಗುತ್ತಾನೆ. ಅವರಿಗೆ ವರನಾಮ್ಯ ಚೆನ್ನಾಗಿದೆ. ತಾನು ಅವನನ್ನು ತನ್ನ ಕಡೆಗೆ ಸೆಳೆದು ರತ್ನನಿಗೆ ಅನ್ಯಾಯ ಮಾಡುವುದು ಸರಿಯಲ್ಲ. ಅವನ ಸಲಿಗೆಗೆ ಹೆಚ್ಚಿನ ಪ್ರೋತ್ಸಾಹ ಕೊಡದೆ ಇದ್ದರೆ ಆಯಿತು. ಇನ್ನು ಮುಂದೆ ಬಹುಶಃ ಅವನಿಂದ ಕಾಗದ ಬರಲಾರದು; ಈವರೆಗೆ ಬಂದಿಲ್ಲ. ಬಂದರೆ, ಉದಾಸೀನವೇ ಅದಕ್ಕೆ ಉತ್ತರ.

ರಾಜುವಿನ ತಾಯಿ ರತ್ನನನ್ನು ಮದುವೆಯಾಗುವಂತೆ ಎಲ್ಲೋ ಅವನನ್ನು ಬಲವಂತ ಮಾಡುತ್ತಿದ್ದಾರೆ. ಅವನಿಗೆ ನಾನು ಬೇಕು; ರತ್ನ ಬೇಡ. ಅದಕ್ಕೇ ನನ್ನ ವಿಚಾರದಲ್ಲಿ ಅವನೂ ಈಗ 'ಬಿಗಿ'ಯಿಂದ ನಡೆದುಕೊಳ್ಳುತ್ತಿದ್ದಾನೆ. ನಾನೂ ಬಿಗಿಯಾಗಿ, ರತ್ನನ ಕಡೆ ಅವನು ಒಲಿಯುವಂತೆ ಮಾಡಬೇಕು. ಆಗ ನಾನು ಒಂದು ಒಳ್ಳೆಯ ಕೆಲಸವನ್ನೇ ಮಾಡಿದ ಹಾಗಾಗುತ್ತದೆ.

ಕುಸುಮನ ಪರಿವರ್ತನೆಗೊಂಡ ಮನಸ್ಸಿನ ಸ್ವರೂಪಕ್ಕೆ ಅನುಗುಣವಾಗಿ ಅವಳ ನಡೆನುಡಿಯೂ ಕ್ರಮ ಕ್ರಮವಾಗಿ ಮಾರ್ಪಡುತ್ತ ಬಂದಿತು.

ಅವಳಲ್ಲಿ ಕಾಣಿಸಿಕೊಂಡ ಈ ಮಾರ್ಪಾಟು ರಾಜುವಿಗೆ ಅರ್ಥವಾಗದೆ ಹೋಗಲಿಲ್ಲ. ಒಂದು ದಿನ, ಕುಸುಮ ತನ್ನ ಮನಸ್ಸಿನ ಮಡಿಕೆಯನ್ನು ರಾಜುವಿನ ಮುಂದೆ ಬಿಚ್ಚಿಯೂ ಇಟ್ಟಳು.

ಅವಳ ಮದುವೆಯ ವಿಚಾರದಲ್ಲಿ ಕುಸುಮನ ನಿರೀಕ್ಷೆ ಸುಳ್ಳಾಗಲಿಲ್ಲ. ಬೊಂಬಾಯಿನ ಬಂಧುಗಳು ಬೆಂಗಳೂರಿಗೆ ಬಂದು ಕುಸುಮನ ಮದುವೆ

ಯನ್ನು ನಿಷ್ಕರ್ಷಿಸಿ ಹಿಂತಿರುಗಿದರು. ಅವರು ವರನನ್ನೂ ಜೊತೆಯಲ್ಲಿ ಕರೆದುಕೊಂಡು ಬಂದಿದ್ದರು. ಅವನ ಹೆಸರು ಪ್ರಕಾಶ್; ಬೊಂಬಾಯಿ ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪರೀಕ್ಷೆಗೆ ಕಟ್ಟುವವನಾಗಿದ್ದ. ಅವನ ತಂದೆ ಪ್ರಭಾವಶಾಲಿಗಳಾದ್ದರಿಂದ, ಅವನನ್ನು ಇಂಗ್ಲೆಂಡಿಗೆ ಉನ್ನತ ವ್ಯಾಸಂಗಕ್ಕೆ ಕಳಿಸಲು ಸರ್ಕಾರದ ವೇತನವನ್ನು ದೊರಕಿಸಿಕೊಳ್ಳುವ ಹವಣಿಕೆಯಲ್ಲಿದ್ದರು. ಇಬ್ಬರ ಪರೀಕ್ಷೆಗಳೂ ಮುಗಿದೊಡನೆಯೆ ವಿವಾಹ ವಾಗುವುದೆಂದು ನಿಶ್ಚಯವಾಯಿತು.

ರಾಜುವಿನೊಡನಾಟದ ಸೊಬಗಿನ ಗುಳ್ಳೆ ಒಡೆದು ಹೋದದ್ದಕ್ಕಾಗಿ ಕುಸುಮ ಪರಿತಪಿಸಲಿಲ್ಲ. ಮೇಲಾಗಿ ಒಳ್ಳೆಯದೇ ಆಯಿತೆಂದುಕೊಂಡಳು.

ಕುಸುಮ ಹುಸಿಲಜ್ಜೆಯನ್ನು ನಟಿಸಿ, ತನ್ನ ವಿವಾಹದ ಸುದ್ದಿಯನ್ನು ತನ್ನ ಗೆಳತಿಯರೊಂದಿಗೆ ಹಂಚಿಕೊಂಡಳು. ಆ ಸುದ್ದಿ ರಾಜುವಿಗೂ ಬೇಗನೆಯೇ ಮುಟ್ಟಿತು. ರತ್ನ ಅದನ್ನು ಬಹು ಉತ್ಸುಕತೆಯಿಂದ, ಉತ್ಸಾಹದಿಂದ, ರಾಜುವಿಗೆ ತಿಳಿಸಿದಳು.

ರಾಜು ಕುಸುಮನ ಆಸೆಯನ್ನು ಸಂಪೂರ್ಣವಾಗಿ ತ್ಯಜಿಸು ವಂತಾಯಿತು.

ಕೈಬಿಟ್ಟ ಕುಸುಮದೊಂದಿಗೆ ಅದರ ಸೌರಭವೂ ದೂರ ಸರಿಯಿತು.

'ಪ್ರಮೂಷನಲ್' (ವರ್ಷಾಂತ್ಯದ) ಪರೀಕ್ಷೆ ಸಮೀಪಿಸುತ್ತಿತ್ತು. ವ್ಯಾಸಂಗದಲ್ಲಿ ಯಾವಾಗಲೂ ನಿಜವಾದ ಆಸಕ್ತಿಯುಳ್ಳ ಶ್ಯಾಮಲೆ ಓದುವ ನಿಮಿತ್ತ ಈಚೀಚೆಗೆ ಕುಸುಮ ರತ್ನನೊಂದಿಗೆ ತಿರುಗಾಡುವುದನ್ನು, ನಿಲ್ಲಿಸಿಬಿಟ್ಟಳು. ಮದುವೆಯ ಮುನ್ಸವಿಯನ್ನು ನಿರೀಕ್ಷಿಸುತ್ತಿದ್ದ ಕುಸುಮನೂ ತಾನಾಗಿಯೇ ವಿರಳವಾಗುತ್ತಿದ್ದ ವಿಹಾರಸಂದರ್ಭಗಳನ್ನು ಬಿಡತೊಡಗಿದಳು.

ರಾಜು ರತ್ನ–ಇವರೂ ಅನಿವಾರ್ಯವಾಗಿ ಓದಿನ ಕಡೆಗೆ ಮನಸ್ಸು ಕೊಟ್ಟರು.

ಯಾರ ಪ್ರಯತ್ನವೂ ನಿಷ್ಫಲವಾಗಿರಲಿಲ್ಲ. ಎಲ್ಲರೂ ವರ್ಷಾಂತ್ಯದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದರು.

ಕುಸುಮನ ಮದುವೆ ಅದೇ ಮೇ ತಿಂಗಳಿನಲ್ಲಿ ಸಜ್ಜನರಾಯರ ಧರ್ಮಶಾಲೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಕುಸುಮ ಸುಂದರಮ್ಮನವರು, ರಾಜು, ರತ್ನ ಇವರಿಗೆಲ್ಲ ಬೇರೆ ಬೇರೆಯಾಗಿಯೇ ಆಹ್ವಾನ ಪತ್ರಿಕೆಗಳನ್ನು ಕಳಿಸಿಕೊಟ್ಟಿದ್ದಳು. ಶಾಮಣ್ಣನೂ ಊರಿನಲ್ಲಿ ಇದ್ದುದರಿಂದ, ಅವನಿಗೂ ಒಂದು ಆಹ್ವಾನ ಪತ್ರಿಕೆ ಬಂದಿದ್ದಿತು.

ಮದುವೆಯ 'ಆರತಕ್ಷತೆ'ಗೆ ರಾಜು ರತ್ನ ಇಬ್ಬರು ಮಾತ್ರ ಹೋಗಿದ್ದರು. ಸುಂದರಮ್ಮನವರು ಹೊರಕ್ಕೆ ಹೊರಡುವ ಸ್ಥಿತಿಯಲ್ಲಿರಲಿಲ್ಲ. ಕುಸುಮನಾಗಲಿ ಅವಳ ಮನೆಯವರಾಗಲಿ ತನಗೆ ಪರಿಚಯವಿಲ್ಲವೆಂದು ಶಾಮಣ್ಣ ಆ ಸಮಾರಂಭಕ್ಕೆ ಹೋಗಲೇ ಇಲ್ಲ.

ರಾಜು ರತ್ನ ಇಬ್ಬರೂ ಕೆಳೆಯ ಸವಿನೆನಪಿಗಾಗಿ ತಮ್ಮ ಗೆಳತಿಗೆ ಕೆಲವು ಉತ್ತಮ ಇಂಗ್ಲಿಷ್ ಮತ್ತು ಕನ್ನಡ ಪುಸ್ತಕಗಳನ್ನು ಉಡುಗೊರೆಯಾಗಿ ಓದಿಸಿದರು.

ಸೋಫಾದಮೇಲೆ ಕುಳಿತಿದ್ದ ವಧೂ–ವರರನ್ನು ಅಭಿನಂದಿಸಲು ರಾಜು ರತ್ನ ಇಬ್ಬರೂ ಒಂದಿಗೆಯೇ ಹೋದರು. ರಾಜು ಪ್ರಕಾಶನ ಕೈಕುಲುಕಲು ಕೈನೀಡಿದಾಗ, 'ನನ್ನ ಸ್ನೇಹಿತರು, ಮಿಸ್ಟರ್ ರಾಜಗೋಪಾಲ್' ಎಂದು ಕುಸುಮ ಅವನನ್ನು ತನ್ನ ಪತಿಗೆ ಪರಿಚಯಮಾಡಿಕೊಟ್ಟಳು.

ರಾಜು ಕುಸುಮನ ಮುಂದೆ ನಿಂತಾಗ ಹಳೆಯ ನೆನಪು ಮರುಕೊಳಿಸಿ ಅವನ ಎದೆಯ ಬಡಿತದ ವೇಗ ಇಮ್ಮಡಿ ಮುಮ್ಮಡಿಯಾಗಿತ್ತು. ಕುಸುಮನ ಕೈಯನ್ನೊ ಮೃದುವಾಗಿ ಹಿಡಿದು, ಕುಲುಕಿ, ಕಡೆಯ ಬಾರಿ ಅವಳನ್ನು ಬೀಳ್ಕೊಳ್ಳುವ ನೆನಪಾಗಿ ಅವಳ ಹಸ್ತಸ್ಪರ್ಶದ ಸುಖವನ್ನು ಸವಿಯಬೇಕೆಂದು ಅವನ ಮನಸ್ಸು. ಅವನೇನೋ ಹಿಂದೆಗೆದು ಹಿಂದೆಗೆದು, 'Congratulations (ಅಭಿನಂದನೆಗಳು), ಕುಸುಮಾ' ಎಂದು ಹೇಳಿ ಬಲಗೈಯನ್ನು ಮುಂದಕ್ಕೆ ನೀಡುವುದರಲ್ಲಿದ್ದ ; ಅಷ್ಟರಲ್ಲಿಯೇ ಕುಸುಮ ಎಲ್ಲರಿಗೂ ಮಾಡುತ್ತಿದ್ದಂತೆ ಕೈಜೋಡಿಸಿ, "ನೀನು ಬಂದದ್ದು ತುಂಬ ಸಂತೋಷ, ರಾಜಗೋಪಾಲ್, ನಮಸ್ಕಾರ" ಎಂದುಬಿಟ್ಟಳು. ಕುಸುಮನ ಮನಸ್ಸಿನಲ್ಲಿ ಯಾವ ಕ್ರೂರವಾದ ಉದ್ದೇಶವೂ ಇಲ್ಲದೆ ಹೋದರೂ, ನಮಿಸಿದ ಕೈಯಿಂದಲೇ ತನ್ನ ಕೆನ್ನೆಗೆ ಹೊಡೆದಂತೆ ರಾಜು ಭಾವಿಸಿದ, ತುಂಬ ಖಿನ್ನನಾದ.

ರತ್ನ ನಗುನಗುತ್ತಲೇ ತನ್ನ ಅಭಿನಂದನೆಗಳನ್ನು ಕುಸುಮನಿಗೆ ಅರ್ಪಿಸಿದಳು. ಇಬ್ಬರ ಪರವಾಗಿಯೂ ಬಣ್ಣದ ಗಾಜುಕಾಗದದಲ್ಲಿ ಕಟ್ಟಿದ್ದ ಪುಸ್ತಕಗಳ ಕಟ್ಟನ್ನು ಅವಳ ಕೈಗಿತ್ತಳು. ಉಡುಗೊರೆಗಾಗಿ ವಂದನೆ ಸಲ್ಲಿಸಿ, "ನಿಮ್ಮ ಮದುವೆ ಯಾವಾಗ?" ಎಂದು ಮಂದಹಾಸವನ್ನು ಬೀರುತ್ತ ಇಬ್ಬರ ಮುಖಗಳನ್ನೂ ನೋಡಿದಳು.

ಆಗ ರತ್ನನೂ ತಿರುಗಿ ರಾಜುವಿನ ಮುಖವನ್ನು ಕ್ಷಣಮಾತ್ರ ದಿಟ್ಟಿಸಿ ನೋಡಿ, ಲಜ್ಜೆಯಿಂದೆಂಬಂತೆ ಫಕ್ಕನೆ ಮುಖ ತಿರುಗಿಸಿಕೊಂಡಳು. ಎಂದೂ ಇಲ್ಲದಿದ್ದ ಹೊಸ ಭಾವವೊಂದು ಅವಳ ಮುಖವನ್ನು ಬೆಳಗಿದ್ದುದನ್ನು ರಾಜು ಗಮನಿಸದಿರಲಿಲ್ಲ.

ಕುಸುಮನ ಪ್ರಶ್ನೆಗೆ ಅಷ್ಟೇ ರತ್ನನ ಉತ್ತರವಾಗಿತ್ತು.

## ೨೧

ಕುಸುಮನ ಮದುವೆ ಸುಂದರಮ್ಮನವರ ಮನಸ್ಸಿನಲ್ಲಿ ಮಗನ ಮದುವೆಯ ಆಸೆಯನ್ನು ಮರುಕೊಳಿಸಿತು. ಡಾಕ್ಟರ್ ರಘುರಾಂ ಅವರ ಮುಖಾಂತರ ಶಾಮಣ್ಣನಿಗೆ ಮತ್ತೆ ಒತ್ತಾಯ ಹಾಕಿಸಿ, ಅವನಿಗೆ ಎಂ. ಎ. ಆಗುವ ಮೊದಲೇ ಏಕೆ ಮದುವೆ ಮಾಡಿಸಿಬಿಡಬಾರದು ಎಂದು ಆಲೋಚಿಸಿದರು. ಎಂ. ಎ. ಪರೀಕ್ಷೆ ಆಗುವವರೆಗೂ ಶಾಮಣ್ಣನನ್ನು ಮದುವೆಯಾಗೆಂದು ಬಲವಂತ ಪಡಿಸುವುದಿಲ್ಲವೆಂದು ತಾವು ಕೊಟ್ಟಿದ್ದ ಮಾತೂ ನೆನಪಾಗದೆ ಇರಲಿಲ್ಲ. ಆದರೆ, ಈಚೆಗೆ ಅವರ ಹೃದಯವೇದನೆ ತುಸಕಾಣಿಸಿಕೊಂಡಿದ್ದು, ತಾವು ಕಣ್ಣುಮುಚ್ಚುವ ಮೊದಲೆ ಹಿರಿಯಮಗನ ಮದುವೆಯನ್ನಾದರೂ ಕಾಣಬೇಕೆಂಬ ಅವರ ಬಯಕೆ ಉತ್ಕಟವಾಯಿತು. ಆದರೆ, ಅನಿರೀಕ್ಷಿತವಾಗಿ ರತ್ನನ ತಾಯಿ ವೆಂಕಟಲಕ್ಷ್ಮಿಯ ಸಾವಿನ ಸುದ್ದಿ ಬಂದು ಅವರ ಬಯಕೆಯ ಚಿಲುಮೆಯನ್ನು ಒಳಕ್ಕೆ ಅದುಮಿತು.

"ಪಾಪ, ತಾಯಿ ಹೋದ ದುಃಖ. ರತ್ನನ್ನ ಈಗ ಆ ವಿಚಾರ ಕೇಳುವುದು ಸರಿಯಲ್ಲ. ಮುತ್ತೈದೆ ಸಾವೂ ಅಲ್ಲ, ಈ ವರ್ಷ ಮದುವೆ

ಪ್ರಸ್ತಾಪ ಒಳ್ಳೆಯದೂ ಅಲ್ಲ" ಎಂದು ತಮಗೆ ತಾವು ಸಮಾಧಾನ ಹೇಳಿಕೊಂಡರು.

ತಾಯಿಬೇರು ಎಷ್ಟೇ ಆಳದಲ್ಲಿದ್ದರೂ ಅದು ಒಣಗಿದ ಬಳಿಕ ಕಾಯಿ ಘಾಸಿಪಡುವಂತೆ, ತಾಯಿ ಯಾವುದೋ ದೂರದ ಹಳ್ಳಿಯಲ್ಲಿದ್ದು ಬಹು ವರ್ಷದಿಂದ ಮಗಳ ಮುಖವನ್ನು ನೋಡಲು ಬರದೆ ಇದ್ದರೂ, ರತ್ನ ಹೆತ್ತ ತಾಯ ಮರಣದಿಂದ ತುಂಬ ದುಃಖಗೊಂಡಳು.

ಸುಂದರಮ್ಮನವರು ಬಹು ವಿಧಗಳಲ್ಲಿ ರತ್ನನ ದುಃಖ ಶಮನವಾಡಲು ಯತ್ನಿಸಿದರು. ತಾವಾಗಿ ಮುಂದೆ ಬಂದು, 'ಸಿನಿಮಾಕ್ಕೆ ಹೋಗಿ, ಸಂಗೀತಕ್ಕೆ ಹೋಗಿ, ವಾಕಿಂಗ್ ಹೋಗಿ ಬನ್ನಿ' ಎಂದು ರತ್ನನಿಗೂ ಮಕ್ಕಳಿಗೂ ಸಲಹೆ ಕೊಟ್ಟರು. ಶಾಮಣ್ಣನಿಗೆ ಒಂದೂ ಬೇಕಿಲ್ಲ. ರತ್ನನ ವಿಚಾರದಲ್ಲಿ ತಿರಸ್ಕಾರ ಬುದ್ಧಿಯಿಲ್ಲದಿದ್ದರೂ, ಅವಳನ್ನು ನಲಿಸಿ ರಮಿಸಲು ಅವನು ಮುಂದಾಗಲಿಲ್ಲ.

ಎಂದಿನಂತೆ, ರಾಜುವೇ ರತ್ನನ ಜೊತೆಗಾರ. ಅವಳ ದುಃಖವನ್ನು ಮರಸಲು, ರಾಜು ಅವಳೊಂದಿಗೆ ತನ್ನ ಸರಸದ ಮಾತುಕತೆಯನ್ನು ಬೇಕೆಂದೇ ತುಸು ಹೆಚ್ಚಿಸಿದ. ಆದರೆ, ದುಃಖದಲ್ಲಿ ಮುಳುಗಿದ್ದ ರತ್ನನಿಗೆ ಕೆಲಕಾಲವಂತೂ ಅವನ ಸಹವಾಸದಲ್ಲಿ ಯಾವ ರುಚಿಯೂ ಕಾಣಲಿಲ್ಲ. ಯಾಂತ್ರಿಕವಾಗಿ ಅವನೊಂದಿಗೆ ವಿನೋದ ವಿಹಾರಗಳಲ್ಲಿ ಪಾಲುಗೊಳ್ಳುತ್ತಿದ್ದಳು.

## ೨೨

ಎಲ್ಲರಿಗೂ ಇದು ಪರೀಕ್ಷೆಯ ವರ್ಷ. ಶಾಮಣ್ಣ ಮೈಸೂರಿನಲ್ಲಿ ಕೃಶವಾಗುವುದನ್ನೂ ಲಕ್ಷಿಸದೆ ವ್ಯಾಸಂಗದಲ್ಲಿ ತಲ್ಲೀನನಾಗಿದ್ದ. ಅವನು ಕಳೆದ ಬೇಸಗೆಯಲ್ಲಿ ಊರಿಗೆ ಮರಳಿದ್ದಾಗ ರತ್ನನ ವೇಷ ಭೂಷಗಳಲ್ಲಿ ಆಗಿದ್ದ ಅಚ್ಚರಿಯ ಮಾರ್ಪಾಡನ್ನು ಕಂಡು ವಿಸ್ಮಯಗೊಂಡಿದ್ದ: ತಾಯಿಯೊಂದಿಗೆ ಆ ಬಗ್ಗೆ ತನ್ನ ವಿಷಾದವನ್ನೂ ವ್ಯಕ್ತಪಡಿಸಿದ್ದ. ತಾನು ಮದುವೆಯಾಗಲಿರುವ ಹೆಣ್ಣು 'ಸೂಳೆ'ಯ ಹಾಗೆ ಅಲಂಕಾರ ಮಾಡಿಕೊಳ್ಳ

ಬೇಕಾಗಿಲ್ಲವೆಂದು ಕಟುವಾಗಿಯೇ ನುಡಿದಿದ್ದ. ತಾಯಿ—ಮಕ್ಕಳ ಮಾತುಕತೆ ಎಂದಿನಂತೆ ಮರೆಯಲ್ಲೇ ನಡೆದಿತ್ತು. "ಕಾಲೇಜಿಗೆ ಹೋಗು ತ್ತಾಳಪ್ಪ. ಎಲ್ಲರ ಹಾಗೆ ಇರಬೇಕೋ ಬೇಡವೋ" ಎಂದು ಅವರು ಮಗನನ್ನು ಸಮಾಧಾನಪಡಿಸಿದರು. ಅವನಿಗೇನೋ ಸಮಾಧಾನವಾಗಿ ರಲಿಲ್ಲ. ಮೈಸೂರಿಗೆ ಹೋದೊಡನೆ ತನ್ನ ಅಸಮಾಧಾನವನ್ನು ಓದಿನಲ್ಲಿ ಮರೆಯತೊಡಗಿದ.

ಓದಿನಬಗ್ಗೆ ತಾಯ ಎಚ್ಚರಿಕೆಯ ಮಾತುಗಳು ರಾಜುವನ್ನು ಚುಚ್ಚು ತ್ತಲೇ ಇದ್ದುವು. "ರತ್ನ ಪ್ಯಾಸಾಗಿ ನೀನು ಫೇಲಾದರೆ ನಾಚಿಕೆಗೇಡು" ಎಂದು ಸುಂದರಮ್ಮನವರು ಪದೇ ಪದೇ ಹೇಳುತ್ತಲೇ ಇದ್ದರು. ಅವನೂ ತುಸ ಓದಿನ ಕಡೆಗೆ ಮನಸ್ಸು ಕೊಟ್ಟ; ಪ್ಯಾಸು ಮಾಡಲೇಬೇಕೆಂಬ ಹಟ ವನ್ನೂ ತೊಟ್ಟ. ಕುಸುಮನಂತೂ ಈಗ ಮದುವೆಯಾದವಳು. ಅವಳ ಅಲಂಕಾರದ ರಾಜಠೀವಿಗೆ ಈಗ ಹೊಸದೊಂದು ಗಾಂಭೀರ್ಯವೂ ಬಂದಿತ್ತು. ಕಾಲೇಜಿಗೆ ಹೋಗಿ ಬರುವಾಗ ಮಾತ್ರ ರತ್ನ ಶ್ಯಾಮಲೆ ಇವರ ಜೊತೆ ಕಲೆಯುತ್ತಿದ್ದಳು. ನಾಲ್ವರೂ ಒಟ್ಟಿಗೆ ಬೆರೆಯುವುದಂತೂ ಸಂಪೂರ್ಣ ವಾಗಿ ನಿಂತೇ ಹೋಗಿದ್ದಿತು. ಎಂದಾದರೊಮ್ಮೆ ಮಾತ್ರ ಶ್ಯಾಮಲೆ ರತ್ನನ ಮನೆಗೆ ಬರುತ್ತಿದ್ದಳು.

ನೀರಿನಿಂದ ತೆಗೆದ ಮೀನಿನಂತೆ ರಾಜುವಿನ ಮುಖದ ಕಳೆ ಮಾಸು ತ್ತಿತ್ತು. "ಮಗ ಕಷ್ಟಪಟ್ಟು ಓದುತ್ತಾನೆ" ಎಂದು ಸುಂದರಮ್ಮನವರು ಭಾವಿಸಿದರು.

* * * *

ಪರೀಕ್ಷೆಯ ಫಲಿತಾಂಶಗಳು ಬಂದಾಗ ಸುಂದರಮ್ಮನವರ ಹಿಗ್ಗು ಅಷ್ಟಿಷ್ಟಲ್ಲ. ರತ್ನನಿಗೆ ಎರಡನೆಯ ತರಗತಿಯಲ್ಲಿ ತೇರ್ಗಡೆಯಾಗಿತ್ತು; ರಾಜುವಿಗೆ ಸಾಮಾನ್ಯ ದರ್ಜೆಯಲ್ಲಿ ತೇರ್ಗಡೆಯಾಗಿದ್ದುದು ಮೊದಲನೆಯ ದರ್ಜೆಯಲ್ಲಿ ಆಗಿದ್ದಂತೆ ಅವರ ಭಾವನೆ. ಕುಸುಮ ಶ್ಯಾಮಲೆಯರಿಗೂ ಎರಡನೆಯ ದರ್ಜೆಯಲ್ಲಿ ತೇರ್ಗಡೆಯಾಗಿತ್ತು.

ಆಗ ಇನ್ನೂ ಶಾಮಣ್ಣನ ಫಲಿತಾಂಶ ಬಂದಿರಲಿಲ್ಲ. ಅವನಿಗೇನೋ ಮೊದಲ ದರ್ಜೆಯಲ್ಲಿ ತೇರ್ಗಡೆಯಾಗುವ ಭರವಸೆ ಇದ್ದಿತು. ಫಲಿತಾಂಶದ

ನಿರೀಕ್ಷಣೆಯ ಮೇಲೆ ಅವನಾಗಲೇ ಇಂಗ್ಲೆಂಡಿನ ವಿಶ್ವವಿದ್ಯಾನಿಲಯದ ಅಧಿಕಾರಿಗಳೊಂದಿಗೂ ಅಮೆರಿಕದ ಎರಡು ಮೂರು ವಿಶ್ವವಿದ್ಯಾನಿಲಯಗಳ ಅಧಿಕಾರಿಗಳೊಂದಿಗೂ ಬಲ್ಲವರ ಮೂಲಕ ಸಂಪರ್ಕ ಬೆಳಸಿಕೊಳ್ಳಲು ತೊಡಗಿದ್ದ. ವಿದೇಶ ಪ್ರಯಾಣ ಪ್ರತಿನಿಧಿಗಳೊಂದಿಗೂ 'ಪ್ಯಾಸ್‌ಪೋರ್ಟ್' (Passport) ಮೊದಲಾದ ಸೌಕರ್ಯಗಳಿಗಾಗಿ ವ್ಯವಹರಿಸತೊಡಗಿದ್ದ. ಇದನ್ನೆಲ್ಲಾ ತನ್ನ ತಾಯಿಗೆ ಹೆಜ್ಜೆಹೆಜ್ಜೆಗೂ ತಿಳಿಸಿಯೇ ಮಾಡುತ್ತಿದ್ದ. ಡಾ|| ರಘುರಾಂ ಅನೇಕ ವಿಧಗಳಲ್ಲಿ ಅವನಿಗೆ ನೆರವಾಗುತ್ತಿದ್ದರು.

ಶಾಮಣ್ಣನಿಗೆ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗೇ ಆಗುತ್ತದೆ; ಅವನು ವಿದೇಶ ವ್ಯಾಸಂಗಕ್ಕೆ ತೆರಳುವುದೂ ಖಂಡಿತ—ಎಂದು ಸುಂದರಮ್ಮನವರು ತಮ್ಮ ಮನಸ್ಸಿನಲ್ಲಿ ನಿರ್ಧರಿಸಿಕೊಂಡರು.

ನಿರ್ಧಾರದ ನಾಂದಿಯಾಗಿ ತಮ್ಮ ಬಹು ದಿನದ ಬಯಕೆಯನ್ನು ಒಂದು ದಿನ ಸಂಜೆ, ರಾಜು ರತ್ನ ಇಬ್ಬರೂ ತಮ್ಮ ಬಳಿಯೇ ಇದ್ದಾಗ, ಬಹಿರಂಗಪಡಿಸಿದರು.

"ರತ್ನ, ನಿನಗೆ ಪ್ಯಾಸಾದ್ದು ನನಗೆ ತುಂಬ ಸಂತೋಷವಾಯಿತಮ್ಮ. ಮುಂದೇನು ಮಾಡುತ್ತೀ? ನಿನ್ನ ಇಷ್ಟ ಏನು?" ಎಂದು ಸುಂದರಮ್ಮನವರು ಆದರಪೂರ್ವಕವಾಗಿ ಮಾತಿತ್ತಿದರು.

ಅತ್ತೆ ತನ್ನ ಇಷ್ಟವನ್ನು ಕೇಳುತ್ತಿದ್ದಾರೆ. ಎಷ್ಟು ಒಳ್ಳೆಯವರು!—ಎನಿಸಿತು ರತ್ನನಿಗೆ.

"ನೀವು ಹೇಗೆ ಹೇಳಿದರೆ ಹಾಗೆ" ಎಂದಳು ರತ್ನ, ವಿನಯದಿಂದ.

"ನನ್ನದೇನಮ್ಮ? ನಿಮ್ಮ ಇಷ್ಟ ಹೇಗೋ ಹಾಗೆ. ಶಾಮಣ್ಣನೇನೋ ನಿನಗೆ ಇನ್ನು ಓದು ಸಾಕು. ವೀಣೆಯನ್ನು ಕಲಿಯಲಿ ಮನೆಯಲ್ಲೇ ಅಂತ ಆಸೆಪಡುತ್ತಾನೆ...."

'ಅಲ್ಲ, ಶಾಮಣ್ಣನಿಗೂ ಇದಕ್ಕೂ ಏನು ಸಂಬಂಧ' ಎಂದು ಆಶ್ಚರ್ಯವಾಯಿತು ರತ್ನನಿಗೆ. ಅವನೇನಾದರೂ ಮನೆಯ ಯಜಮಾನಿಕೆಯನ್ನು ವಹಿಸಿಕೊಂಡಿರುವನೋ? ಇದ್ದೀತು. ಹಾಗಿದ್ದಮೇಲೆ, ಅವನ ಇಷ್ಟಕ್ಕೂ ಬೆಲೆ ಕೊಡಬೇಕಾದೀತು. ಕುಸುಮ ಶ್ಯಾಮಲೆ ಓದನ್ನು ಮುಂದುವರಿಸಿದರೆ, ತಾನೂ ಓದಿದರೆ ಆದೀತು. ಇನ್ನೆರಡು ವರ್ಷಕಾಲ ಕಾಲೇಜಿನ ವಿದ್ಯಾರ್ಥಿ

ಜೀವನವನ್ನು ಸುಖವಾಗಿ ಕಳೆಯಬಹುದು. ವೀಣೆಯನ್ನು ಕಲಿಯಲು ತನಗೂ ಆಸೆಯೆ; ಕಲಿತರಾಯಿತು.

"ಯಾಕೆ, ಸುಮ್ಮನಿದ್ದೀಯೆ ರತ್ನ? ನಿನ್ನ ಇಷ್ಟ ಏನೂ ಅಂತ?"

"ನನಗೇನೋ ಮುಂದಕ್ಕೆ ಓದಬೇಕು ಅಂತ ಇಷ್ಟ....ನೀವು ಒಪ್ಪಿದರೆ...."

"ನನ್ನದೇನಮ್ಮ ಇದೆ ಇದರಲ್ಲಿ. ಇನ್ನುಮುಂದೆ ಎಲ್ಲ ಶಾಮಣ್ಣ ಹೇಳಿದ ಹಾಗೆ....ನೀನು ಮುಂದಕ್ಕೆ ಓದುವುದು ಈಗ ಅವನಿಗೆ ಸುತರಾಂ ಇಷ್ಟ ಇಲ್ಲ...."

ರತ್ನ ಬಾಯಿಬಿಡಲಿಲ್ಲ. ಶಾಮಣ್ಣನ 'ಇಷ್ಟ'ದ ಒಳ ಅರ್ಥವನ್ನು ಅವಳು ಗ್ರಹಿಸತೊಡಗಿದ್ದಳು.

ಆದರೆ, ರಾಜು ಸುಮ್ಮನಿರಲಿಲ್ಲ:

"ಇದೇನಮ್ಮ, ಮಾತು ಮಾತಿಗೂ ಎಂದೂ ಇಲ್ಲದ್ದು ಇಂದು ಇದ್ದಕ್ಕಿದ್ದ ಹಾಗೆ ಶಾಮಣ್ಣನ ಇಷ್ಟ ಶಾಮಣ್ಣನ ಇಷ್ಟ ಅಂತ ಹೇಳುತ್ತಾ ಇದ್ದೀ. 'ನನ್ನ ಇಷ್ಟ' ಅನ್ನು. ನೀನು ಹೇಳಿದಹಾಗೆ ಕೇಳುತ್ತೇವೆ. ನಮ್ಮ ವಿಚಾರದಲ್ಲಿ ತಲೆ ಹಾಕುವುದಕ್ಕೆ ಅವನಿಗೆ ಏನು ಅಧಿಕಾರ ?"

ರಾಜು ಎಂದೂ ಹೀಗೆ ರೇಗಿ ಕೂಗಿದವನಲ್ಲ. ಅವನ ಕೋಪಕ್ಕೆ ಕಾರಣ ಏನು ಎನ್ನುವುದು ಸುಂದರಮ್ಮನವರಿಗೆ ಅರ್ಥವಾಗಲಿಲ್ಲ. ಆದರೂ ಸಮಾಧಾನವಾಗಿಯೇ ನುಡಿದರು:

"ನನ್ನ ಇಷ್ಟವನ್ನ ನೀವೆಲ್ಲ ನಡಸುತ್ತೀರಿ ಅಂತಲೇ ನನಗೆ ಎಷ್ಟೋ ಸಂತೋಷ. ರತ್ನನ್ನ ಶಾಮುನಿಗೆ ಕೊಟ್ಟು ಮದುವೆಮಾಡಬೇಕು ಅಂತ ನನ್ನ ಇಷ್ಟಕಣಪ್ಪ. ನನ್ನ ಒಬ್ಬಳ ಇಷ್ಟವೇನು, ರತ್ನನ ಅಪ್ಪನ ಇಷ್ಟವೂ ಅದೇಯೆ. ಎಲ್ಲರ ಬಯಕೆಯನ್ನು ನಾನು ನುಡಿಯುತ್ತಿದ್ದೇನೆ, ಅಷ್ಟೆ. ಅಲ್ಲದೆ, ಅವಳ ಅಪ್ಪನಿಗೆ ನಾನು ಮಾತುಕೊಟ್ಟಿದ್ದೇನೆ. ಶಾಮಣ್ಣನಿಗೆ ಅವಳನ್ನು ತಂದುಕೊಳ್ಳುತ್ತೇನೆ ಅಂತ. ಶಾಮಣ್ಣನೂ ದೊಡ್ಡ ಮನಸ್ಸುಮಾಡಿ ನಮ್ಮ ಇಷ್ಟ ನಡಸಲು ಒಪ್ಪಿಕೊಂಡಿದ್ದಾನೆ; ರತ್ನನ್ನ ಮದುವೆಯಾಗಲು ಒಪ್ಪಿಕೊಂಡಿದ್ದಾನೆ. ಅವನಿಗೆ ರತ್ನನ ಮೇಲೂ ಅಧಿಕಾರ ಇಲ್ಲವೇ ಅಪ್ಪ?"

"ಅವನನ್ನ ಮದುವೆಯಾಗಲು ರತ್ನ ಇಷ್ಟಪಡದೆ ಹೋದರೋ?"

"ಇಷ್ಟವಿಲ್ಲ ಅನ್ನುವುದಕ್ಕೆ ಅವನೇನಾಗಿದ್ದಾನೆ? ಎಂ. ಎ. ಪ್ಯಾಸು ಮಾಡುತ್ತಾನೆ; ಸೀಮೆಗೆ ಹೋಗಿ ಬರುತ್ತಾನೆ; ದೊಡ್ಡ ಉದ್ಯೋಗ ಸಂಪಾದಿಸುತ್ತಾನೆ. ರತ್ನನಿಗೆ ಬೇರೆ ವರ ಅಂತ ಹುಡುಕಿಕೊಂಡು ಹೋದರೂ ಅಂಥವನು ಸಿಕ್ಕುತ್ತಾನೆಯೆ? ಶಾಮಣ್ಣ ದೊಡ್ಡ ಮನಸ್ಸು ಮಾಡಿ ತಬ್ಬಲಿ ಹೆಣ್ಣನ್ನ ಮದುವೆಯಾಗಲು ಒಪ್ಪಿಕೊಂಡದ್ದೇ ಹೆಚ್ಚು. ರತ್ನ ಪುಣ್ಯಮಾಡಿದ್ದಳು. ಈಗ ಏನಮ್ಮ ರತ್ನ, ಬಾಯಿಬಿಟ್ಟು ಹೇಳಿಬಿಡು. ಶಾಮಣ್ಣನನ್ನ ಮದುವೆಮಾಡಿಕೊಳ್ಳಲು ನಿನಗೆ ಇಷ್ಟ ಇದೆಯೋ ಇಲ್ಲವೋ ?"

ರತ್ನನಿಗೆ ಈ ಸ್ವಾತಂತ್ರ್ಯ ಕೊಡಬಾರದಾಗಿತ್ತು ಎನ್ನಿಸಿತು ಸುಂದರಮ್ಮನವರಿಗೆ. ಆದರೆ, ಆಡಿದ ಮಾತನ್ನು ಹಿಂದೆಗೆದುಕೊಳ್ಳಲು ಇಷ್ಟಪಡಲಿಲ್ಲ. ರತ್ನ ತಮ್ಮ ಇಷ್ಟಕ್ಕೆ ವಿರುದ್ಧವಾಗಿ ನಡೆಯುವುದಿಲ್ಲವೆಂದು ಅವರ ನಂಬಿಕೆ.

ರತ್ನ ತುಸ ಹೊತ್ತು ಮೌನವಾಗಿದ್ದಳು. ಅನಂತರ ಉತ್ತರ ಕೊಟ್ಟಳು:

"ನನ್ನ ಇಷ್ಟ ಕಟ್ಟಿಕೊಂಡು ಏನು ಅತ್ತೆ. ನೀವು ನನ್ನನ್ನ ಸಾಕಿ ಸಲಹಿದ್ದೀರಿ. ನಿಮ್ಮ ಇಷ್ಟ ಹೇಗೋ ಹಾಗೆ ನಡಸಿ" ಎಂದು ನಯವಾಗಿ ಹಲ್ಲುಕಚ್ಚಿ ನುಡಿದು, ಒಳಕ್ಕೆ ಹೊರಟುಹೊದಳು.

ರಾಜು ಎದ್ದು ಹೊರಕ್ಕೆ ಹೊರಟುಹೋದ.

* * * *

ಸುಂದರಮ್ಮನವರು ಸದಾ ತಮ್ಮ ಹಾಸಿಗೆಯಮೇಲೆ ಮಲಗಿರುವರು, ಇಲ್ಲವೆ ಸೋಫದ ಮೇಲೆ ಶಾಲನ್ನು ಹೊದೆದು ಕುಳಿತಿರುವರು. ಶಾಮಣ್ಣ ನಂತೂ ಯಾವಾಗಲೂ ವ್ಯಾಸಂಗನಿರತ; ಎಷ್ಟೋ ವೇಳೆ ಕೋಣೆಯ ಅಗುಳಿಯನ್ನೂ ಹಾಕಿಕೊಂಡಿರುತ್ತಿದ್ದನು.

ಶಾಮಣ್ಣ ರಾಜು ಇವರಿಗಿದ್ದಂತೆ ರತ್ನನಿಗೆ ಬೇರೆಯ ಕೋಣೆ ಇರಲಿಲ್ಲ. ಸುಂದರಮ್ಮನವರು ತಮ್ಮ ಹಣಕಾಸು, ಒಡವೆ ವಸ್ತ್ರ ಮುಂತಾದುವುಗಳನ್ನುಳ್ಳ ಪೆಟ್ಟಿಗೆ ಟ್ರಂಕುಗಳನ್ನು ಇರಿಸಿದ್ದ ಕೋಣೆಯನ್ನೇ ರತ್ನ ತನ್ನ ಕೋಣೆಯಾಗಿ ಉಪಯೋಗಿಸುತ್ತಿದ್ದಳು. ಆ ಕೋಣೆ ಇತರ ಕೋಣೆಗಳಷ್ಟು ವಿಶಾಲವಾಗಿರಲಿಲ್ಲ. ಹೆಚ್ಚಿನ ಗಾಳಿಬೆಳಕಿಗೂ ಅಲ್ಲಿ ಅವಕಾಶ

ವಿರಲಿಲ್ಲ. ರತ್ನ ತನ್ನ ಹೆಚ್ಚಿನ ವ್ಯಾಸಂಗವನ್ನು ಹಜಾರದಲ್ಲಿಯೇ ಮಾಡು ತ್ತಿದ್ದರೂ, ಕುರ್ಚಿ ಮೇಜು ಇಷ್ಟಿದ್ದರಿಂದ 'ತನ್ನ' ಕೋಣೆಯಲ್ಲಿ ಬರವಣಿ ಗೆಯ ಕೆಲಸ ಮುಂತಾದುವನ್ನು ಮಾಡಿಕೊಳ್ಳುತ್ತಿದ್ದಳು. ಅವಳ ವಸ್ತ್ರ ಧಾರಣೆ, ಅಲಂಕರಣ ಮುಂತಾದುವೂ ಅಲ್ಲಿಯೇ ನಡೆಯುತ್ತಿದ್ದುವು.

ಹಣವಾಗಲಿ ಬಟ್ಟೆಬರೆಯಾಗಲಿ, ಸುಂದರಮ್ಮನವರಿಗೆ ಬೇಕಾದ್ದನ್ನೆಲ್ಲ ರತ್ನನೇ ತಂದುಕೊಡುತ್ತಿದ್ದಳು. ಆ ಕೋಣೆಗೆ ಶಾಮಣ್ಣನಾಗಲಿ, ರಾಜು ವಾಗಲಿ ಹೋಗಬೇಕಾದ ಪ್ರಮೇಯ ಅಷ್ಟಾಗಿ ಬೀಳುತ್ತಲೇ ಇರಲಿಲ್ಲ. ಬಳಕೆಯಿಂದ ಅದು ರತ್ನನ ಕೋಣೆ.

ಸ್ವಲ್ಪ ಹೊತ್ತಾದ ಮೇಲೆ ರಾಜು ಮನೆಯೊಳಕ್ಕೆ ಹಿಂದಿರುಗಿದ. ಅವನು ಹೊರಕ್ಕೆ ಹೋದದ್ದು, ಮನಸ್ಸಿನ ಉದ್ವೇಗವನ್ನು ಶಮನಮಾಡಿ ಕೊಳ್ಳಲು ಒಂದೆರಡು ಸಿಗರೇಟು ಸೇದುವುದಕ್ಕಾಗಿ. ಹೊಗೆ ಸೇವನೆಯಿಂದ ಮನಸ್ಸಮಾಧಾನವನ್ನು ಹೊಂದುವುದು ಸಾಧ್ಯವಿದ್ದರೆ, ಹೊಗೆಸೊಪ್ಪಿಗೆ ಚಿನ್ನದ ಬೆಲೆ ಇರುತ್ತಿತ್ತು! ಆದರೆ, ಆ ಬಗೆಯ ಕ್ಷಣಿಕ ಭ್ರಾಂತಿಗೆ ಎಲ್ಲ ರಂತೆ ರಾಜುವೂ ಒಳಗಾಗಿದ್ದ.

ರಾಜು ಒಳಕ್ಕೆ ಬಂದಾಗ, ಸುಂದರಮ್ಮನವರು ಹಜಾರದ ತಣ್ಣನೆಯ ಗಾಳಿ ಕೆಡುಕೆಂದು ತಮ್ಮ ಕೋಣೆಯಲ್ಲಿ ಹೋಗಿ ಮಲಗಿದ್ದರು. ರತ್ನ ಅವ ರನ್ನು ಅವರ ಕೋಣೆಯಲ್ಲಿ ಬಿಟ್ಟು ತನ್ನ ಕೋಣೆಯಲ್ಲಿ ಹೋಗಿ ಕುಳಿತಳು. ರಾಜುವಿನಂತೆ ಅವಳು ಉದ್ವೇಗಪೂರ್ಣಳಾಗಿಲ್ಲದಿದ್ದರೂ, ತನ್ನ ಭವಿಷ್ಯವನ್ನು ಎದುರಿಸಲು ನಿರಾಶೆಯ ನಿಚ್ಚಣಿಗೆಯ ಮೊದಲ ಮೆಟ್ಟಲನ್ನು ಮೆಟ್ಟಿ, ಮುಂದಿನ ಮೆಟ್ಟಲುಗಳನ್ನು ಶೂನ್ಯದೃಷ್ಟಿಯಿಂದ ನಿರೀಕ್ಷಿಸುತ್ತಿದ್ದಳು.

ಶಾಮಣ್ಣನನ್ನು ಮದುವೆಯಾದರೆ ತನಗಾಗುವ ಕೊರತೆಯೇನು? ಬಹುಶಃ ಏನೂ ಇರಲಾರದು.

ಅವನು ಸುಂದರಮ್ಮನವರ ಹಿರಿಯ ಮಗ. ತಾಯಿ ಮಕ್ಕಳಲ್ಲಿ ಭೇದವೆಣಿಸದಿದ್ದರೂ, ಶಾಮಣ್ಣ ತನ್ನ ವಿದ್ಯೆ ವಿನಯ ಮೊದಲಾದ ಹಲವು ಸದ್ಗುಣಗಳಿಂದ ತಾಯಿಯ ಮನಸ್ಸನ್ನು ಒಲಿಸಿಕೊಂಡಿದ್ದಾನೆ. ಅವನನ್ನು ಮದುವೆಯಾಗಬೇಕೆಂದು ತನ್ನ ಅತ್ತೆ ಬಯಸಿದ್ದಾರೆ. ಅವನನ್ನು 'ಒಲ್ಲೆ'

ಎಂದು ಬಾಯಿಬಿಟ್ಟು ಹೇಳಿಬಿಟ್ಟರೆ, ಬಹುಶಃ ಅವರು ತನ್ನನ್ನು ಈ ವಿಚಾರ ದಲ್ಲಿ ಬಲವಂತಮಾಡಲಾರರು.

ಶಾಮಣ್ಣ ತಪ್ಪಿದರೆ, ರಾಜುವನ್ನು ಮದುವೆಯಾಗುವ ಸಂಭವ ಇದೆಯೇ? ರಾಜುವಿನ ಇಂದಿನ ಒಂದೆರಡು ಮಾತಿನಿಂದಲೆ, ಅವನು ತನ್ನ ಪಕ್ಷ ವಹಿಸಿ ಮಾತನಾಡಿದ್ದರಿಂದಲೇ, ಅವನ ಒಲವು ಎತ್ತಕಡೆ ಇದೆ ಎನ್ನುವುದು ಗೊತ್ತಾಗುತ್ತದೆ. ಕುಸುಮ ಈಗ ಅವನ ಕೈಗೆ ಎಟುಕದ 'ಕುಸುಮ'. ತಾನು ಮಾಡಿದ 'ಉಪಾಯ'ವೂ ತಕ್ಕಮಟ್ಟಿಗೆ ಫಲಕಾರಿಯೇ ಆಯಿತು. ಶಾಮಣ್ಣನನ್ನು ಮದುವೆಯಾಗಬೇಕೆಂಬ ಸಂಗತಿ ಆಗಲೇ ನಿರ್ಧರ ವಾಗಿ ಗೊತ್ತಿದ್ದಿದ್ದರೆ ತಾನು ಹಾಗೆ ಕುಸುಮನ ಹೆಸರಿನಲ್ಲಿ ರಾಜುವಿಗೆ ಪತ್ರ ಬರೆಯುವ ಗೋಜಿಗೆ ಹೋಗುತ್ತಿರಲಿಲ್ಲ. ಆದರೆ ಈಗ ಮಾಡಿಯಾಗಿದೆ; ತನ್ನ ಮನಸ್ಸನ್ನು ರಾಜುವಿಗೆ ತಿಳಿಸಿಯಾಗಿದೆ. ಅದಕ್ಕೆ ಪ್ರತಿಯಾಗಿ ತನ್ನ ಮನಸ್ಸು ಹೀಗಿದೆ ಎನ್ನುವುದರ ಸೂಚನೆಯನ್ನು ಅವನು ಇಂದು ತೋರಿ ಸಿದ್ದಾನೆ. ಈಗ ಅವನಿಗೆ ಕುಸುಮನ ಭ್ರಮೆ ಇಲ್ಲ; ಅದು ಖಂಡಿತ. ಅವನ ಒಲವಿನ ಹರಿವು ಬೇರೆಯ ಕಡೆಗೆ ತಿರುಗಲೇಬೇಕು; ಬಹುಶಃ ಅದು ಈಗ ತನ್ನ ಕಡೆಗೇ ತಿರುಗಿದೆ. ಅದರಲ್ಲಿಯೂ ಸಂದೇಹವಿಲ್ಲ.

ಶಾಮಣ್ಣ ತುಂಬ ಒಳ್ಳೆಯವನು. ಆದರೆ ಎಂದೂ ಅವನೊಂದಿಗೆ ತನಗೆ ಸಲಿಗೆಯಿಲ್ಲ. ಅವನನ್ನು ಮದುವೆಯಾಗಬೇಕೆಂಬ ಭಾವನೆ ಹಿಂದೆ ಎಂದೂ ಇರಲಿಲ್ಲ; ಇಂದೂ ಇಲ್ಲ.

ಆ ಭಾವನೆ ಯಾಕೆ ಬರಲಿಲ್ಲ?

ಅದಕ್ಕೆ ಶಾಮಣ್ಣನ ನಡತೆಯೇ ಕಾರಣ; ಅವನ ರೂಪವೂ ಕಾರಣ. ಒಲವಿನ ಅಂಕುರಕ್ಕೆ ಅವನು ಎಂದೂ ಒತ್ತಾಸೆ ಕೊಟ್ಟವನಲ್ಲ. ಅವನನ್ನು ಮದುವೆಯಾದರೂ ತನಗೆ ಸುಖ ದೊರಕದು. ಅವನು ಒಳ್ಳೆಯವನು. ಆದರೆ, ಪುಸ್ತಕ ಕೀಟ. ತನ್ನನ್ನು ಅವನು ರಾಜುವಿನಂತೆ ರಮಿಸಲಾರ, ನಲಿಸಲಾರ.

ರಾಜುವಿನ ವಿಷಯ ಹಾಗಲ್ಲ. ಎಂದಿನಿಂದಲೂ ತಮ್ಮಿಬ್ಬರಿಗೂ ಸಲಿಗೆ. ಈ ಸಲಿಗೆಯ ನೆಲದಲ್ಲಿ ಒಲವಿನ ಅಂಕುರ ಮೊಳೆತರೆ ಅದು ಎಂತಹ ಚೆಲುವಿನ ಹೂ ಹಣ್ಣುಗಳನ್ನು ಬಿಡಬೇಡ?

ಸುಂದರಮ್ಮನವರ ವಶದಲ್ಲಿರುವ ಆಸ್ತಿಯಲ್ಲಿ ಅರ್ಧ ಶಾಮಣ್ಣನಿಗೆ; ಅರ್ಧ ರಾಜುವಿಗೆ. ಯಾರನ್ನು ಮದುವೆಯಾದರೂ ತನಗೆ ಯಾವ ಭೋಗಭಾಗ್ಯಕ್ಕೂ ಕೊರತೆಯಾಗದು.

ಆದರೆ, ಒಲವಿಲ್ಲದ ಭೋಗ ಏಕೆ? ಕಂಪಿಲ್ಲದ ಹೂವಿನಂತೆ ವ್ಯರ್ಥ.

ಶಾಮಣ್ಣನೊಂದಿಗೆ ಬರಿಯ ಹಣಕಾಸು ತರುವ ಸುಖಭೋಗ; ರಾಜುವಿನೊಂದಿಗಾದರೆ, ಅದರ ಜೊತೆಗೆ ಒಲವಿನ ಐಸಿರಿಯ ಭೋಗ. ಯಾವುದು ಮೇಲು?

ಆದರೆ, 'ಮಾವ' ಆಸ್ತಿಯೆಲ್ಲವನ್ನೂ 'ಅತ್ತೆ'ಯ ಹೆಸರಿಗೆ ಬರೆದಿದ್ದಾರೆ. ರಾಜು ತನ್ನನ್ನು ಮದುವೆಯಾದರೆ, ಅವರು ಆಸ್ತಿಯೆಲ್ಲವನ್ನೂ ಶಾಮಣ್ಣನಿಗೇ ಕೊಟ್ಟುಬಿಟ್ಟರೋ? ಛೆ, ಹೆತ್ತ ತಾಯಿ ಮಕ್ಕಳಲ್ಲಿ ಭೇದವೆಣಿಸಳು. ಆದರೆ, ಮುಂದಾಗುವುದನ್ನು ಈಗ ಹೇಗೆ ಹೇಳಲಾದೀತು?

ಹಾಗೆ ಆದರೂ ಚಿಂತೆಯಿಲ್ಲ. ಬಲವಂತದಿಂದ ಆದ ದಾಂಪತ್ಯದ ಚಿನ್ನದ ತೊಟ್ಟಿಲು ತೂಗುವುದಕ್ಕಿಂತಲೂ, ಒಲವಿನಿಂದ ಆದ ದಾಂಪತ್ಯದ ಬಿದಿರು ತೊಟ್ಟಿಲು ತೂಗುವುದು ಮೇಲಲ್ಲವೆ?

ಅದು ಸರಿಯೆ. ಆದರೆ, ರಾಜುವನ್ನು ಮದುವೆಯಾಗಲು ಸುಂದರಮ್ಮನವರು ಒಪ್ಪಿಗೆಯನ್ನೇ ಕೊಡದೆ ಹೋದರೋ? ಶಾಮಣ್ಣನನ್ನು ಮದುವೆಯಾಗುವುದು ತನಗೆ ಬೇಡ; ರಾಜುವನ್ನು ಮದುವೆಯಾಗುವುದು ಅವರಿಗೆ ಬೇಡ.

ತಾವಿಬ್ಬರೂ ಮನೆ ಬಿಟ್ಟು ಓಡಿಹೋಗಬೇಕು, ಅಷ್ಟೆ. ಆ ಸಾಹಸ ಸಾಧ್ಯವೆ? ತನಗಾಗಿ ರಾಜು ಆ ಹುಚ್ಚುಕೆಲಸ ಮಾಡಿಯಾನೆ? ಒಲವಿನ ಹಾದಿಯಲ್ಲಿ ಎಷ್ಟು ಕಲ್ಲು ಮುಳ್ಳು ಇದೆಯೋ ಯಾರು ಬಲ್ಲರು? ಇದ್ದರೂ ಚಿಂತೆಯಿಲ್ಲ: ರಾಜು ಒಪ್ಪುತ್ತಾನೆಯೋ?

ಒಪ್ಪಬಹುದು. ಒಲವಿಗೆ ಗೆಲವಾಗಬಹುದು. ಆದರೆ ಸುಂದರಮ್ಮನವರು ತನ್ನನ್ನು ಇದುವರೆಗೆ ಮಗಳಂತೆ ಸಾಕಿ ಸಲಹಿದ್ದಕ್ಕೆ ರಾಜುವನ್ನು ಅವರಿಂದ ಅಗಲಿಸಿ, ತಾನೂ ಅವರ ಶಾಪಕ್ಕೆ ಗುರಿಯಾಗಲೆ? ಅವರು ಪ್ರೀತಿಯಿಂದ ಇಟ್ಟ ಅನ್ನಕ್ಕೆ ತಾನು ಅವರಿಗೆ ಕೃತಘ್ನಳಾಗಲೆ? ಅವರು ತನ್ನ ತಂದೆಗೆ ಇತ್ತ ವಾಗ್ದಾನ ವ್ಯರ್ಥವಾಗಲು ತಾನು ಕಾರಣವಾಗಬೇಕೆ? ಅದು ಸರಿಯೆ?

ಒಲವು ಸೋಲಬೇಕು; ಕರ್ತವ್ಯ ಗೆಲ್ಲಬೇಕು. ಸುಂದರಮ್ಮನವರು ಕೇವಲ ತನ್ನ ಅತ್ತೆಯಲ್ಲ: ತನ್ನ ತಂದೆ ತಾಯಿ ಎಲ್ಲ. ಅಲ್ಲದೆ, 'ನಿಮ್ಮ ಇಷ್ಟ ಬಂದಹಾಗೆ ಮಾಡಿ' ಎಂದು ಹೇಳಿಯಾಯಿತು. ಆಗ ತಾನು ಕೊಟ್ಟ ಉತ್ತರವೂ ಸ್ವಲ್ಪ ಒರಟೆ. ಹಾಗೆ ಹೇಳಬಾರದಾಗಿತ್ತು. 'ಆಗಲಿ ಅತ್ತೆ' ಎಂದು ಇಷ್ಟೇ ಹೇಳಬೇಕಾಗಿತ್ತು.

ಒಲವಿನ ಬುಗ್ಗೆಯನ್ನು ಒತ್ತಿ ಮುಚ್ಚಬೇಕು.

ಎಲ್ಲ ಕಟ್ಟುಗಳನ್ನೂ ಮೀರಿ ಅದು ತಾನೇ ತಾನಾಗಿ ಚಿಮ್ಮಿದರೋ? ಅದು ತನ್ನ ವಶವಲ್ಲ; ಆಗ ತಾನು ಅದರ ವಶ.

ರತ್ನ ತನ್ನ ನಿರಾಶೆಯ ನಿಚ್ಚಣಿಗೆಯ ಕಡೆಯ ಹಂತವನ್ನು ಮುಟ್ಟಿ ದ್ದಳು. ಶಾಮಣ್ಣನೊಂದಿಗೆ ಪ್ರೇಮರಹಿತ ವಿವಾಹಜೀವನ ನಡಸಲು ನಿಶ್ಚಯಿಸಿದಳು. ಒಲವಿನ ಹಕ್ಕಿಯನ್ನು ಕರ್ತವ್ಯದ ಪಂಜರದಲ್ಲಿ ಬಂಧಿ ಸಿದಳು.

ಒಂದು ವಿಧದಲ್ಲಿ ಅವಳ ಮನಸ್ಸು ಸಮಾಧಾನ ಸ್ಥಿತಿಯನ್ನು ಮುಟ್ಟಿ ದ್ದಿತು. ವಿಧಿಯ ಕುಹಕದ ದೃಷ್ಟಿಯ ಕಡೆಗೆ ಅವಳು ಬೆನ್ನು ತಿರುಗಿಸಿದ್ದಳು.

## ೨೩

ಆದರೆ, ರಾಜುವಿನ ಮನಸ್ಸು ಸಮಾಧಾನಸ್ಥಿತಿಯಲ್ಲಿರಲಿಲ್ಲವಷ್ಟೆ. ರತ್ನ ತನ್ನ ಕೋಣೆಯಲ್ಲಿರಬಹುದೆಂದು ಊಹಿಸಿ, ಅವನು ಅವಳ ಹಿಂದೆ ಬಂದು ನಿಂತ; ಅವಳ ಹೆಗಲ ಮೇಲೆ ಕೈ ಇರಿಸಿದ.

'ಒಲವಿನ ಪಕ್ಕಿಯನ್ನು ತಾನು ಪಂಜರದಲ್ಲಿಡಬಹುದು. ಇತರರು ಅದನ್ನು ಹೊರಕ್ಕೆ ಬಿಡಬಹುದಲ್ಲ' ಎಂದು ರತ್ನನಿಗೆ ಎನ್ನಿಸಿತು, ರಾಜುವಿನ ಕೈ ತನ್ನ ಹೆಗಲನ್ನು ಸೋಕಿದಾಗ.

"ರತ್ನಾ?"

"ಏನು, ರಾಜು?"

"ಅದು ಯಾಕೆ ಒಂದೇ ಏಟಿಗೆ ಶಾಮಣ್ಣ ನನ್ನ ಮದುವೆಯಾಗುತ್ತೀನಿ ಅಂತ ಅಮ್ಮನಿಗೆ ಮಾತು ಕೊಟ್ಟುಬಿಟ್ಟೆ?"

"ಇನ್ನೇನು ಮಾಡಬೇಕಾಗಿತ್ತು ?"

"ನಿನ್ನ ಇಷ್ಟ ನಿಜವಾಗಿ ಏನು ಅನ್ನುವುದನ್ನ ತಿಳಿಸಬೇಕಾಗಿತ್ತು."

"ಇಲ್ಲಿ ಅವರ ಇಷ್ಟ ಬಿಟ್ಟು ಇನ್ನು ಯಾರ ಇಷ್ಟವೂ ಇಲ್ಲ; ಇದ್ದರೂ ನಡೆಯುವ ಹಾಗೂ ಇಲ್ಲ. ನನ್ನನ್ನು ಮದುವೆಯಾಗಬೇಕು ಅನ್ನುವ ಇಷ್ಟ ತಾನೆ ಯಾರಿಗೆ ಇದೆ?"

"ಅದು ಯಾಕೆ ರತ್ನ, ಹಾಗೆ ಹೇಳುತ್ತಿ? ನಿನ್ನನ್ನು ಮದುವೆ ಯಾಗಲು ನನಗೆ ಇಷ್ಟ ಇಲ್ಲವೆ?"

ರತ್ನನಿಗೆ ಗೊಳ್ಳನೆ ನಗು ಬರುವ ಹಾಗಾಯಿತು. ತನ್ನ ಅತ್ತೆಗೆ ಕೇಳಿಸೀತೆಂದು ಬಲವಂತದಿಂದ ತಡೆದುಕೊಂಡಳು. ಆ ನಗುವಿನ ಗರ್ಭದಲ್ಲಿ ನಲಿವಿಗಿಂತ ಹೆಚ್ಚಾಗಿ ನೋವೇ ಅಡಗಿದ್ದಿತು.

ಕೆಲವು ವೇಳೆ, ನಗು ನಲಿವಿಗೆಂತೋ ಅಂತೆ ನೋವಿಗೂ ವೊಗವಾಡ ವಾಗಬಲ್ಲುದು; ದುಃಖಕ್ಕೆ ಎಂತೋ ಅಂತೆ ಹರ್ಷಕ್ಕೂ ಕಂಬನಿ ಉಕ್ಕುವ ಹಾಗೆ.

ಒಳಗಿನ ಭಾವ ನಗುವಿನ ರೂಪದಲ್ಲಿ ಹೊರಬರಲಾರದೆ ಕಂಬನಿ ಯಾಗಿ ಸುರಿಯಿತು; ರತ್ನನ ಕೆನ್ನೆಯನ್ನು ತೋಯಿಸಿತು.

"ಅದು ಯಾಕೆ ರತ್ನ, ಅಳುತ್ತೀಯೆ?"

ರತ್ನ ಒಂದೆರಡು ಕ್ಷಣ ಸುಮ್ಮನಿದ್ದಳು. ಕಂಬನಿಯ ಕೋಡಿಯನ್ನು ಸೆರಗಿನ ಕೊನೆಯಿಂದ ಒರಸಿಕೊಂಡು, ಹೇಳಿದಳು:

"ನಿನ್ನ ಮಾತಿಗೆ ನಗಬೇಕೋ ಅಳಬೇಕೋ ತಿಳಿಯಲಿಲ್ಲ. ನಗುವನ್ನು ತಡೆದುಕೊಂಡೆ; ಅಳು ಬಂದಿತು" ಎಂದು ತನ್ನ ಮಾತಿನ ಸತ್ಯತೆಯನ್ನು ತೋರಿಸಲೆಂಬಂತೆ, ನಗುವಿಗೂ ಅಳುವಿಗೂ ಅಷ್ಟೇನೂ ಭೇದವಿಲ್ಲವೆಂಬುದನ್ನು ನಿದರ್ಶನಪಡಿಸಲೆಂಬಂತೆ, ಮೆಲ್ಲನೆ, ದನಿ ಕೋಣೆಯನ್ನು ಬಿಟ್ಟು ಹೊರಕ್ಕೆ ಕೇಳಿಸದಷ್ಟು ಮೆಲ್ಲನೆ, ನಕ್ಕಳು.

"ನಿನ್ನ ಮಾತು ನನಗೆ ಅರ್ಥವಾಗಲಿಲ್ಲ, ರತ್ನ...."

"ಅದು ಹೇಗೆ ಅರ್ಥವಾದೀತು? ನಮ್ಮ ನಡವಳಿಕೆ ನಮಗೆ ಅರ್ಥ

ವಾದರಲ್ಲವೆ ಇನ್ನೊಬ್ಬರ ಮಾತು ನಮಗೆ ಅರ್ಥವಾಗುವುದು ?"

"ಅಂದರೆ....ನನ್ನ ನಡವಳಿಕೆ...."

"ಹೌದು, ರಾಜು. ನಿನ್ನ ನಡವಳಿಕೆ ನಿನಗೆ ಅರ್ಥವಾಗಿಲ್ಲ. ಅರ್ಥ ವಾಗಿದ್ದಿದ್ದರೆ, ನನ್ನನ್ನು ಮದುವೆ ಮಾಡಿಕ್ಕೊಳ್ಳಲು ಇಷ್ಟ ಇದೆ ಅಂತ ಹೇಳು ತ್ತಿರಲಿಲ್ಲ. ನಿನ್ನ ಇಷ್ಟ ಇಷ್ಟು ಬೇಗ ಬದಲಾಯಿಸಿಬಿಟ್ಟಿತೆ ಅಂತ ನನಗೆ ಆಶ್ಚರ್ಯವಾಯಿತು. ಅದಕ್ಕೇ ನಗು ಬಂತು. ನಾನು ಯಾರಿಗೂ ಬೇಡ ದವಳು, ಎಲ್ಲರೂ ಹೇಳಿದ ಹಾಗೆ ಕೇಳಬೇಕು, ಎಂಥ ಹೀನ ಅದೃಷ್ಟ ಅಂತ ದುಃಖವಾಯಿತು. ಅದಕ್ಕೇ ಅಳು ಬಂತು........"

"ಹಾಗೆ ಹೇಳಬೇಡ, ರತ್ನ. ನೀನು ಯಾರಿಗೂ ಬೇಡದವಳು ಅಂತ ತಿಳಿಯಬೇಡ. ನೀನು ನನಗೆ ಬೇಕಾದವಳು."

"ನಾನೊಬ್ಬಳೇಯೋ ? ಅಥವಾ...."

"ಇದೇನು ರತ್ನ, ಹೀಗೆ ಹೇಳುತ್ತಿ ?"

"ನನ್ನ ಹತ್ತಿರ ಮುಚ್ಚಿಕೊಂಡು ಪ್ರಯೋಜನವಿಲ್ಲ. ನಿನಗೆ ಕುಸುಮ ಬೇಕಾದವಳಾಗಿರಲಿಲ್ಲವೋ ? ಅವಳ ಮೇಲೆ ನಿನಗೆ ಇಷ್ಟ ಇರ ಲಿಲ್ಲವೋ....?"

"ನಾನು ನಿನ್ನ ಕೈಲಿ ಕುಸುಮನಿಗೆ ಅಂತ ಕೊಟ್ಟ ಕಾಗದ, ಅವಳು ನನಗೆ ಬರೆದ ಉತ್ತರ—ಇದನ್ನೆಲ್ಲಾ ಇಟ್ಟುಕೊಂಡು ನೀನು ಏನೇನೋ ಊಹಿಸಿಕೊಳ್ಳುತ್ತ ಇದ್ದೀ, ರತ್ನ....ಅದರಲ್ಲಿ ಏನೋ ಕೆಲಸಕ್ಕೆ ಬಾರದ ವಿಷಯ ಕುರಿತು ಬರೆದಿದ್ದೆ. ಯಾವುದೋ ಪುಸ್ತಕದ ವಿಚಾರ, ಸಿನಿಮಾದ ವಿಚಾರ, ಅದು ಇದು ಕೆಲಸಕ್ಕೆ ಬಾರದ್ದು...."

ರತ್ನನಿಗೆ ಮತ್ತೆ ನಗು ಬಂದಿತು ; ತಡೆಯಲಾಗಲಿಲ್ಲ ; ಗೊಳ್ಳೆಂದು ನಕ್ಕುಬಿಟ್ಟಳು. ಈ ಸಲ ಮಾತ್ರ ನಕ್ಕ ರಭಸಕ್ಕೇ ಕಣ್ಣು ನೀರುತುಂಬಿತು; ದುಃಖದಿಂದಲ್ಲ, ನೋವಿನಿಂದಲ್ಲ.

ನಗುವಿನ ಉರುಬು ನಿಂತ ಮೇಲೆ ರತ್ನ ಸಮಾಧಾನದಿಂದ ಮೆಲ್ಲನೆ ನುಡಿದಳು :

"ಗಂಡಸರಿಗೆ ಸುಳ್ಳು ಹೇಳುವುದು ಎಷ್ಟು ಸುಲಭವಾಗಿ ಬಂದು ಬಿಡುತ್ತೆ ! ಅಬ್ಬಾ ! ಏನೋ ಅಂತಿದ್ದೆ ! (ಧ್ವನಿಯನ್ನು ಮಾರ್ಪಡಿಸಿ)

ನಿಜವಾಗಿ ಹೇಳು, ರಾಜು. ನೀನು ನನ್ನನ್ನು ನಿಜವಾಗಿ ಪ್ರೀತಿಸುತ್ತೀಯಾ? ಸುಮ್ಮನೆ 'ಇಷ್ಟ' ಅನ್ನುವ ಮಾತಿಗೆ ಅರ್ಥವಿಲ್ಲ. ಇವತ್ತು ಇಷ್ಟವಾದ್ದು ನಾಳೆ ಇಷ್ಟವಾಗದೆ ಹೋಗಬಹುದು."

"ಪ್ರೀತಿ ಅನ್ನುವ ಅರ್ಥದಲ್ಲಿ ಇಷ್ಟ ಅಂತ ಹೇಳಿದೆ, ರತ್ನ. ನಿನ್ನನ್ನ ನಿಜವಾಗಿಯೂ ಪ್ರೀತಿಸುತ್ತೇನೆ."

"ನನ್ನಮೇಲೆ ನಿನಗೆ ನಿಜವಾಗಿ ಪ್ರೀತಿ ಇರುವುದಾದರೆ, ನಿಜವಾಗಿ ಹೇಳು: ನೀನು ಕುಸುಮನಿಗೆ ಬರೆದದ್ದು ಪ್ರೇಮದ ಪತ್ರ ಅಲ್ಲವೋ?"

"ಅಲ್ಲ" ಎಂದು ಮತ್ತೆ ಹೇಳಬೇಕೆನ್ನಿಸಿತು. ಕುಸುಮ ಎಲ್ಲೋ ಆ ಕಾಗದವನ್ನು ತನ್ನ ಗೆಳತಿಗೆ ತೋರಿಸಿದ್ದಾಳೆ ಎನ್ನಿಸಿತು ರಾಜುವಿಗೆ. ಆದ್ದರಿಂದ, "ನಿನಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದ.

"ಕಾಗದವನ್ನ ನಾನು ಓದಿಕೊಂಡೆ."

"ಅವಳು ಅದನ್ನು ನಿನಗೆ ತೋರಿಸಿದಳೆ?"

"ಇಲ್ಲ. ನಾನೇ ಅದನ್ನು ಒಡೆದು ಓದಿಕೊಂಡೆ."

"ಹಾಗಾದರೆ, ಅದನ್ನ ಮತ್ತೆ ಬೇರೆಯ ಕವರಿಗೆ ಹಾಕಿ ಅಂಟಿಸಿ...."

"ಅಷ್ಟೆಲ್ಲಾ ತೊಂದರೆ ತೆಗೆದುಕೊಳ್ಳಲೇ ಇಲ್ಲ."

"ಅಂದರೆ....?"

"ಕಾಗದವನ್ನ ಅವಳಿಗೆ ಕೊಡಲೇ ಇಲ್ಲ."

"ಅವಳ ಉತ್ತರ....?"

"ನಾನೆ ಬರೆದದ್ದು."

"ಆ್ಞ! ನೀನೇ ಬರೆದದ್ದೆ!"

ರಾಜು ಕ್ಷಣಮಾತ್ರ ನಿಬ್ಬೆರಗಾದ. ತನ್ನ ಮೇಲೆ ರತ್ನನಿಗೆ ಇದ್ದ ನಿಚ್ಚಳವಾದ ಅನುರಾಗ ಬೆಳ್ಳಂಬೆಳಕಾಗಿ ಅವನಿಗೆ ಹೊಳೆಯಿತು. ತಾನು ಮೊದಲು ಕುಸುಮನಲ್ಲಿ ಮೋಹವಿಟ್ಟು, ಈಗ ರತ್ನನನ್ನು ಪ್ರೀತಿಸುತ್ತೇನೆ ಎಂದರೆ ಅದು ನಿಜವಾಗಿ ಎಂತಹ ಕುಚೋದ್ಯದ ಮಾತು ಎಂದು ಅವನಿಗೇ ಅರಿವಾಯಿತು. ರತ್ನನ ಕಾರ್ಯವೂ ಕುಚೋದ್ಯವೇ ಆದರೂ ಅದರ ಹಿಂದೆ ಪ್ರೇರಕಶಕ್ತಿಯಾಗಿ ಪ್ರೇಮವೇ ಇದ್ದದ್ದು ಅವನಿಗೆ ವ್ಯಕ್ತಪಟ್ಟಿತು. ಆ ಪ್ರೇಮಕ್ಕೆ ತಾನು ಅರ್ಹನೇ ಎಂದೂ ಪ್ರಶ್ನಿಸಿಕೊಂಡನು.

"ನನ್ನನ್ನ ಕ್ಷಮಿಸು, ರತ್ನ. ನೀನು ಹೇಳುವುದೆಲ್ಲ ನಿಜ. ನನ್ನ ನಡವಳಿಕೆ ನನಗೇ ಅರ್ಥವಾಗಿರಲಿಲ್ಲ. ಕುಸುಮನಲ್ಲಿ ನಾನು ಮೋಹ ಗೊಂಡದ್ದು ದಿಟ. ಅದನ್ನು ನಾನು ಪ್ರೀತಿ ಎಂದು ತಪ್ಪು ತಿಳಿದಿದ್ದೆ. ಅದು ಹೇಗಾದರೂ ಇರಲಿ. ನನ್ನ ಮೇಲಂತೂ ಅವಳಿಗೆ ಪ್ರೀತಿ ಇರಲಿಲ್ಲ. ಇದ್ದಿದ್ದರೆ, ಅವಳು ನನ್ನ ಮೊದಲಿನ ಕಾಗದಕ್ಕೆ ಉತ್ತರ ಕೊಡದೆ ಇರುತ್ತಿರಲಿಲ್ಲ...."

"ಮೊದಲಿನ ಕಾಗದ?" ಎಂದು ರತ್ನ ಸಂದೇಹದ ಪ್ರಶ್ನೆಯೊಂದನ್ನು ಹಾಕಿದಳು.

"ಹೌದು. ಮೊದಲೊಂದು ಪುಟ್ಟ ಕಾಗದ ಬರೆದು ನಾನೇ ಅವಳ ಕೈಗಿಟ್ಟಿದ್ದೆ....ಹೋಗಲಿ, ಇನ್ನು ಅದೆಲ್ಲಾ ಕಟ್ಟಿಕೊಂಡೇನು. ಈಗ ಹೇಗೂ ಅವಳ ಮದುವೆಯಾಗಿಹೋಯಿತು. ಒಂದು ವೇಳೆ ಅವಳ ಮೇಲೆ ಪ್ರೀತಿ ಇದ್ದಿದ್ದರೂ ಅದು ಅಳಿಸಿಹೋಯಿತು ಅಂತ ತಿಳಿದುಕೋ, ರತ್ನ. ಈಗ ನಿಜವಾಗಿ ನಿನ್ನನ್ನ ಬಿಟ್ಟು ನಾನು ಯಾರನ್ನೂ ಪ್ರೀತಿಸುವುದಿಲ್ಲ, ರತ್ನ...."

"ನಿಜವಾಗಿ? ನನ್ನಾಣೆಗೂ?...."

"ನಿನ್ನಾಣೆಗೂ, ನನ್ನಾಣೆಗೂ...."ಎಂದು ರಾಜು ಕೆಳಕ್ಕೆ ಬಾಗಿ ರತ್ನನ ಚೆಂದುಟಿಗಳನ್ನು ಚುಂಬಿಸಿದನು.

ರತ್ನನಿಗೆ ಈ ಹೊಸ ಸವಿಯು ಅನುಭವ ಬೇಡದ್ದೇನಾಗಿರಲಿಲ್ಲ. ಆದರೂ, ತನ್ನ ಮುಖದ ಮೇಲಿದ್ದ ಅವನ ಮುಖವನ್ನು ಕೈಯಿಂದ ಮೆಲ್ಲನೆ ದೂಡಿದಳು; "ಬೇಡ ರಾಜೂ, ಬೇಡ. ನಾನೂ ನೀನೂ ಮದುವೆ ಆಗುವ ಹಾಗಿದ್ದರೆ...."

ರಾಜು ಅವಳ ಮಾತನ್ನು ಮುಂದುವರಿಯಗೊಡಲಿಲ್ಲ; ಕೆಲವು ಕ್ಷಣ ಅವಳ ಮುಖದ ತುಂಬ ಚುಂಬನವೃಷ್ಟಿಯನ್ನು ಕರೆದನು.

"ಅದೇನು ನೀನು ಹೇಳಬೇಕು ಅಂತಿದ್ದುದನ್ನ ಈಗ ಹೇಳು...." ಎಂದು ರಾಜು ರತ್ನನ ಮನಸ್ಸನ್ನು ತಿಳಿಯಬಯಸಿದ.

"ನಾನು ನಿನ್ನನ್ನ ಮದುವೆ ಆಗುವ ಹಾಗಿಲ್ಲ. ಆದ್ದರಿಂದ...."—ರತ್ನ ಅನುಮಾನಿಸುತ್ತ ನುಡಿದಳು.

"ಅದು ಯಾಕೆ ಆಗುವ ಹಾಗಿಲ್ಲ? ನಾನು ನೀನು ಇಬ್ಬರೂ ಒಟ್ಟಿಗೆ

ಅಮ್ಮನ ಮುಂದೆ ನಮ್ಮ ನಿಜವಾದ ಇಷ್ಟವನ್ನ ತಿಳಿಸಿದರೆ, ಅವರು ಒಪ್ಪಿದರೂ ಒಪ್ಪಬಹುದು."

"ಇಲ್ಲ, ರಾಜು. ಅದು ಸಾಧ್ಯವಿಲ್ಲ. ಅವರು ನನ್ನ ತಂದೆಗೆ ಮಾತು ಕೊಟ್ಟಿದ್ದಾರೆ ಅಂತ ಹೇಳಿದ್ದನ್ನ ಕೇಳಿದೆಯೋ ಇಲ್ಲವೋ? ಶಾಮಣ್ಣನಿಗೆ ನನ್ನ ಮೇಲೆ ಇಷ್ಟ ಇಲ್ಲದಿದ್ದರೂ ಒಪ್ಪಿಸಿಕೊಂಡಿದ್ದಾರೆ. ಇನ್ನು ಅವರು ಮನಸ್ಸು ಬದಲಾಯಿಸುವುದಿಲ್ಲ. ನಾನು ಒಲ್ಲೆ ಎಂದರೆ ಇಲ್ಲದ ಹಗರಣ. ಆದ್ದರಿಂದ...."

"ಅದೇನು ಆದ್ದರಿಂದ ಆದ್ದರಿಂದ ಎನ್ನುತ್ತಿದ್ದೀಯೆ ಅಷ್ಟು ಹೊತ್ತಿನಿಂದ? ಅದನ್ನ ಹೇಳಿಬಿಡು" ಎಂದು ರಾಜು ತುಸ ನಿಷ್ಠುರವಾಗಿ ನುಡಿದ.

"ನನ್ನಲ್ಲಿ ನಿಜವಾಗಿ ನಿನಗೆ ಪ್ರೀತಿ ಇರಬಹುದು. ಅದನ್ನ ಇನ್ನು ಮೇಲೆ ಮರೆತುಬಿಡು ರಾಜು."

"ಪ್ರೀತಿ ಎಂದರೆ ಏನು ಅನ್ನುವುದನ್ನ ಈಗ ನಾನು ಅರಿಯುತ್ತಿದ್ದೇನೆ, ರತ್ನ. ನಾವು ಪ್ರೀತಿಸುವ ವಸ್ತು ನಮಗೆ ದೊರೆಯದೆ ಹೋದರೂ ಅದನ್ನ ಪ್ರೀತಿಸುತ್ತ ಇರುವುದೇ ಪ್ರೀತಿಯ ರೀತಿ. ಕುಸುಮನ ವಿಚಾರದಲ್ಲಿ ಈಗ ಹಾಗೆ ಅನ್ನಿಸುತ್ತ ಇಲ್ಲ, ರತ್ನ. ನಿನ್ನ ವಿಚಾರದಲ್ಲಿ ಹಾಗೆ ಅನ್ನಿಸ ತೊಡಗಿವೆ. ನೀನು ಶಾಮಣ್ಣನ್ನ ಮದುವೆಯಾದರೂ ನಾನು ನಿನ್ನನ್ನು ಪ್ರೀತಿಸದೆ ಇರುವುದು ಸಾಧ್ಯವಿಲ್ಲ, ರತ್ನ."

"ಅದು ನಿನ್ನ ಹೃದಯದಲ್ಲಿ ಇರಲಿ, ರಾಜು, ನಾನು ನಿನ್ನ ಅಣ್ಣನ ಹೆಂಡತಿಯಾದಾಗ ಅದನ್ನು ತೋರಿಸುವುದು ಇಬ್ಬರಿಗೂ ಒಳ್ಳೆಯದಲ್ಲ."

"ಅಂತೂ ನಮ್ಮ ಅಣ್ಣನನ್ನ ಮದುವೆಯಾಗುವುದಕ್ಕೆ ನೀನು ನಿಶ್ಚಯಮಾಡಿರುವ ಹಾಗೆ ಕಾಣುತ್ತೆ."

"ನನಗೆ ಬೇರೆ ದಾರಿಯಿಲ್ಲ ರಾಜು. ಈ ವಿಷಯ ನನಗೆ ಮುಂಚೆಯೆ ಗೊತ್ತಾಗಬಾರದಿತ್ತೆ ಅನ್ನಿಸುತ್ತೆ ಈಗ. ಆಗ ಇಷ್ಟೆಲ್ಲ ಹಗರಣಕ್ಕೆ ಅವಕಾಶವೇ ಇರುತ್ತಿರಲಿಲ್ಲ. ನಿಮ್ಮ ತಾಯಿ ತಾನೆ ಅದೇಕೆ ತಮ್ಮ ಮನಸ್ಸಿನಲ್ಲಿರುವುದನ್ನು ಇಷ್ಟು ದಿನ ಹೇಳದೆ ತಮ್ಮಲ್ಲೇ ಬಚ್ಚಿಟ್ಟುಕೊಂಡಿದ್ದರೋ ನನಗೆ ಹೇಗೆ ಗೊತ್ತಾಗಬೇಕು ?"

"ಈಗಲೂ ಮಿಂಚಿಲ್ಲ, ರತ್ನ. ನನಗೆ ಇಷ್ಟವಿಲ್ಲ ಅಂತ ಹೇಳಿಬಿಡು. ಅವರೇನು ನಿನ್ನನ್ನು ಮನೆ ಬಿಟ್ಟು ಓಡಿಸುವುದಿಲ್ಲ."

"ಓಡಿಸುವುದಿಲ್ಲ, ದಿಟ. ಬೇರೆ ಇನ್ನು ಯಾರಿಗೋ ಕೊಟ್ಟು ಮದುವೆ ಮಾಡಿದರೆ? ನಿನಗೆ ತಂದುಕೊಳ್ಳದೆ ಹೋದರೆ?"

"ಆ ಸಂದರ್ಭದಲ್ಲಿ...... ನೀನು ಹೆದರಬೇಡ ರತ್ನ.......ಇಬ್ಬರೂ ಈ ಮನೆ ಬಿಟ್ಟು ಹೊರಟುಹೋಗೋಣ. ನಾನು ನಿಜವಾಗಿ ನಿನ್ನನ್ನು ಈಗ ಪ್ರೀತಿಸುತ್ತಾ ಇದೇನೆ, ರತ್ನ. ನಿನಗೋಸ್ಕರ ಎಷ್ಟು ಕಷ್ಟಪಡಲು ಬೇಕಾದರೂ ಸಿದ್ಧ. ಈಗ ಹೇಳುತ್ತೇನೆ, ನನ್ನ ಮಾತನ್ನ ನೀನು ನಂಬಿದರೆ ನಂಬು, ಬಿಟ್ಟರೆ ಬಿಡು. ನನ್ನನ್ನಲ್ಲದೆ ನೀನು ಯಾರನ್ನೇ ಮದುವೆ ಆಗುವ ಹಾಗೆ ಆದರೂ, ನಾನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲ. ನನ್ನಾಣೆ. ನಿನ್ನಾಣೆ...."

ರಾಜು ತನ್ನ ಮೇಲೆ ಇಟ್ಟಿದ್ದ ಪ್ರೇಮಕ್ಕೆ ಹೆಚ್ಚಿನ ಮಾತು ಬೇಕಿರಲಿಲ್ಲ. ನಿಶ್ಚಯಕ್ಕೆ ಬಂದು ಕಠಿನಗೊಳ್ಳುತ್ತ ಇದ್ದ ಅವಳ ಮನಸ್ಸು ಕರಗಿ ನೀರಾಯಿತು; ಹೃದಯ ಮತ್ತೆ ತನ್ನ ಆಧಿಪತ್ಯವನ್ನು ಪಡೆಯಿತು. ತನಗರಿವಿಲ್ಲದಂತೆಯೇ ಅವಳು ರಾಜುವಿನ ವಕ್ಷಸ್ಥಲದ ಮೇಲೆ ತನ್ನ ತಲೆಯನ್ನಿರಿಸಿದ್ದಳು. ಅವನು ಅವಳ ತಲೆಯನ್ನು ನೇವರಿಸುತ್ತಿದ್ದ. ರಾಜುವಿನ ಷರಟು ರತ್ನನ ಕಂಬನಿಯಿಂದ ಒದ್ದೆಯಾಯಿತು; ಅವನ ಎದೆ ತಣುವಾಯಿತು.

ಬಾಲಿಶವಾದರೂ ನೈಜವಾದ ಪ್ರೇಮಭಾವದಲ್ಲಿ ಇಬ್ಬರೂ ಕೆಲವು ಕ್ಷಣ ಮೈಮರೆತಿದ್ದರು.

ರತ್ನ ಎಷ್ಟು ಬೇಡವೆಂದರೂ ರಾಜು ಕೇಳದೆ, ರತ್ನನ ಮತ್ತು ತನ್ನ ಬಯಕೆಯನ್ನು ಒಡನೆಯೇ ಸುಂದರಮ್ಮನವರ ಕೋಣೆಗೆ ಧಾವಿಸಿ, ಅವರ ಮುಂದಿಟ್ಟ. ರಾಜುವಿನ ಮಾತನ್ನು ಕೇಳಿ ಅವರಿಗೆ ಸಿಡಿಲು ಬಡಿದಂತಾಯಿತು. ತಮ್ಮ ಬಹು ದಿನದ ಬಯಕೆಯ ಗೋಪುರ ಅಡಿ ಅಲುಗಿ ಕೆಳ ಬಿದ್ದಂತಾಯಿತು.

ರಾಜುವೂ ಮಗನೆ. ರತ್ನ ಯಾರ ಹೆಂಡತಿಯಾದರೇನು? ಆದರೆ, ಅಷ್ಟೆಲ್ಲಾ ಶ್ರಮಪಟ್ಟು, ಡಾಕ್ಟರ ಮೂಲಕ ಹೇಳಿಸಿ, ಶಾಮಣ್ಣನನ್ನು ತಮ್ಮ ಬಯಕೆಯ ಕಡೆಗೆ ತಿರುಗಿಸಿಕೊಂಡದ್ದನ್ನು ವಿಫಲಗೊಳಿಸಲು ಅವರಿಗೆ ಮನಸ್ಸಾಗಲಿಲ್ಲ. ತರ್ಕವಿತರ್ಕಗಳಿಂದ, ತಮ್ಮ ಕಿರಿಯ ಮಗನೊಡನೆ ವಾದ ವಿವಾದಗಳಿಂದ, ತಮ್ಮ ತಲೆಯನ್ನೂ ಕೆಡಿಸಿಕೊಂಡು, ರಾಜುವಿನ ಪ್ರೀತಿಯನ್ನೂ ಕಳೆದುಕೊಳ್ಳುವುದಕ್ಕೆ ಅವರು ಸಿದ್ಧವಾಗಿರಲಿಲ್ಲ.

"ಅಪ್ಪಾ, ನೀನು ಹೇಳುವುದರಲ್ಲೂ ತಪ್ಪೇನಿಲ್ಲ. ರತ್ನನನ್ನ ಶಾಮಣ್ಣನಿಗೇ ತಂದುಕೊಳ್ಳುತ್ತೇನೆ ಅಂತ ಅವಳ ಅಪ್ಪನಿಗೆ ಮಾತು ಕೊಟ್ಟಿದ್ದೆ. ನನ್ನ ತಮ್ಮ ಈಗ ಬದುಕಿದ್ದು, ಅವನಿಗೆ ಬೇಡ ಇವನಿಗೇ ಆಗಲಿ ಎಂದಿದ್ದರೆ ಅವನೂ ಬೇಡ ಅನ್ನುತ್ತಿರಲಿಲ್ಲ. ಅವಳು ಮನೆಯ ಸೊಸೆಯಾಗುವುದು ಮುಖ್ಯ. ಈಗಲೂ ಏನು? ಆಲೋಚನೆ ಮಾಡೋಣ, ಮನಸ್ಸಿಗೆ ಏನೂ ಹಚ್ಚಿಕೊಳ್ಳಬೇಡ" ಎಂದು ನಯವಾಗಿಯೇ ರಾಜುವಿಗೆ ತಿಳಿಯಹೇಳಿದರು. ತಾಯಿ ಇಷ್ಟರ ಮಟ್ಟಿಗೆ ತನ್ನ ಮಾತಿಗೆ ಬೆಲೆ ಕೊಡು ತ್ತಾರೆಂದು ಅವನು ನಿರೀಕ್ಷಿಸಿರಲಿಲ್ಲ. ಸದ್ಯದ ಮಟ್ಟಿಗೆ ಅವನು ಸುಮ್ಮ ನಾದನು; ಸಮಾಧಾನಗೊಂಡನು.

'ಸಂಕಟ ಬಂದಾಗ ವೆಂಕಟರಮಣ' ಎನ್ನುವಂತೆ ಬಿಕ್ಕಟ್ಟು ಒದಗಿ ದಾಗಲೆಲ್ಲ ಸುಂದರಮ್ಮನವರು ಡಾ|| ರಘುರಾಂ ಅವರನ್ನು ನೆನೆದು,

ಅವರನ್ನು ಬರಮಾಡಿಕೊಂಡು, ಅವರ ಸಲಹೆ ಕೇಳುತ್ತಿದ್ದರಷ್ಟೆ. ಎಂದಿನಂತೆ, ಈ ಸಲವೂ ಮಾರನೆಯ ದಿನವೇ ತುಸ 'ಖಾಯಿಲೆ'ಯನ್ನು ಬರಮಾಡಿ ಕೊಂಡರು; ಕೂಡಲೇ ಬರಬೇಕೆಂದು ಡಾಕ್ಟರಲ್ಲಿಗೆ ಕೆಂಚಪ್ಪನನ್ನು ಅಟ್ಟಿದರು.

ಕೆಂಚಪ್ಪನ ಮುಖ ಕಂಡ ಕೂಡಲೆಯೆ ರಘುರಾಂ ಊಹಿಸಿದರು: ಸುಂದರಮ್ಮನವರಿಗೆ ಖಾಯಿಲೆಯಲ್ಲ 'ಖಯಾಲಿ' ಎಂದು! ಎಂದಿನಂತೆ ಮಧ್ಯಾಹ್ನ ಮನೆಗೆ ಹಿಂದಿರುಗುವ ವೇಳೆಯಲ್ಲಿ ಸುಂದರಮ್ಮನವರ ಮನೆಗೆ ಭೇಟಿಯನ್ನು ದಯಪಾಲಿಸಿದರು. ಕೆಂಚಪ್ಪ, ಮೊದಲೇ ಸುಂದರಮ್ಮನವರು ಕೊಟ್ಟಿದ್ದ ಸೂಚನೆಯ ಮೇರೆ, ಡಾಕ್ಟರು ಬಂದ ಕೂಡಲೆ ಅವರನ್ನು 'ಅಮ್ಮಾವರ ಕೋಣೆ'ಗೆ ಕರೆದೊಯ್ದ.

ಸುಂದರಮ್ಮನವರು ಈ ಮೊದಲೆ ತಮ್ಮ ಇಬ್ಬರು ಮಕ್ಕಳಿಗೂ, ರತ್ನನಿಗೂ ಬೇರೆ ಬೇರೆಯ ಕೆಲಸ ಕಾರ್ಯಗಳನ್ನು ಹವಣಿಸಿಕೊಟ್ಟಿದ್ದರು; ಡಾಕ್ಟರೊಂದಿಗೆ ನಡಸಬೇಕಾದ ಗುಪ್ತಾಲೋಚನೆಗೆ ತಕ್ಕ ಏಕಾಂತವನ್ನು ಕಲ್ಪಿಸಿಕೊಂಡಿದ್ದರು.

ಸುಂದರಮ್ಮನವರ ಮುಖದ ಮುಗುಳುನಗೆಯನ್ನು ಕಂಡೇ ಡಾಕ್ಟರು ಅವರ 'ರೋಗದ ನಟನೆ'ಯನ್ನು ಊಹಿಸಿದರು. ಆದರೆ, ಅವರು ನಿಜವಾಗಿ ರೋಗಿಷ್ಠೆಯೂ ಆದ್ದರಿಂದ, ಎಂದಿನ ವೈದ್ಯ ಪರೀಕ್ಷೆಯನ್ನು ನಡಸಿಯೂ ನಡಸಿದರು,

"ಹಾರ್ಟು ಸೌಂಡಾಗಿಯೇ ಇದೆ, (ಹೃದಯ ಗಟ್ಟಿಮುಟ್ಟಾಗಿದೆ) ಪರವಾಯಿಲ್ಲ. ಏನೂ ಬಿಕ್ಕಟ್ಟಿಲ್ಲಾಂತ ಕಾಣುತ್ತೆ. ಅದು ಇಲ್ಲದೆ ಇದ್ದರೆ, ಹಳೆಯ ರೋಗಕ್ಕೆ ಹಳೆಯ ಮದ್ದು, ಗೊತ್ತೇ ಇದೆಯಲ್ಲ. 'ರಿಪೀಟ್ ಮಿಕ್ಸ್‌ಚರ್...." ಎಂದು ಡಾಕ್ಟರ್ ನಕ್ಕರು.

"ನಿಮ್ಮನ್ನ ಸುಮ್ಮಸುಮ್ಮನೆ ಬರಮಾಡಿಕೊಳ್ಳುತ್ತೇನೆಯೇ ಡಾಕ್ಟರೆ? ನನಗೆ ಬಗೆಹರಿಯದ ಬಿಕ್ಕಟ್ಟು ಉಂಟಾಗಿರುವುದರಿಂದ ತಾನೆ, ನಿಮಗೆ ತೊಂದರೆ ಕೊಡಬೇಕಾಗಿರುವುದು?"

"ಅದೇನು, ಅಂತಹ ಬಿಕ್ಕಟ್ಟು? ಶಾಮಣ್ಣ–ಗಾಂಧಿ, ರಾಜು–ಜಿನ್ನಾ ಆಗಿಬಿಟ್ಟಿದ್ದಾರೆಯೋ?"

"ಗಾಂಧಿ ಏನೋ ನನಗೆ ಗೊತ್ತು. ಆ ಜಿನ್ನನೋ ಜಿನನೋ ಅದು ಯಾರೋ ನಾನು ಕಾಣೆ. ಅದು ಇರಲಿ. ನಾನು ಬಯಸಿದ್ದು ಒಂದು, ಅದು ಆಗುತ್ತ ಇರೋದು ಮತ್ತೊಂದು....."

"ರೋಗದ ಸುಳಿವೇ ಗೊತ್ತಾಗುವುದಿಲ್ಲ. ಇನ್ನು ಮನುಷ್ಯರ ಮನಸ್ಸಿನ ಜಾಡು ನಮಗೆ ಗೊತ್ತಾಗುತ್ತದೆಯೇ? ರತ್ನನ ಮದುವೆ ವಿಚಾರ ತಾನೆ? ಶಾಮಣ್ಣ ಮತ್ತೆ ಮುರಾಡ ಹಾಕಿದ್ದಾನೆಯೋ?"

"ಶಾಮಣ್ಣನಲ್ಲ ಡಾಕ್ಟರೆ, ಶಾಮಣ್ಣನಲ್ಲ. ಶಾಮಣ್ಣನ್ನ ಮದುವೆ ಮಾಡಿಕೊಳ್ಳುವುದಕ್ಕೆ ರತ್ನನಿಗೆ ಇಷ್ಟವಿಲ್ಲವಂತೆ. ರಾಜು ರತ್ನ ಇಬ್ಬರೂ ತಮ್ಮತಮ್ಮಲ್ಲಿ ಏನೋ ಒಪ್ಪಂದ ಮಾಡಿಕೊಂಡಿರುವ ಹಾಗೆ ಕಾಣುತ್ತೆ. ರತ್ನನ್ನ ರಾಜು ಮದುವೆ ಮಾಡಿಕೊಳ್ಳುತ್ತಾನಂತೆ...."

"ಇದೆಲ್ಲಾ ನಿಮಗೆ ಹೇಗೆ ಗೊತ್ತಾಯಿತು?"

"ರಾಜುವೇ ಹೇಳಿದ."

"ರತ್ನ ಏನಂತಾಳೆ?"

"ನಾನು ಮೊದಲು ಕೇಳಿದಾಗ ಒಪ್ಪಿಕೊಂಡ ಹಾಗೆಯೇ ಮಾತನಾಡಿದಳು. ಈಗ, ರಾಜುವಿನ ಮಾತಿನಿಂದ ಅವಳಿಗೆ ಇಷ್ಟ ಇಲ್ಲ ಅನ್ನುವ ಹಾಗೆ ಕಾಣುತ್ತೆ."

ಡಾಕ್ಟರಿಗೆ ಕೆಲಕಾಲದ ಹಿಂದಿನ ಮಾತುಕತೆ ನೆನಪಾಯಿತು.

"ರತ್ನ ಮನೆಯ ಸೊಸೆಯಾಗುವುದು ಮುಖ್ಯ. ಯಾರಿಗಾದರೇನು? ಹಾಗೆಯೇ ಮಾಡಿಬಿಡಿ."

"ಏನು ಡಾಕ್ಟರೆ, ನೀವು ಹೇಳುವುದು!"

"ನಾನು ಅವೊತ್ತು ಏನು ಹೇಳಿದೆನೋ ಇವೊತ್ತು ಹೇಳುವುದೂ ಅಷ್ಟೆ. ರಾಜುವಿಗೂ ರತ್ನನಿಗೂ ವರಸಾಮ್ಯ ಹೊಂದುತ್ತೆ...."

"....ಇಬ್ಬರಿಗೂ ಒಂದು ವರ್ಷಕೂಡ ಪೂರ್ತಿ ವ್ಯತ್ಯಾಸ ಇಲ್ಲ, ಡಾಕ್ಟರೆ. ಅದು ಹಾಗಿರಲಿ, ರತ್ನನ್ನ ಶಾಮಣ್ಣನಿಗೆ ಮದುವೆಮಾಡದವೆ ಹೋದರೆ, ಅವನು ಸೀಮೆಯಿಂದ ಹಿಂದಿರುಗುವವರೆಗೂ ಮದುವೆಯಾಗುವುದೇ ಇಲ್ಲ. ಅವನಿಗೆ ಮದುವೆಯಾಗದವೆ ರಾಜುವಿಗೆ ಮದುವೆಯೆ? ಶಾಮಣ್ಣನ ಮದುವೆಯಾದರೂ ಕಣ್ಣಿಂದ ನೋಡಬೇಕೋ ಇಲ್ಲವೋ

ನಾನು ? ನೀವೇನೋ ನನಗೆ ಆಯುಸ್ಸು ಧಾರೆಯೆರೆಯುತ್ತೀರಿ ಅಂತಲೇ ಇಟ್ಟುಕೊಳ್ಳೋಣ. ನಾನು ಅವೊತ್ತೇ ಹೇಳಿದೆನಲ್ಲ. ಹೊರಗಿನ ಹೆಣ್ಣುಗಳು ಬರುವುದಕ್ಕೆ ಮುಂಚೆಯೇ ಅವನಿಗೆ ಮದುವೆ ಮಾಡಿಬಿಡಬೇಕು. ಅಲ್ಲದೆ, ಶಾಮಣ್ಣನಿಗೆ ರತ್ನನಂಥ ಚೆಲುವೆ ಸಿಕ್ಕುತ್ತಾಳೆ ಅಂತ ನನಗೆ ನಂಬಿಕೆಯಿಲ್ಲ. ಅವನು ಕಪ್ಪಾದ ಮಾತ್ರಕ್ಕೆ ಹಿರಿಯ ಸೊಸೆಯೂ ಕಪ್ಪಾಗಬೇಕೆ? ರಾಜುವಿಗೇನು, ಮನ್ಮಥನ ಹಾಗೆ ಇದ್ದಾನೆ. ಒಳ್ಳೆ ಚೆಲುವೆ ಸಿಕ್ಕಿಯೇ ಸಿಕ್ಕುತಾಳೆ."

"ನಿಮ್ಮ ವಾದವನ್ನ ನಾನು ಒಪ್ಪಿದೆ. ಆದರೆ, ನಿಮ್ಮ ತೀರ್ಮಾನ...."

"ನೀವು ಏನು ಬೇಕಾದರೂ ಹೇಳಿ ಡಾಕ್ಟರೆ. ನನ್ನ ತೀರ್ಮಾನವೂ ಸರಿಯಾಗಿಯೇ ಇದೆ. ಅದನ್ನ ನಾನು ಬದಲಾಯಿಸಲಾರೆ. ಅದೂ, ಕಷ್ಟಪಟ್ಟು ಶಾಮಣ್ಣನ್ನ ಒಪ್ಪಿಸಿಕೊಂಡಮೇಲೆ...."

"ಅದೇ ಬಿಕ್ಕಟ್ಟು ಈಗ. ನಿಮ್ಮ ಮಾತಿಗೆ ಶಾಮಣ್ಣ ಒಪ್ಪಿದ್ದಾನೆ. ರತ್ನ ಒಪ್ಪಿಲ್ಲ. ರಾಜು ಅವಳ ವಕೀಲ; ವಕೀಲಿಯಲ್ಲಿ ಗೆದ್ದರೆ, ಅವಳ ಗಂಡ, ಅವನು ಗೆಲ್ಲದಂತೆ ಮಾಡಬೇಕು. ಹೌದೊ ಅಲ್ಲವೋ?"

"ಅಷ್ಟೆ, ನನಗೆ ಬೇಕಾದ್ದು. ಅಂದರೆ, ರತ್ನ ಮತ್ತೆ ಒಪ್ಪುವಂತಾಗಬೇಕು."

ಡಾ|| ರಘುರಾಂ ಗೃಹಕೃತ್ಯದ ಈ ರೋಗಕ್ಕೆ ಮದ್ದು ಏನು ಎಂಬ ಆಲೋಚನೆಯಲ್ಲಿ ಮುಳುಗಿದರು.

"ಮೂವರ ಜಾತಕಗಳೂ ಇವೆಯೋ ?" ಎಂದು ಡಾಕ್ಟರು ಪ್ರಶ್ನಿಸಿದರು.

"ಅವರಿಬ್ಬರದ್ದು ಇವೆ. ರತ್ನನದು ಇಲ್ಲ."

"ಹೋಗಲಿ ಬಿಡಿ. ಜಾತಕ ನೋಡಿಸಿ ಮನಸ್ಸಿಗೆ ಇಲ್ಲದ ನಚ್ಚು ಯಾಕೆ ಹೆಚ್ಚಿಸಿಕೊಳ್ಳಬೇಕು. ಒಂದು ಕೆಲಸಮಾಡಿ : ನನ್ನ ಕೈಲಿ ಕೊಟ್ಟು ಮೂರು ಜನದ ಜಾತಕಗಳನ್ನೂ ನೋಡಿಸಿತು ಅಂತ ಹೇಳಿ. ರತ್ನನಿಗೂ ರಾಜುವಿಗೂ ಜಾತಕ ಕೂಡಿಬರಲಿಲ್ಲ ಅಂತ ಹೇಳಿ. ರಾಜುವಿಗೆ ದ್ವಿಕಳತ್ರ ಯೋಗ ಇದೆ ಅಂತ ಹೇಳಿ. ಶಾಮಣ್ಣನಿಗೂ ರತ್ನನಿಗೂ ಜಾತಕ ಹದಿನಾರಾಣೆಯ ಭಾಗ ಕೂಡಿಬರುತ್ತೆ ಅಂತ ಹೇಳಿ. ಈ ರಾಮಬಾಣ ಗುರಿತಪ್ಪುವುದೇ ಇಲ್ಲ. ಸರಿ ತಾನೆ?" ಎಂದು ಡಾ|| ರಘುರಾಂ ತಮ್ಮ ಬುದ್ಧಿವಂತಿಕೆಯ ಸಲಹೆಗೆ ತಾವೇ

ಮೆಚ್ಚಿಕೊಂಡು, ಸುಪ್ರಸನ್ನತೆಯ ಮಂದಹಾಸವನ್ನು ಬೀರಿದರು.

"ನನಗೆ ಹೊಳೆಯಲೇ ಇಲ್ಲ ಡಾಕ್ಟರೆ! ಹಾಗೆ ಹೇಳಿಬಿಟ್ಟರೆ, ಅವರು ಬಾಯಿಮುಚ್ಚಿಕೊಳ್ಳುತ್ತಾರೆ" ಎಂದು ಸುಂದರಮ್ಮನವರು ಡಾಕ್ಟರ ಸಲಹೆಯನ್ನು ಅನುಮೋದಿಸಿದರು.

ಡಾ|| ರಘುರಾಂ ಸುಂದರಮ್ಮನವರನ್ನು ಬೀಳ್ಕೊಂಡು ಹಿಂದಿರುಗುವಾಗ, ತಾವು ಕೊಟ್ಟ ಸಲಹೆಗೆ ತಾವೇ ಬೇಸರಗೊಂಡರು. ನೆರೆ ಬಂದ ಹೊಳೆಗೆ ಮರಳಿನ ಅಡ್ಡಗಟ್ಟೆ ಕಟ್ಟಹೋಗುತ್ತಿರುವುದಾಗಿ ಅವರಿಗೆ ಭಾಸವಾಯಿತು. ಸುಂದರಮ್ಮನವರ ಬಯಕೆ ಸರಿಯೋ ತಪ್ಪೋ, ಅಥವಾ ಅದು ಕೇವಲ ಹಟವೋ, ಯಾವುದನ್ನೂ ನಿರ್ಧರಿಸಲು ಮಾತ್ರ ಅವರ ಬುದ್ಧಿಗೂ ಈಗ ಸಾಧ್ಯವಾಗಲಿಲ್ಲ. ದೈವಗತಿ ಕಳ್ಳಹೊಳೆ; ಯಾವಾಗ ಉಕ್ಕಿ ಹರಿದು ಯಾರನ್ನು ಕೊಚ್ಚಿಕೊಂಡು ಹೋಗುತ್ತದೆಯೋ ಬಲ್ಲವರಾರು ಎಂದುಕೊಂಡರು; ಕಳ್ಳಹೊಳೆ ಎಂತ ಕಾದು ಕುಳಿತರೆ ಹೊಳೆ ದಾಟುವ ಹಾಗೆಯೇ ಇಲ್ಲ ಎಂದು ತಮಗೆ ತಾವೇ ಸಮಾಧಾನವನ್ನೂ ಹೇಳಿಕೊಂಡರು.

ಡಾಕ್ಟರ 'ರಾಮಬಾಣ' ಪರಿಣಾಮಕಾರಿಯಾಯಿತು. ಕೆಲವು ದಿನ ಬಿಟ್ಟು, ರಾಜು ರತ್ನ ಇಬ್ಬರೂ ಇದ್ದಾಗ ಸುಂದರಮ್ಮನವರು ಜಾತಕ ಪರಿಶೀಲನೆ ಮಾಡಿಸಿದ ಸಂಗತಿಯನ್ನು ಅವರಿಗೆ ವಿವರಿಸಿ, 'ಶಾಮಣ್ಣ ರತ್ನ ಇವರ ಮದುವೆ ತಮ್ಮ ಬಯಕೆ ಮಾತ್ರವಲ್ಲ; ದೈವನಿಯಾಮಕ' ಎಂದು ತಾವು ಕಾಣದೆ ಇದ್ದ ದೈವದ ಕಡೆಗೆ ಕೈತೋರಿಸಿದರು. ಆ ದೈವಕ್ಕೆ ರಾಜು ರತ್ನ ಇಬ್ಬರೂ ನಿರಾಶೆಯ ನೋವಿನಿಂದ ತಲೆಬಾಗಿದರು.

ಶಾಮಣ್ಣನ ಎಂ.ಎ. ಪರೀಕ್ಷೆಯ ಫಲಿತಾಂಶವೂ ಬಂದಿತು. ನಿರೀಕ್ಷೆಯಂತೆ, ತೇರ್ಗಡೆಯಾಗಿದ್ದ. ಸುಂದರಮ್ಮನವರ ಹಿಗ್ಗು ಹಲವು ಕವಲಾಗಿ ಹೂ ಬಿಟ್ಟಿತು. ಎಲ್ಲ ಮಕ್ಕಳ ತೇರ್ಗಡೆಯ ನೆನಪಾಗಿ, ಶಾಮಣ್ಣ ಮತ್ತು ರತ್ನ ಇವರ ಮದುವೆಯ ನಿಶ್ಚಿತಾರ್ಥದ ಪ್ರಯುಕ್ತವಾಗಿ, ಸುಂದರಮ್ಮನವರು ಒಂದು ಶುಭ ದಿನ ಸೊಗಸಾದ ಭೋಜನ ಕೂಟವನ್ನು ಏರ್ಪಡಿಸಿದರು. ಅದೇ ದಿನ, ಜೋಯಿಸರ ಸಮಕ್ಷದಲ್ಲಿ, ವಿವಾಹಮಹೋತ್ಸವದ ಲಗ್ನಪತ್ರಿಕೆಯ ಶಾಸ್ತ್ರವೂ ನಡೆದುಹೋಯಿತು. ಲಗ್ನ ಶ್ರಾವಣಮಾಸದಲ್ಲಿ ನಡೆಯುವುದಾಗಿತ್ತು.

೨೫

ಸುಂದರಮ್ಮನವರು ಒಬ್ಬರ ಹೊರತಾಗಿ ಇದು ಯಾರಿಗೂ ಬೇಡದ ಮದುವೆ. ಅವರ ಹೊರತು ಯಾರ ಮುಖದಲ್ಲಿಯೂ ಗೆಲವಿಲ್ಲ; ಅವರಿಗೋಸ್ಕರ ಯಾರೂ ಮುಖವನ್ನು ಸೊಟ್ಟಗೂ ಮಾಡಿಕೊಳ್ಳಲಿಲ್ಲ. ಮೂಗು ಬಾಯಿ ಮುಚ್ಚಿಕೊಂಡು ಬಲವಂತ ಮಾಘಸ್ನಾನದಲ್ಲಿ ಮುಳುಗುಹಾಕಲು ಸಿದ್ಧರಾಗಿದ್ದರು.

ಮದುವೆಯ 'ರಿಸೆಪ್ಷನ್' ಒಂದು ಹೊರತು, ಹೆಚ್ಚಿನ ಶಾಸ್ತ್ರ ಸಂಬಂಧದ ಗೊಂದಲಗಳು ಕೂಡದೆಂದು ಶಾಮಣ್ಣನ ಒತ್ತಾಯ. ಪೂರ್ವ ಸಂಪ್ರದಾಯಗಳನ್ನು ತ್ಯಜಿಸಬೇಕೆಂದು ಶಾಮಣ್ಣನ ನಿಲುವಲ್ಲ. ಅವನಿಗೆ ಏನೂ ಬೇಕಾಗಿರಲಿಲ್ಲ, ಅಷ್ಟೆ. ಡಾ|| ರಘುರಾಂ ಅವರ ಸಂಧಾನದ ಫಲವಾಗಿ, ಒಂದು ದಿನದಲ್ಲೇ ಧಾರೆ ನಾಗೋಲಿ ಎಲ್ಲ ಮುಗಿಯತಕ್ಕದ್ದೆಂದು ತೀರ್ಮಾನವಾಯಿತು; ನಾಲ್ಕು ದಿನಗಳ ಮದುವೆ ಹಚ್ಚಿಸಿಕೊಂಡು ಸುಂದರಮ್ಮನವರಾದರೂ ಆಯಾಸಪಡಲು ಸಿದ್ಧರಾಗಿರಲಿಲ್ಲ.

ಸುಂದರಮ್ಮನವರ ಎದುರು ನಿಂತ ಮುಖ್ಯ ಸಮಸ್ಯೆ, ಧಾರೆಯೆರೆಯುವ ಧಾರೆಯೆರೆಸಿಕೊಳ್ಳುವ ದಂಪತಿಗಳು ಯಾರು ಎಂಬುದು. ಈ ವಿಚಾರವನ್ನು ಚರ್ಚಿಸುತ್ತ, ಡಾಕ್ಟರ ಎದುರು ಅವರು ಧಾರಾಳವಾಗಿ ಕಂಬನಿ ಸುರಿಸಿದರು. ಅವರ ಪೇಚಾಟವನ್ನು ಕಂಡು, ಡಾ|| ರಘುರಾಂ ಸಮಸ್ಯೆಯನ್ನು ಪರಿಹರಿಸಲು ಅರ್ಧ ನೆರವಾದರು: "ನಾವು ನಿಮ್ಮ ಜನ ಅಲ್ಲ. ನೀವು ಏನೋ 'ಕಮ್ಮೆ'; ನಾನು ಹೊಯ್ಸಳ ಡುಬು ಕರ್ಣಾಟಕ; ಆದರೂ ನಿಮ್ಮ ಆಕ್ಷೇಪಣೆ ಇಲ್ಲದೆಹೋದರೆ ನೀರು ಹೊಯ್ಯುವುದಕ್ಕೋ ಇಲ್ಲ ನೀರು ಹೊಯ್ಸಿಕೊಳ್ಳುವುದಕ್ಕೋ ನಾನು ಸಿದ್ಧವಾಗಿದ್ದೇನೆ."

ಡಾಕ್ಟರ ಮಾತು ಕೇಳಿ ಸುಂದರಮ್ಮನವರಿಗೆ ತುಂಬ ಸಂತೋಷವಾಯಿತು: "ನೀವು ಶಾಮಣ್ಣನ ಹಿರಿಯ ಅಣ್ಣನ ಸಮಾನ. ಹಿರಿಯಣ್ಣ ಪಿತೃ ಸಮಾನ ಅಂತ ಹೇಳುತ್ತಾರೆ. ನೀವೇ ಧಾರೆಯೆರೆಸಿಕೊಂಡು ಬಿಡಿ.

ನಿಮ್ಮ ಹೆಂಡತಿಯನ್ನೂ ಒಪ್ಪಿಸುವ ಭಾರ ನಿಮ್ಮದು. ಧಾರೆಯೆರೆದು ಕೊಡುವುದಕ್ಕೆ, ರತ್ನನ ತಾಯಿಯ ಅಣ್ಣನಿಗೆ ಕಾಗದ ಹಾಕಿಸುತ್ತೇನೆ. ಅವರೂ ನಿಮ್ಮ ಹಾಗೆ ದೊಡ್ಡ ಮನಸ್ಸುಮಾಡಿ ಒಪ್ಪಿಕೊಂಡರೆ, ನಮ್ಮ ಪುಣ್ಯ'' ಎಂದು ಸುಂದರಮ್ಮನವರು ಬಹುಮಟ್ಟಿಗೆ ಸಮಾಧಾನಗೊಂಡು ನುಡಿದರು.

ಸುಂದರಮ್ಮನವರು ತಾವು ಉದ್ದೇಶಿಸಿದಂತೆ ರತ್ನನ ಸೋದರ ಮಾವನಿಗೆ ಕಾಗದ ಹಾಕಿಸಿದರು. ಆತ ಬಂದು ವಿವಾಹಕಾರ್ಯವನ್ನು ನೆರವೇರಿಸಿಕೊಡುವ ಗೌರವದ ಆಹ್ವಾನವನ್ನು ಸಂತೋಷದಿಂದ ಒಪ್ಪಿ ಕೊಂಡ. ಸುಂದರಮ್ಮನವರ ಹೆಗಲ ಮೇಲಿನಿಂದ ದೊಡ್ಡ ಭಾರವೊಂದು ಇಳಿದಂತಾಯಿತು.

ಜವಳಿ, ದಿನಸಿ ಮುಂತಾದ ಮದುವೆಗೆ ಬೇಕಾದ ಸಕಲ ಸಾಮಗ್ರಿ ಗರನ್ನೂ ಪೇಟೆಯಿಂದ ತಂದುಹಾಕುವ ಹೊಣೆಯನ್ನೂ ಡಾ|| ರಘುರಾಂ ಅವರೇ ಒಪ್ಪಿಕೊಂಡರು. ಸುಂದರಮ್ಮನವರ ಮಾತಿನಂತೆ ರಾಜು ಈ ಕಾರ್ಯಗಳಲ್ಲೆಲ್ಲ ಡಾಕ್ಟರಿಗೆ ನೆರವಾಗುತ್ತಿದ್ದ; ಉತ್ಸಾಹವನ್ನು ನಟಿಸುತ್ತಿದ್ದ. ತಂದ ಪದಾರ್ಥಗಳನ್ನೆಲ್ಲಾ ಒಪ್ಪಮಾಡಿ ಅಣಿಮಾಡಲು ಸುಂದರಮ್ಮನವರು ಮನೆಯ ಒಕ್ಕಲಗಿತ್ತಿಯನ್ನು ದಿನಪೂರ್ತಿಯ ಕೆಲಸಕ್ಕೆ ನೇಮಿಸಿಕೊಂಡರು; ಕೂಲಿನಾಲಿಮಾಡಿ ಜೀವಿಸುತ್ತಿದ್ದ ಗಂಡಬಿಟ್ಟ ಬಡಮುತ್ತೈದೆಯೊಬ್ಬರನ್ನು ಒಂದು ತಿಂಗಳ ಮಟ್ಟಿಗೆ ಕೆಲಸಕ್ಕೆ ನೇಮಿಸಿದರು.

ಯಾರಿಗೂ ಬೇಡದ ಮದುವೆಯನ್ನು ಸುಂದರಮ್ಮನವರು ವಿಜೃಂಭಣೆ ಯಿಂದಲೇ ನಡಸಿಬಿಟ್ಟರು. ಮದುವೆಯ ಸಡಗರದ ಉತ್ಸಾಹದಲ್ಲಿ ಅದು ಹೇಗೆ ಶಕ್ತಿ ಬಂದಿತೋ, ಬೆನ್ನು ಬಗ್ಗಿಸಿಕೊಂಡೇ ಅಲ್ಲಿಂದಿಲ್ಲಿಗೆ ಓಡಾಡುತ್ತ ಮುನಿಸಿಕೊಳ್ಳುವ ಬೀಗರು ಇದ್ದರೆ ಹೇಗೋ ಹಾಗೆ ಎಲ್ಲ ಅತಿಥಿಗಳನ್ನೂ ಬೀಗರನ್ನೂ ಉಪಚರಿಸುವ ರೀತಿಯಲ್ಲಿಯೇ ಉಪಚರಿಸಿದರು.

ಕುಸುಮ ಶ್ಯಾಮಲೆ ಇಬ್ಬರೂ ಮದುವೆಯ ದಿನವೂ, 'ಆರತಕ್ಷತೆ' ದಿನವೂ ಬಂದಿದ್ದರು. ಇಬ್ಬರೂ ತಮ್ಮ ಗೆಳತಿಗೆ ಉಡುಗೊರೆ ಕೊಟ್ಟರು. "ವಯಸ್ಸಿನ ಹೆಚ್ಚು ಕಡಮೆ ಏನು ಮಹಾ. ರಾಜುವಿಗೂ ರತ್ನನಿಗೂ

ಆದರೆ ಚೆನ್ನಾಗಿ ಹೊಂದುತ್ತಿತ್ತು" ಎಂದು ಕುಸುಮ ಶ್ಯಾಮಲೆಯ ಕಿವಿಯಲ್ಲಿ ಹೇಳಿದಳು. "ನಿನಗೆ ಗೊತ್ತಿಲ್ಲ ಕುಸುಮಾ. ಈಗ ಹಾಗೆ ಅನ್ನಿಸುತ್ತೆ. ಮುಂದೆ ಶಾಮಣ್ಣ-ರತ್ನ ಚೆನ್ನಾಗಿಯೇ ಸಂಸಾರ ಮಾಡಿ ಕೊಂಡಿರುತ್ತಾರೆ. ರಾಜುವನ್ನ ರತ್ನ ಮದುವೆಯಾಗಿದ್ದರೆ ಅವಳು ಸುಖ ವಾಗಿರುತ್ತಿದ್ದಳು ಅಂತ ನನಗೆ ಅನ್ನಿಸುವುದಿಲ್ಲ. ರಾಜುವನ್ನ ನೆಚ್ಚುವು ದಕ್ಕಿಲ್ಲ. ಯಾವಳೋ ಸಿನಿಮಾ ನಟಿಯ ಹಿಂದೆ ಹೋದರೂ ಹೋದ" ಎಂದು ಶ್ಯಾಮಲೆ ಈ ಮದುವೆಯ ಬಗ್ಗೆ ತನ್ನ ತೃಪ್ತಿಯನ್ನೇ ಸೂಚಿಸಿದಳು.

ರತ್ನನ ಸೋದರಮಾವ ಮತ್ತು ಸೋದರತ್ತೆಗೂ, ಡಾ|| ರಘುರಾಂ ದಂಪತಿಗಳಿಗೂ ಸುಂದರಮ್ಮನವರು ಭಾರಿಯ ಪಂಚೆ ಸೀರೆ ಕಣಗಳನ್ನು ಉಡುಗೊರೆ ಕೊಟ್ಟರು. ಎಲ್ಲರೂ ಸುಪ್ರೀತರಾದರು.

ಡಾ|| ರಘುರಾಂ ಅವರು ತಮ್ಮ 'ಕಾಂಪ್ಲಿಮೆಂಟ್ಸ್' ಸಮೇತ ಲಗ್ನ ಪತ್ರಿಕೆಗಳನ್ನು ದಿನಪತ್ರಿಕೆಗಳಿಗೂ ಕಳುಹಿಸಿ ಕೊಟ್ಟಿದ್ದರು; ಅವುಗಳಲ್ಲಿ ತಮ್ಮ ಮನೆಯ ವಿವಾಹವಾರ್ತೆ ಪ್ರಕಟವಾಗಿದ್ದುದನ್ನು ಡಾಕ್ಟರು ತೋರಿಸಿದಾಗ, ಸುಂದರಮ್ಮನವರು ಹಿಗ್ಗಿಹೋದರು. "ನೀವು ನಮ್ಮ ಭಾಗದ ದೇವರು" ಎಂದು ಸುಂದರಮ್ಮನವರು ಡಾಕ್ಟರನ್ನು ಪದೇ ಪದೇ ಕೊಂಡಾಡಿದರು.

* * *

ಈಗ ರತ್ನ ಶಾಮಣ್ಣನ ಹೆಂಡತಿ. ರಾಜು ಮತ್ತು ರತ್ನ ಇವರಲ್ಲಿ ಬಾಲ್ಯದಿಂದ ಬೆಳೆದು ಬಂದಿದ್ದ ಸಲಿಗೆ ತಟ್ಟನೆ ಕಡಿದುಹೋಯಿತು. ಮಾತು ಕತೆಯೇನೋ ಆಡುತ್ತಿದ್ದರು; ಆದರೆ ಆತ್ಮೀಯತೆಯ ತೋರಿಕೆಯಿರಲಿಲ್ಲ.

ಮದುವೆಯಾದ ಮೇಲೆ ಶಾಮಣ್ಣ-ರತ್ನ ಇವರಲ್ಲಿ ಸಹಜವಾಗಿ ಸಲಿಗೆ ಬೆಳೆಯುವುದೆಂದು ಸುಂದರಮ್ಮನವರು ನಿರೀಕ್ಷಿಸಿದ್ದರು. ಆದರೆ ಅವರ ನಿರೀಕ್ಷೆ ಬರಡಾಯಿತು. ಶಾಮಣ್ಣ ತನ್ನ ಕಾರ್ಯಕ್ರಮಗಳಲ್ಲಿ ಸ್ವಲ್ಪವೂ ವ್ಯತ್ಯಾಸ ಮಾಡಲಿಲ್ಲ. ತಾನು ವಿನೋದ ವಿಹಾರಗಳಲ್ಲಿ ಭಾಗಿಯಾದರಲ್ಲವೆ ರತ್ನನನ್ನು ಜೊತೆಗೆ ಕರೆಯುವ ಮಾತು?

ರಾಜು ಒಂದು ಕಾರಣಕ್ಕಾಗಿ, ಶಾಮಣ್ಣ ಮತ್ತೊಂದು ಕಾರಣ ಕ್ಕಾಗಿ—ಮನೆಯ ಹೊರಗೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದರು. ರತ್ನ

ಬಹುಮಟ್ಟಿಗೆ ಒಬ್ಬೊಂಟಿಗಳಾಗಿ ಮನೆಯಲ್ಲಿಯೇ ಬೇಸರದ ದಿನಗಳನ್ನು ಕಳೆಯುತ್ತಿದ್ದಳು.

ಡಾ|| ರಘುರಾಂ 'ಮೆಹನತ್ತು'ಮಾಡಿ ಮೆಡಿಕಲ್ ಸ್ಕೂಲಿನಲ್ಲಿ ರಾಜುವಿಗೆ ಒಂದು ಸೀಟು ದೊರಕಿಸಿಕೊಟ್ಟರು. ರತ್ನನ ಮದುವೆಯಾದ ಕೆಲ ದಿನಗಳಲ್ಲಿಯೇ ರಾಜುವಿಗೆ ನಿತ್ಯದ ಕಾರ್ಯಕ್ರಮವೊಂದು ಏರ್ಪಟ್ಟಿತು.

ಈಗ ರಾಜುವಿಗಿಂತ ಹೆಚ್ಚು ಹೊತ್ತು ಶಾಮಣ್ಣ ಮನೆಯಲ್ಲಿಯೇ ಇರುತ್ತಿದ್ದ. ಆದರೂ, ಶಾಮಣ್ಣ ಮತ್ತು ರತ್ನ ಇವರಲ್ಲಿ ನವದಂಪತಿಗಳಲ್ಲಿ ಕಾಣಬೇಕಾದ ಸರಸಜೀವನ ಕಾಣಬರುತ್ತಿರಲಿಲ್ಲ. ಸುಂದರಮ್ಮನವರು ಪ್ರಯತ್ನಪೂರ್ವಕವಾಗಿ ಅವರ ಚರ್ಯೆಯನ್ನು ಪರೀಕ್ಷಿಸಿ, ಈ ಸಂಗತಿಯನ್ನು ಅರಿತರು. "ಎಷ್ಟಾಗಲಿ ಪೂರ್ವಸಂಪ್ರದಾಯದ ಮನೆಯಲ್ಲಿ ಬೆಳೆದವರು. ಪ್ರಸ್ತವಾದ ಮೇಲೆ ಎಲ್ಲ ಸರಿಹೋಗುತ್ತೆ" ಎಂದು ಸುಂದರಮ್ಮನವರು ತಮ್ಮಲ್ಲಿಯೇ ಸಮಾಧಾನಗೊಂಡರು.

ಆದರೂ ಅವರಿಬ್ಬರಲ್ಲಿ ಸಲಿಗೆಯನ್ನು ಕುದುರಿಸಲು ಅವರು ಎಷ್ಟೋ ವಿಧಗಳಲ್ಲಿ ಪ್ರಯತ್ನಪಟ್ಟರು. ಭಟ್ಟರು ಮಾಡುತ್ತಿದ್ದ ಹಲವು ಕೆಲಸಗಳನ್ನೂ, ಇತರ ಕೆಲಸಗಳನ್ನೂ ರತ್ನನಿಗೆ ಹೇಳಿ ಮಾಡಿಸುತ್ತಿದ್ದರು. "ಶಾಮಣ್ಣನಿಗೆ ರತ್ನನ ಕೈಲಿ ಕಾಫಿ ಕೊಟ್ಟು ಕಳಿಸಿ, ಭಟ್ಟರೆ" ಎಂದೋ; "ರತ್ನ, ಶಾಮಣ್ಣ ಬಚ್ಚಲುಮನೆಗೆ ಹೋದ. ಟವಲು ತೆಗೆದುಕೊಂಡು ಹೋದನೋ ಇಲ್ಲವೊ. ನೋಡಿ ಕೊಡಮ್ಮ" ಎಂದೋ; "ಶಾಮಣ್ಣನಿಗೆ ಎಲೆ ಹಾಕಿ ನೀರಿಡಮ್ಮಾ" ಎಂದೋ; "ಭಟ್ಟರೇ, ನೀವು ತೋರಿ ಕೊಡಿ. ಅವಳೇ ಬಡಿಸಲಿ ಶಾಮಣ್ಣನಿಗೆ" ಎಂದೋ; "ಶಾಮಣ್ಣನ ಊಟ ಆಯಿತಲ್ಲ, ತಾಂಬೂಲ ತೆಗೆದುಕೊಂಡು ಹೋಗಿ ಕೊಡಮ್ಮಾ; ನೀನೂ ಹಾಕಿಕೋ" ಎಂದೋ—ಬಗೆಬಗೆಯಲ್ಲಿ ಹೊಸ ಅಳಿಯನಿಗೆ ಮಗಳ ಕೈಲಿ ಉಪಚಾರ ಮಾಡಿಸುವ ರೀತಿಯಲ್ಲಿ ಸುಂದರಮ್ಮನವರು ಮಗನಿಗೆ ಉಪಚಾರ ಮಾಡಿಸತೊಡಗಿದರು. ರತ್ನ ಬೇಸರವನ್ನು ತೋರ್ಪಡಿಸದೆ, ವಿಧೇಯಳಾಗಿ, ಅತ್ತೆ ಹೇಳಿದುದೆಲ್ಲವನ್ನೂ ಚಾಚೂ ತಪ್ಪದೆ ಮಾಡುತ್ತಿದ್ದಳು. ಸುಂದರಮ್ಮನವರೇನೋ ಇದರಿಂದ ಸಂತುಷ್ಟರಾದರು. ಆದರೆ ಅವರ ಪ್ರಯತ್ನವೆಲ್ಲ ಮರಳುಭೂಮಿಯಲ್ಲಿ ಬೇಸಾಯಮಾಡಿದಂತಾಯಿತು;

ಸರ್ಕಸ್ಸಿನಲ್ಲಿ ಮೇಕೆಯನ್ನೂ ಹುಲಿಯನ್ನೂ ಒಂದೇ ತಟ್ಟೆಯಲ್ಲಿ ಹಾಲು ಕುಡಿಯುವಂತೆ ಮಾಡಿದಂತಾಯಿತು.

ರತ್ನ ತನ್ನ ಬಳಿಗೆ ಏನನ್ನೆ ತರಲಿ, "ಇಲ್ಲಿ ಇಡು" ಎಂದು ಹೇಳಿ, ಸುಮ್ಮನಾಗುವನು ಶಾಮಣ್ಣ. ಒಂದು ನಿಮಿಷ ಹೆಚ್ಚಾಗಿ ಮುಂದೆ ನಿಂತಿದ್ದರೆ, "ಇಲ್ಲಿ ಯಾಕೆ ನಿಂತಿದ್ದೀ, ಸುಮ್ಮನೆ ಬೊಂಬೆಯಹಾಗೆ? ನಿನ್ನ ಮುದ್ದು ಮುಖ ನೋಡುತ್ತ ಕುಳಿತಿರುವುದು ಇದ್ದೇ ಇದೆ ಮುಂದೆ. ನಾನು ಯಾವುದೋ 'ಆರ್ಟಿಕಲ್' (ಲೇಖನ) ಬರೆಯುತ್ತಾ ಇದೇನೆ. ಹೀಗಂದೆ ಅಂತ ಕೋಪಿಸಿಕೋಬೇಡ. ನೀನು ಇದ್ದರೆ ನನ್ನ ಬುದ್ಧಿಯೇ ಓಡುವುದಿಲ್ಲ" ಎಂದು ನಿರ್ದಾಕ್ಷಿಣ್ಯವಾಗಿ ನುಡಿದುಬಿಡುವನು.

ಸುಂದರಮ್ಮನವರ ಬಲವಂತಕ್ಕೆ ಕಟ್ಟುಬಿದ್ದು ಒಂದು ದಿನ ರತ್ನ "ಇವೊತ್ತು ಸಿನಿಮಾಕ್ಕೆ ಹೋಗೋಣವೆ?" ಎಂದು ಶಾಮಣ್ಣನನ್ನು ಕೇಳಿದಳು. "ನಾನು ಗಾಯನ ಸಮಾಜಕ್ಕೆ ಹೋಗಬೇಕು ಅಂತ ಇದ್ದೀನಿ. ಬೇಕಾದರೆ ನೀನೂ ಬಾ" ಎಂದು ಅವನು ಉತ್ತರಕೊಟ್ಟ.

"ನನಗೆ ಸಂಗೀತ ಅಷ್ಟು ಹಿಡಿಸುವುದಿಲ್ಲ."

"ನನಗೆ ಸಿನಿಮಾ ಬೇಕಿಲ್ಲ."

"ಚಿತ್ರ ಚೆನ್ನಾಗಿದೆಯಂತೆ. ಹೋಗೋಣ ಅಂತ ಆಸೆ."

"ಕುಸುಮಾ, ಶ್ಯಾಮಲಾ ಯಾರೂ ಹೋಗುವುದಿಲ್ಲವೆ?"

"ಇಲ್ಲ."

"ನಿನಗೆ ಸಿನಿಮಾನೇ ಬೇಕಿದ್ದರೆ, ರಾಜೂನ ಕೇಳಿನೋಡು, ಬಂದರೆ ಅವನ ಜೊತೆ ಹೋಗು."

ರತ್ನ ಸಂಗೀತಕ್ಕೂ ಹೋಗಲಿಲ್ಲ; ಸಿನಿಮಾಕ್ಕೂ ಹೋಗಲಿಲ್ಲ.

ಇನ್ನೊಂದು ದಿನ—

"ನನಗೆ ಮನೆಯಲ್ಲಿ ಬೇಸರವಾಗುತ್ತೆ. ಕಾಲೇಜಿಗೆ ಸೇರಿಕೊಳ್ಳಲೆ?" ಎಂದು ರತ್ನ ಶಾಮಣ್ಣನನ್ನು ಕೇಳಿದಳು.

(ರತ್ನ ಸುಂದರಮ್ಮನವರನ್ನು ಏನು ಕೇಳಿದರೂ ಈಚೆಗೆ "ಶಾಮಣ್ಣನನ್ನು ಕೇಳು" ಎಂದುಬಿಡುತ್ತಿದ್ದರು.)

"ಆಗಲೇ ಆಗಸ್ಟ್ ಮುಗಿಯುತ್ತಾ ಬಂತು. ಈಗ ಎಲ್ಲಿ ಸೇರಿಸಿಕೊಳ್ಳು

ತ್ತಾರ! ಇಷ್ಟಕ್ಕೂ ನೀನು ಬಿ. ಎ. ಮಾಡಿ ಏನಾಗಬೇಕು? ಏನೂ ಬೇಡ."

ಇನ್ನೊಂದು ದಿನ ಶಾಮಣ್ಣನೇ ಕೇಳಿದ:

"ವೀಣೆ ಕಲಿತು ಕೊಳ್ಳುವಹಾಗಿದ್ದರೆ ಕಲಿತುಕೋ ರತ್ನ. ನನ್ನ ಸ್ನೇಹಿತರು ವೀಣೆ ರಂಗಸಾಮಿ ಬಹಳ ಚೆನ್ನಾಗಿ ಹೇಳಿಕೊಡುತ್ತಾರೆ. ಬೇಕಾದರೆ ಗೊತ್ತುಮಾಡಿಕೊಡುತ್ತೀನಿ. ಹೇಗೂ ಮನೆಯಲ್ಲಿ ಬೇಸರ ಅಂದೆಯಲ್ಲ. ವೀಣೆಯಾದರೂ ಕಲಿತರೆ ಅಮ್ಮನ ಮುಂದೆ ಬಾರಿಸುತ್ತಾ ಇದ್ದರೆ ಅವಳ ಬೇಸರವೂ ಕಳೆಯುತ್ತೆ."

"ಒಲ್ಲೆ" ಎಂದು ವೀಣೆಯ ತಂತಿ ಕತ್ತರಿಸಿದಂತೆ ನುಡಿದಳು ರತ್ನ.

ಆಗೊಮ್ಮೆ ಈಗೊಮ್ಮೆ ಹೀಗೆ ಅನಿವಾರ್ಯವಾಗಿ ನಡೆಯುತ್ತ ಇದ್ದ ಗಂಡ ಹೆಂಡಿರ ಮಾತುಕತೆಯನ್ನು ಕಂಡು ಕೇಳಿ ಸುಂದರಮ್ಮನವರೇನೋ ತೃಪ್ತಿಗೊಂಡರು. ಸಾಧ್ಯವಾದರೆ, ಶಾಮಣ್ಣ ಸೀಮೆಗೆ ಹೋಗುವುದರೊಳಗಾಗಿಯೆ ಅವರ ಪ್ರಸ್ತವನ್ನೂ ನೇರವೇರಿಸಬೇಕೆಂದು ನಿಶ್ಚಯಿಸಿದರು.

## ೨೬

ಈಗ ರಾಜು ಸಾಧಾರಣವಾಗಿ ಮನೆಯಲ್ಲಿ ಇರುತ್ತಲೇ ಇರಲಿಲ್ಲ. ಕುಸುಮನ ಸ್ನೇಹಸಂಬಂಧ, ಬೆಳೆಗೆ ಅಡ್ಡಿಯಾದ ಕಳೆಯನ್ನು ಕೀಳುವ ರೀತಿ, ವಿಧಿಯ ಕುಡುಗೋಲಿಗೆ ಬಲಿಯಾಗಿತ್ತು. ತುಂಟ ಧಾಂಡಿಗ ಗೆಳೆಯ ಹುಡುಗ ತನ್ನ ಚಿಕ್ಕ ಏನೂ ಅರಿಯದ ಒಡನಾಡಿಯ ಕೈಗೆ ಮಿಠಾಯಿ ಕೊಟ್ಟು, ಅವನದನ್ನು ಬಾಯಲ್ಲಿ ಹಾಕಿಕೊಳ್ಳಲಿರುವಾಗ ಕಸಿದುಕೊಳ್ಳುವಂತೆ, ವಿಧಿ ರತ್ನನನ್ನು ರಾಜುವಿಗೆ ಇವಳು ನಿನ್ನವಳೆಂದು ತೋರಿಸಿ, ಅದನ್ನು ಶಾಮಣ್ಣನ ಪಾಲುಮಾಡಿತ್ತು. ರಾಜು ಇದು ಏಕೆ ಹೀಗಾಯಿತು ಎಂಬ ವಿಚಾರದ ಗೊಂದಲಕ್ಕೆ ಬೀಳಲಿಲ್ಲ. ಆದರೂ, ತನ್ನದು ದುರದೃಷ್ಟ ಎಂದುಕೊಂಡ. ಬಹುಶಃ ಕುಸುಮನ ಮೇಲಣ ತನ್ನ 'ವ್ಯಾಮೋಹ' ಒಂದು ರೀತಿಯಲ್ಲಿ ಇತ್ಯರ್ಥವಾಗಿ, ಈಗ ರತ್ನನ ಮೇಲಣ 'ವ್ಯಾಮೋಹ'ವೂ ಬೇರೆಯ ರೀತಿಯಲ್ಲಿ 'ಇತ್ಯರ್ಥ'ವಾಗಿರಬಹುದುದಲ್ಲವೆ? ತನ್ನ ನಿಜವಾದ

ನಲ್ಲಿ ಎಲ್ಲೋ ದಿಗಂತದ ಶೂನ್ಯದ ಮರೆಯಲ್ಲಿ ಅಡಗಿರಬಹುದಲ್ಲವೆ? ಕುಸುಮ ತನ್ನ ಕೆಳೆ ಕಳಚಿಕೊಂಡದ್ದರಿಂದ ತನ್ನ ಮನಸ್ಸು ಸುಲಭ್ಯಳಾದ ರತ್ನನ ಕಡೆಗೆ ತಾತ್ಕಾಲಿಕವಾಗಿ ತಿರುಗಿರಬಹುದಲ್ಲವೆ? ರತ್ನನ ಮೇಲಿನದು ನಿಜವಾದ ಪ್ರೀತಿಯಾಗಿರದೆ, ಕ್ಷಣಿಕ ವ್ಯಾಮೋಹವಾಗಿರಬಹುದಲ್ಲವೆ?

ಹೀಗೆ, ರಾಜು ಕಣ್ಣೆದುರಿಗೆಯೆ ಇದ್ದ ರತ್ನನನ್ನು ಮರೆಯಲು, ಮನಸ್ಸಿನಿಂದ ತೊರೆಯಲು, ಪ್ರಯತ್ನಿಸುತ್ತಿದ್ದ.

ಎಷ್ಟು ಬಗೆಯಲ್ಲಿ ತನಗೆ ತಾನೇ ಸಮಾಧಾನ ಹೇಳಿಕೊಂಡರೂ ತನಗಾಗಬೇಕಾಗಿದ್ದ ರತ್ನ ತನ್ನ ಅಣ್ಣನಿಗಾದಳು ಎಂಬ ಭಾವ ಮಾತ್ರ ರಾಜುವಿನ ಮನದಲ್ಲಿ ಬೇರೂರಿತು.

ಮನೆ, ಮನೆಯಲ್ಲಿನ ಧನ—ಇವು ತಂದೆ ಬಿಟ್ಟ ಆಸ್ತಿ; ಇದರಲ್ಲಿ ಇಬ್ಬರಿಗೂ ಹಕ್ಕು ಸಮ.

ಮನೆಯಲ್ಲಿ ಬೆಳೆದ ಹೆಣ್ಣು ರತ್ನ?

ಅವಳು ಮಾತ್ರ ಇಬ್ಬರಿಗೆ ಆಗಳು—ಒಬ್ಬರಿಗೆ ಮಾತ್ರ. ಶಾಮಣ್ಣನಿಗೆ ದಕ್ಕಿದಳು.

ಆಸ್ತಿ ಪಾಲಾದಾಗ ತುಸ ಹೆಚ್ಚು ಕಡಮೆ ಆದರೆ ಅಣ್ಣ ತಮ್ಮಂದಿರಲ್ಲಿ ದಾಯಾದದ ಅಸೂಯೆ ಮೂಡುವಂತೆ, ರತ್ನನ ಸ್ವಾಮ್ಯದ ಬಗ್ಗೆ ರಾಜುವಿನಲ್ಲಿ ತುಸ ಅಸೂಯೆಯ ಛಾಯೆ ಸುಳಿಯಿತು.

ಆದರೆ, ಶಾಮಣ್ಣನ ಮೇಲೆ ಅವನಿಗೆ ಕ್ರೋಧ ಮೂಡಲು ಕಾರಣ ವಿರಲಿಲ್ಲ. ಶಾಮಣ್ಣ ರತ್ನನನ್ನು 'ಕಸಿದು'ಕೊಂಡಿರಲಿಲ್ಲ. ಅವನು ತಾಯ ಬಲವಂತಕ್ಕೆ ಅವಳನ್ನು ಮದುವೆಯಾಗಿದ್ದ, ಅಷ್ಟೆ. ಅವಳು ಅವನವ ಳಾಗಿರುವುದು ತಾಯ ಬಯಕೆ.

ಆದರೆ, ಇದರಿಂದ ಎಂಥ ಅನಿಷ್ಟದ ಪರಿಣಾಮವುಂಟಾಗಿದೆ! ಇದನ್ನು ರಾಜು ಬಲ್ಲನು. ಈಗ ಅವನು ಒಂದು ಸಲವಾದರೂ ರತ್ನ ನೊಂದಿಗೆ ಏಕಾಂತದಲ್ಲಿ ಮಾತನಾಡಿಲ್ಲವಾದರೂ, ಅವಳ ಮನಸ್ಸನ್ನು ಅವನು ಅರಿತುಕೊಳ್ಳಬಲ್ಲವನಾಗಿದ್ದನು. ತಾನು ಇದ್ದ ತುಸ ಹೊತ್ತಿನಲ್ಲಿ ರತ್ನ ಅದು ಹೇಗೆ ಗಂಡನಿಗೆ 'ಶುಷ್ಕ' ಉಪಚಾರ ಮಾಡುತ್ತಿರುವಳೆಂಬುದನ್ನು ಗಮನಿಸುತ್ತಿದ್ದನು.

ರತ್ನ ತನ್ನನ್ನು ಮದುವೆಯಾಗಿದ್ದರೆ ಹೇಗೋ ಹಾಗೆ ಈಗ ಆಸ್ತಿಯ ಅರ್ಧ ಭಾಗಕ್ಕೆ ಅಧಿಕಾರಿಣಿ. ಆದರೆ, ತನ್ನಿಂದ ಅವಳಿಗೆ ದೊರೆಯ ಬಹುದಾಗಿದ್ದ ಸುಖಕ್ಕೂ ಅಧಿಕಾರಿಣಿಯಾಗಿರುವಳೋ ? ಅದಕ್ಕೆ ಅವನಿಗೆ ಮುನ್‌ಸೂಚನೆ ಯಾವುದೂ ಕಂಡುಬರಲಿಲ್ಲ.

ರತ್ನ ಮಾತ್ರವಲ್ಲ, ಯಾವ ಹೆಣ್ಣನ್ನೇ ಆಗಲಿ ಮದುವೆಯಾಗಲು ಶಾಮಣ್ಣನಿಗೆ ಯೋಗ್ಯತೆ ಇಲ್ಲವೆಂದು ಅವನಿಗೆ ಅನ್ನಿಸತೊಡಗಿತು. ಪುಸ್ತಕದ ಕೆಳೆ ಬಿಟ್ಟು ರತ್ನನ ಕೆಳೆ ಬೆಳಸಲು ಅವನು ಯಾವ ಪ್ರಯತ್ನವನ್ನೂ ಮಾಡಿವಂತೆ ಕಂಡುಬರಲಿಲ್ಲ.

* * *

ರಾಜುವಿನ ಎಣಿಕೆ ನೂರಕ್ಕೆ ನೂರರಷ್ಟು ನಿಜವಾಗಿತ್ತಷ್ಟೆ.

ಶಾಮಣ್ಣ 'ಸರಸ್ವತಿ'ಯ ಸೇವೆಯಲ್ಲಿ ಮಗ್ನನಾಗಿದ್ದನೇ ಹೊರತು, ರತ್ನನೊಂದಿಗೆ ಸರಸವಾಡುವುದು ಅವನಿಗೆ ಬೇಕಾಗಿರಲಿಲ್ಲ. ಅದಕ್ಕೆ, ಅವನ ದೃಷ್ಟಿಯಲ್ಲಿ ನ್ಯಾಯವೆಂದು ಕಂಡ ಕಾರಣವೂ ಇದ್ದಿತು.

ಅವನು ಸುಂದರಮ್ಮನವರು ತನ್ನನ್ನು ವಿದೇಶ ವ್ಯಾಸಂಗಕ್ಕೆ ಕಳಿಸಲು ಒಪ್ಪುವರೋ ಇಲ್ಲವೋ ಎಂದು ಎಂದಿನಿಂದಲೂ ಸಂದೇಹ ಪಡುತ್ತಿದ್ದನು. ಆದ್ದರಿಂದ, ಅದು ತಪ್ಪಿದರೆ, ಬೊಂಬಾಯಿ ವಿಶ್ವವಿದ್ಯಾ ನಿಲಯದ ಪಿ ಹೆಚ್. ಡಿ. ಪ್ರಶಸ್ತಿಯನ್ನಾದರೂ ಪಡೆಯಬೇಕೆಂದು ಅವನು ಹಟ ತೊಟ್ಟಿದ್ದನು. ಅದಕ್ಕಾಗಿ ವಿಶ್ವವಿದ್ಯಾನಿಲಯಕ್ಕೆ ಅಪೇಕ್ಷೆ ಪತ್ರ ವನ್ನೂ ಸಲ್ಲಿಸಿ, ಎಂ.ಎ., ತರಗತಿಯಲ್ಲಿ ಓದುವುದರ ಜೊತೆಗೇ ಪಿ ಹೆಚ್. ಡಿ. ಪ್ರಶಸ್ತಿಗೆ ಪ್ರೌಢ ಉಪನ್ಯಾಸವನ್ನು ಬರೆಯುವ ಕಾರ್ಯವನ್ನು ಕೈಗೊಂಡಿ ದ್ದನು. ಈ ಕಾರ್ಯದಲ್ಲಿ ಅವಶ್ಯವಾದ ನಿರ್ದೇಶನವನ್ನೂ ಸಲಹೆ ಸೂಚನೆ ಗಳನ್ನೂ ಕೊಡಲು ಅವನ ಪ್ರೊಫೆಸರವರೂ ಸಮ್ಮತಿಸಿದ್ದರು. ನಿಯಮದ ಪ್ರಕಾರ ಅವಶ್ಯವಾಗಿದ್ದ ಈ ಸಹಾಯ ತನಗೆ ಹೆಚ್ಚು ಶ್ರಮವಿಲ್ಲದೆ ದೊರಕಿದ್ದು ತನ್ನ ಭಾಗ್ಯವೆಂದು ಅವನು ತಿಳಿದಿದ್ದನು. ಈ ವಿಚಾರ ವನ್ನು ಅವನು ತನ್ನ ತಾಯಿಗೂ ಬಹಿರಂಗಪಡಿಸಿರಲಿಲ್ಲ. ಸೀಮೆಗೆ ಹೋಗುವುದಕ್ಕಾಗದೆ ಹಿಂದೆ ಉಳಿದು, ಪ್ರಶಸ್ತಿ ಬಂದ ವೇಳೆಯಲ್ಲಿ—"ನೋಡಮ್ಮಾ, ನೀನು ಇಂಗ್ಲೆಂಡಿಗೆ ಕಳಿಸದೆ ಇದ್ದರೂ ಚಿಂತೆಯಿಲ್ಲ.

ಇಲ್ಲಿನ ಡಿಗ್ರಿಯನ್ನೇ ಪಡೆದಿದ್ದೇನೆ, ನೋಡಮ್ಮಾ" ಎಂದು ತಾಯಿಗೆ ಅನಿರೀಕ್ಷಿತವಾದ ಹಿಗ್ಗು ಮೂಡಿಸಬೇಕೆಂಬುದೇ ಅವನ ಈ ರಹಸ್ಯ ಪಾಲನೆಯ ಸದುದ್ದೇಶ. ಆದರೆ, ಅವನು ರತ್ನನನ್ನು ಮದುವೆಯಾಗ ಬೇಕಾಗಿ ಬಂದಿತು; ತನ್ನ ವಿಧೇಯತೆಗೆ ಬಹುಮಾನವಾಗಿ ಸೀಮೆಗೆ ಹೋಗುವ ಸದವಕಾಶವೂ ಅವನಿಗೆ ಲಭಿಸಿತ್ತು. ರತ್ನನ ಮದುವೆಯಿಂದ ಇನ್ನೇನಿಲ್ಲದಿದ್ದರೂ ಅವನಿಗೆ ಎರಡು ಪ್ರಶಸ್ತಿಗಳು ಲಭಿಸುವ ಅವಕಾಶ ಉಂಟಾಗಿತ್ತು. ಆದರೂ, ಈಗಲೂ, ಅವನಿಗೆ ರತ್ನ ಬೇಕಾಗಿರಲಿಲ್ಲ. ಮುಂದೋ? ಅದನ್ನವನು ಕಾಣ. ಸೀಮೆಗೆ ಹೋಗುವುದರೊಳಗಾಗಿ, ಬೊಂಬಾಯಿ ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪ್ರಶಸ್ತಿಗಾಗಿ ಒಪ್ಪಿಸ ಬೇಕಾಗಿದ್ದ 'ಥೀಸಿಸ್' (Thesis) ಮುಗಿಸಿಯೇ ಬಿಡಬೇಕೆಂದು ದೀಕ್ಷೆ ವಹಿಸಿದ್ದನು. ಈಗಲೂ ಅವನ ಮನದ ಬಯಕೆ ರಹಸ್ಯವೇ. ಅದಕ್ಕಾಗಿ ಹಗಲಿರುಳೂ ವ್ಯಾಸಂಗ. ಮನೆಯ ಒಳಗೆ ಓದು; ಮನೆಯ ಹೊರಗೆ ಪಬ್ಲಿಕ್ ಲೈಬ್ರರಿಯಲ್ಲಿ, ಮಿಥಿಕ್ ಸೊಸೈಟಿಯಲ್ಲಿ, ಓದು. ಈ ಓದಿನ ನಡುವೆ, ಸುಂದರಮ್ಮನವರಿಂದ ಪ್ರೇರಿತಳಾಗಿ 'ಪತಿಸೇವೆ'ಗೆ ಬರುತ್ತಿದ್ದ ಮಡದಿಯೊಂದಿಗೆ ಸರಸ ಸಲ್ಲಾಪಕ್ಕೆ ಅವನಿಗೆ ಒಂದು ಕ್ಷಣವೂ ಬಿಡುವಿಲ್ಲ. ರಾಜುವಿಗೂ ರತ್ನನಿಗೂ ಅವನು 'ಪುಸ್ತಕ ಪಿಶಾಚಿ'ಯಾಗಿ ಕಂಡದ್ದು ಅಚ್ಚರಿಯಲ್ಲ.

* * * *

ನಿತ್ಯದ ಶುಷ್ರೋಪಚಾರದಿಂದ ಬೇಸತ್ತಿದ್ದ ರತ್ನ ಒಂದು ದಿನ ಬೆಳಗ್ಗೆ ಇಲ್ಲದ ಸಲಿಗೆಯನ್ನು ವಹಿಸಿ, ಕಾಫಿ ಕೊಟ್ಟಾದ ಮೇಲೆ, ಅವನ ಪಕ್ಕದಲ್ಲಿಯೇ ಕುಳಿತುಬಿಟ್ಟಳು! ಶಾಮಣ್ಣ ದಂಗುಬಡಿದು ಹೋದ!

"ಇದೇನು ರತ್ನ ಇದು!"

"ಏನೇ? ಏನೂ ಇಲ್ಲ. ಇದು...." ಎಂದು ಎದ್ದು ಹೋಗಿ, ಕೋಣೆಯ ಬಾಗಿಲನ್ನು ಹಾಕಿಕೊಂಡು, ಅದನ್ನೊರಗಿ ಬಿಂಕವನ್ನು ನಟಿಸುತ್ತ ನಿಂತಳು.

"ಅದೇ ನಾನು ಕೇಳಿದ್ದು, ಇದು ಏನೂ ಅಂತ?"

ಬೇಸರ ಮಾತ್ರವಲ್ಲದೆ, ಶಾಮಣ್ಣನನ್ನು ಪರೀಕ್ಷಿಸಬೇಕೆಂಬ

ಬುದ್ಧಿಯೂ ಅವಳಲ್ಲಿ ಹೊಸದಾಗಿ ಮೂಡಿತ್ತು. ಅದು ಅಷ್ಟಾಗಿ ಕುಹಕ ಬುದ್ಧಿ ಎಂದೂ ಹೇಳುವಂತಿರಲಿಲ್ಲ; ಪ್ರಾಮಾಣಿಕವಾದ, ದಿಟ್ಟತನದ, ಪರೀಕ್ಷಾ ಬುದ್ಧಿ. ನಿಜವಾದ ಪ್ರೀತಿಯ ಮಾತು ಹಾಳಾಗಿಹೋಗಲಿ. ಶಾಮಣ್ಣ 'ಗಂಡ'ನಂತೆ ನಡೆದುಕೊಳ್ಳುವ ಸೂಚನೆ ತೋರಿದರೆ ತಾನು ಹೆಂಡತಿಯಂತೆ ನಡೆದುಕೊಳ್ಳಲು ಸಿದ್ಧಳಾಗಿರುವುದಾಗಿ ನಿಶ್ಚಯಿಸಿ ಕೊಂಡಿದ್ದಳು.

ಈ ಮನಸ್ಸ್ಥಿತಿಯಲ್ಲಿ ಅವಳು ಬಾಗಿಲೊರಗಿ ನಿಂತ ಒನಪಿನ ಒಯ್ಯಾರದ ಠೀವಿ ವಿಶ್ವಾಮಿತ್ರನನ್ನು ಒಲಿಸಿಕೊಳ್ಳಬಂದ ಮೇನಕೆಯ ಭಾವಭಂಗಿಗೆ, ಋಷ್ಯಶೃಂಗನನ್ನು ಒಲಿಸಿಕೊಳ್ಳಬಂದ ಶಾಂತಾದೇವಿಯ ಗಾಡಿಗೆ ಯಾವ ವಿಧದಲ್ಲೂ ಕಡಮೆಯಾಗಿರಲಿಲ್ಲ.

ಅವಳ ಮುಖ ರಂಗೇರಿತ್ತು; ತುಟಿಯೂ ಮುಖದ ರಕ್ತಗೆಂಪನ್ನು ಎರವಲು ಪಡೆದು ಇಮ್ಮಡಿಯ ಕೆಂಪಿನಿಂದ ಶೋಭೆವಡೆದಿತ್ತು; ತುಟಿಯ ವಿಕಂಪನ ಕಾತುರತೆಯನ್ನು ಮಿಡಿಯುತ್ತಿತ್ತು. ಹಣೆಯ ಮೇಲಿನ ಬೆವರು ಹನಿಗಳು ಮುಖಪದ್ಮದ ಮೇಲಿನ ಮಂಜುಮಣಿಗಳಂತೆ ಕಂಗೊಳಿ ಸಿದ್ದುವು; ಅಸ್ಖಲಿತವಾದ ನವಯೌವನವನ್ನು ಹೊರಸೂಸಲು ಹಾತೊರೆ ಯುವಂತೆ ಹೊಯ್ದಾಡುತ್ತಿದ್ದ, ತಾವರೆ ಮೊಗ್ಗಿನಂಥ ಎಳೆಯವಾದ ತುಂಬು ಎದೆ ಮುಂದೆ ಹಾಯ್ದರೂ ಹಿಂಜರಿಯುವ ನವೋಢೆಯ ಲಜ್ಜೆ ಯನ್ನು ಬಿಂಬಿಸುತ್ತಿದ್ದವು.

ದಿಟ್ಟೆಯಾಗಿ ಬಂದು ನಿಂತಿದ್ದ ರತ್ನ ತಿರಸ್ಕಾರ ಮಿಶ್ರವಾದ ಕಾಮುಕತೆಯನ್ನು ಸೂಚಿಸುವ ಕೂರ್ನೋಟವನ್ನು ಪತಿಯೆಡೆಗೆ ಎಸೆದು, ಉತ್ತರಗೊಟ್ಟಳು.

"ಏನೂ ಅಂದರೆ, ಅದೋ ನೋಡಿ—ಅತ್ತ ಪುಸ್ತಕ; ಇತ್ತ ನಾನು. ನಿಮಗೆ ಯಾವುದು ಬೇಕು? ಆರಿಸಿಕೊಳ್ಳಿ."

ರತ್ನನ ಪ್ರಶ್ನೆ ಶಾಮಣ್ಣನಿಗೆ ಅರ್ಥವಾಗದಿರಲಿಲ್ಲ. ಗಂಭೀರ ವಾಗಿ ನುಡಿದ ಶಾಮಣ್ಣ:

"ಇದೆಲ್ಲ ಚೆನ್ನಿಲ್ಲ, ರತ್ನ. ಮದುವೆಯಾದಮಾತ್ರಕ್ಕೆ, ....ಹೀಗೆಲ್ಲ ಆಡಬಹುದೆ.... ಎಲ್ಲಕ್ಕೂ ಕಾಲವಿದೆ. ಆ ಕಾಲ ಬರುವವರೆಗೂ

ಕಾಯಬೇಕು........ಸಂಯಮವನ್ನು ಕಲಿತುಕೊಳ್ಳಬೇಕು. ನೀನು ನನ್ನ ಧರ್ಮಪತ್ನಿ, ಸಹಧರ್ಮಚಾರಿಣಿ. ನಾನು ಈಗ ವ್ಯಾಸಂಗಮಾಡುತ್ತಿರುವ ವಿದ್ಯಾರ್ಥಿ. ಅದನ್ನು ನಿರ್ವಿಘ್ನವಾಗಿ ನೆರವೇರಿಸಲು ನೀನು ಸಹಕರಿಸ ಬೇಕು. ಅದು ನಿನ್ನ ಧರ್ಮ........"

"ನೀವು ಹೀಗೆ ಉಪನ್ಯಾಸಮಾಡುತ್ತೀರಿ ಅಂತ ನನಗೆ ಗೊತ್ತು. ನಿಮ್ಮ ವಿದ್ಯಾಭ್ಯಾಸವನ್ನು ನಾಕುಮಾಡಿ ಅನ್ನುತ್ತೀನಿ ನಾನು. ಸಾಕು ಮಾಡಿ."

"ಸಾಧ್ಯವಿಲ್ಲ ರತ್ನ. ಸುಮ್ಮನೆ ಹುಡುಗಾಟಮಾಡಬೇಡ. ನನ್ನ ಮನಸ್ಸು ಈಗ ಯಾವುದೋ ಒಂದು ಗುರಿಯಲ್ಲಿ ನಟ್ಟಿವೆ. ಅದನ್ನು ನಮ್ಮ ತಾಯಿಯೇ ಕದಲಿಸಲಾಗಲಿಲ್ಲ. ಇನ್ನು ನೀನು ಕದಲಿಸಲು ಸಾಧ್ಯವೆ?"

"ನಿಮ್ಮ ತಾಯಿ, ತಾಯಿ, ಅಷ್ಟೆ. ನಾನು ಹಿಂದಿನ ನಿಮಗೆ ಬೇಡದವಳಾಗಿದ್ದ ರತ್ನ ಅಲ್ಲ. ನಿಮ್ಮ ಕೈಹಿಡಿದ ಹೆಂಡತಿ. ಯಾರೂ ಬಯಸದ್ದನ್ನು ನಿಮ್ಮಿಂದ ಬಯಸುವ ಹಕ್ಕು ನನಗೆ ಇದೆ...."

"ಹಕ್ಕಿನ ಜೊತೆಗೆ ಹೊಣೆಯೂ ಇದೆ ರತ್ನ. ರಾಜಕೀಯದಿಂದ ಹಿಡಿದು ಗೃಹಕೃತ್ಯದ ವರೆಗೆ ನಾವು ನಮ್ಮ ಹಕ್ಕನ್ನು ಮುಂದೆ ಇಡುತ್ತೇವೆಯೇ ಹೊರತು ಹೊಣೆಯನ್ನು ಮರೆತುಬಿಡುತ್ತೇವೆ. ನಮ್ಮ ಹೊಣೆಯನ್ನು ನಾವು ನಿರ್ವಹಿಸಿದರೆ, ಕಳಿತ ಹಣ್ಣು ಉದುರುವಂತೆ ಹಕ್ಕು ತಾನಾಗಿ ಸಿದ್ಧಿಸುತ್ತದೆ. ಇನ್ನು ಕೆಲವು ವರ್ಷವಾದರೂ ನನಗೆ ನೀನು ಯಾವ ವಿಧದಲ್ಲೂ ಅಡ್ಡಿಪಡಿಸದೆ ಇರಬೇಕಾದ್ದು ನಿನ್ನ ಹೊಣೆ. ರತ್ನ........"

"ಕೆಲವು **ವರ್ಷ**!"

"ಎರಡು ವರ್ಷ, ಹೆಚ್ಚೆಂದರೆ ಮೂರು ವರ್ಷ"

"**ಮೂರು** ವರ್ಷ! ಮೂರು **ಯುಗ** ಅನ್ನಿ."

"ಹೇಗೆ ಬೇಕಾದರೂ ಭಾವಿಸಿಕೋ. ಇನ್ನು ಇದು ಕಡೆಯ ಸಲ. ನೀನು ಹೀಗೆಲ್ಲಾ 'ಬಜಾರಿ'ಯ ಹಾಗೆ ನಡೆದುಕೊಂಡರೆ, ನನ್ನ ಕೋಣೆಗೆ ಕಾಲಿಡಲೇ ಬೇಡ, ತಿಳಿಯಿತೆ.....ಎಲ್ಲಿ, ಇನ್ನು ಹೊರಡು........" ಎಂದು

ಶಾಮಣ್ಣ ಮೃದುವಾಗಿ ಅವಳನ್ನು ಪಕ್ಕಕ್ಕೆ ಒತ್ತರಿಸಲು ಪ್ರಯತ್ನಿಸಿದ.

"ಊ್ಹೂ ಹ್ಞೂ...."ಎಂದು ರತ್ನ ತನ್ನ ಕೆಂದುಟಿಯಲ್ಲಿ ಹುಸಿ ಬಿಂಕದ ಹೂವರಳಿಸಿದಳು. ಅದರ ಕರೆಯನ್ನು ಶಾಮಣ್ಣ ಗಮನಿಸಿದನೋ ಇಲ್ಲವೋ, ಮತ್ತೊಮ್ಮೆ ಮೃದುವಾಗಿ ಆದರೂ ದೃಢಪ್ರಯತ್ನದಿಂದ ಅವಳನ್ನು ಪಕ್ಕಕ್ಕೆ ಸರಿಸಿ, ಮೆಲ್ಲನೆ ಆಚೆಗೆ ದಬ್ಬಿ, ಕೋಣೆಯ ಕದಗಳನ್ನು ಮುಚ್ಚಿ ಅಗುಣಿ ಹಾಕಿಕೊಂಡ.

ಸುಂದರಮ್ಮನವರು ರತ್ನ ಶಾಮಣ್ಣನ ಕೋಣೆಗೆ ಕಾಫಿ ತೆಗೆದುಕೊಂಡು ಹೋದದ್ದನ್ನು ಬಲ್ಲರು. ಅವನ ಕೋಣೆಯ ಬಾಗಿಲು ಹಾಕಿದ್ದ ಸದ್ದು ತುಸ ಕೇಳಿ, ಜೊತೆಗೆ ಅವರಿಬ್ಬರೂ ಮಾತಾಡಿದ ಧ್ವನಿಯೂ ಅವರಿಗೆ ಕೇಳಿಬಂದಿತು. ಅವರ ಕಣ್ಣು ಕಿವಿ ಇನ್ನೂ ಬಲು ಚುರುಕು.

ಸುಂದರಮ್ಮನವರಿಗೆ ತುಂಬಾ ಹಿಗ್ಗಾಯಿತೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ತಮ್ಮ ಬಹುದಿನದ ಪ್ರಯತ್ನ ಇಂದು ಫಲಿಸಿತೆಂದು ಅವರು ಭಾವಿಸಿದರು, ಹಿಗ್ಗಿನ ಭಾವದಲ್ಲಿಯೇ ಮೆಲ್ಲನೆ ನಡೆದುಬಂದು ಹಜಾರದ ಸೋಫದ ಮೇಲೆ ಶಾಲು ಹೊದೆದು ಮೌನವಾಗಿ ಕುಳಿತರು. ಅವರು ಕುಳಿತ ಎರಡು ಮೂರು ನಿಮಿಷಗಳಾದಮೇಲೆ, ರತ್ನ ಶಾಮಣ್ಣನ ಕೋಣೆಯಿಂದ ಹೊರಕ್ಕೆ ಬಂದಳು.

ಅವಳು ಈಗ ಬರಿಯ ರತ್ನನಲ್ಲ. ತನ್ನ ಇಟ್ಟ ಹೆಸರನ್ನು ಸಾರ್ಥಕ ಮಾಡಿಕೊಂಡಿದ್ದಳು—ಆ ಕ್ಷಣದಲ್ಲಿ. ಹೆಡೆ ತುಳಿಸಿಕೊಂಡ ನಾಗಿಣಿಯಂತೆ ಕೆರಳಿದ್ದಳು. ಅವಳ ಮುಖದಮೇಲೆ ಪ್ರಣಯಭಂಗದ ಮುನಿಸು ಮುದ್ರೆಯೊತ್ತಿತ್ತು.

ಸುಂದರಮ್ಮನವರಿಗೆ ಆ ಕೋಪಮುದ್ರೆಯ ನಿಜವಾದ ಕಾರಣದ ಅರಿವಾಗಲಿಲ್ಲ. ತಮ್ಮ ದಾಂಪತ್ಯದ ಎಳವೆಯ ಕಾಲದ ಅನುಭವದ ಬೆಳಕಿನಲ್ಲಿ ಅದಕ್ಕೆ ಅರ್ಥ ಕಲ್ಪಿಸಿಕೊಂಡರು. ತಮ್ಮ ಪತಿಯೊಂದಿಗೆ ಪ್ರಣಯ ವಿಲಾಸದಲ್ಲಿ ತಾವು ಅದೆಷ್ಟು ದಿನ ಹುಸಿಮುನಿಸು ತಾಳಿರಲಿಲ್ಲ, ಹುಬ್ಬುಗಂಟಿಕ್ಕಿರಲಿಲ್ಲ!

ರತ್ನನ ಮುಖದ ಮೇಲಿನ ಮುನಿಸು ಕೇವಲ ಸಹಜ, ಪ್ರಣಯ ಸೂಚಕ ಎಂದು ಅವರು ಬಗೆದರು; ತೃಪ್ತಿಗೊಂಡರು; ತೃಪ್ತಿ ಸೂಚಕ

ವಾದ ಮಂದಹಾಸವೊಂದು ಅವರ ಬಾಯ ಇಕ್ಕಡೆಯ ಸುಕ್ಕುಗೆರೆಯ ಕೊಂಕನ್ನು ಹೆಚ್ಚು ಕೊಂಕಾಗಿ ಮಾಡಿತು.

ಮುನಿಸು ದುಃಖವಾಗಿ ಮಾರ್ಪಟ್ಟು ಕಂಬನಿಗೆಡೆಗೊಡುವಷ್ಟರಲ್ಲಿ ರತ್ನ ತನ್ನ ಕೋಣೆಯಲ್ಲಿದ್ದಳು. ಧಾರಾಕಾರವಾಗಿ ಕಂಬನಿಯನ್ನು ಸುರಿಸಿ ಯಾದಮೇಲೆ, ಮುಖ ತೊಳೆದುಕೊಳ್ಳಲು ನೀರುಮನೆಗೆ ಹೋದಳು.

## ೨೨

ಶಾಮಣ್ಣ ವಿದೇಶ ಪ್ರಯಾಣದಿಂದ ಹಿಂದಿರುಗಿ ಬರುವವರೆಗೂ ನಿಷೇಕಪ್ರಸ್ತದ ಮಾತು ಎತ್ತುವುದಿಲ್ಲವೆಂದು ಸುಂದರಮ್ಮನವರು ಶಾಮಣ್ಣನಿಗೆ ವಾಗ್ದಾನ ಮಾಡಿದ್ದೇನೋ ದಿಟ. ಆದರೆ, ರತ್ನನ ವಿಚಾರ ದಲ್ಲಿ ಶಾಮಣ್ಣ ಈಗ ಎಂದಿಗಿಂತ ಹೆಚ್ಚು ಸುಪ್ರಸನ್ನನಾಗಿರುವನೆಂದು ಅವರು ಭಾವಿಸಿ, ತಮ್ಮ ಆ ಬಯಕೆಯನ್ನೂ ಈಗಲೇ ಏಕೆ ಈಡೇರಿಸಿ ಕೊಳ್ಳಬಾರದೆಂದು ಅವರು ಬಗೆದರು.

ಅಂತೆಯೇ, ಸುಂದರಮ್ಮನವರು ಹೆಚ್ಚು ವಿಳಂಬಮಾಡದೆ, ಶಾಮಣ್ಣ ಸುಮುಖನಾಗಿದ್ದ ಒಂದು ಹೊತ್ತಿನಲ್ಲಿ ತಮ್ಮ ಮನಸ್ಸನ್ನು ಅವನ ಮುಂದೆ ತೆರೆದಿಟ್ಟರು:

"ಶಾಮಣ್ಣಾ........"

ತಾಯಿ ಹೀಗೆ ರಾಗ ಎಳೆದಾಗಲೇ ಗೊತ್ತು ಶಾಮಣ್ಣನಿಗೆ, ಅವರು ತನ್ನಿಂದ ಏನೋ ಕಾರ್ಯವಾಗಬೇಕೆಂದು ಅಪೇಕ್ಷಿಸುತ್ತಿದ್ದಾರೆ ಎಂದು. ಬಹುಶಃ ಅದು ಅವರಿಗೆ ಪ್ರಿಯವೋ ಅಗತ್ಯವೋ ಆಗಿ ತನಗೆ ಇಷ್ಟವಲ್ಲದ್ದು ಎಂದು. ಏನು ಹೇಳುತ್ತಾರೆಯೋ ಎಂದು ಅವನು ಅವರ ವಾಕ್ಯ ಪೂರಣಕ್ಕಾಗಿ ಕಾದ.

"ಶಾಮಣ್ಣಾ........"

"ಅದೇನಮ್ಮ, ಹೇಳಬಾರದೆ ?"

"ನೀನು ನಡಸುತ್ತೀಯೋ ಇಲ್ಲವೋ ಅಂತ ಸಂದೇಹ...."

"ನಿನಗೆ ಸಂದೇಹವಾಗಿರುವುದರಿಂದಲೇ ಗೊತ್ತು, ಆ ಕಾರ್ಯ ನನಗೆ ಇಷ್ಟವಿಲ್ಲದ್ದು ಅಂತ."

"ಇಷ್ಟವಿಲ್ಲದ್ದು ಅಂತ ಅಲ್ಲ. ನೀನು ಸ್ವಲ್ಪ ಮನಸ್ಸು ಮಾಡಬೇಕು ಅಷ್ಟೆ. ಅಥವಾ ನಿನ್ನ ಮನಸ್ಸನ್ನ ಸ್ವಲ್ಪ ಬದಲಾಯಿಸಬೇಕು ಅಂತ ಬೇಕಾದರೂ ಇಟ್ಟುಕೋ...."

"ಏನು, ನಾನು ಸೀಮೆಗೆ ಹೋಗಬೇಕು ಅಂತಿರುವ ವಿಚಾರ ತಾನೆ?"

"ಅಪ್ಪ, ನಾನು ಮಾತುಕೊಟ್ಟು ಆಗಿಹೋಗಿದೆ. ಅಗತ್ಯವಾಗಿ ಹೋಗಿ ಬಾ. ಎಷ್ಟು ಖರ್ಚಾದರೂ ಚಿಂತೆಯಿಲ್ಲ...."

"ಖರ್ಚಿನದೇನೂ ನೀನು ಯೋಚನೆಮಾಡಬೇಡ, ಅಮ್ಮಾ. ಅಲ್ಲಿ ಹೋಗಿ ಸ್ವಲ್ಪ ನೆಲೆ ನಿಲ್ಲುವವರೆಗೆ. ಅಲ್ಲಿಯೇ ಸಂಪಾದನೆಯ ಮಾರ್ಗವೂ ಇದೆ. ಸಾಧ್ಯವಾದರೆ ನನ್ನ ಅಲ್ಲಿನ ಖರ್ಚನ್ನು ನಾನು ಹುಟ್ಟಿಸಿಕೊಳ್ಳು ತ್ತೇನೆ. ಅದಿಲ್ಲದೆಹೋದರೆ, ಅಮೆರಿಕಾ ವಿಶ್ವವಿದ್ಯಾನಿಲಯಗಳಲ್ಲಿ ಯಾವು ದಾದರೂ ಒಂದರಿಂದ 'ಸ್ಕಾಲರ್‌ಷಿಪ್' ದೊರೆಯುವ ಸಂಭವವೂ ಇದೆ. ಅದು ದೊರೆತರೆ, ವೆಚ್ಚದ ಮಾತೇ ಇಲ್ಲ...."

ಈ ಹೊಸ ಸಮಾಚಾರ ಕೇಳಿ ಸುಂದರಮ್ಮನವರಿಗೂ ಹೆಚ್ಚಿನ ಸಂತೋಷವೇ ಆಯಿತು. ಶಾಮಣ್ಣ ತಮ್ಮ ಕುಲದೀಪಕ ಎಂದು ಭಾವಿಸಿ ದರು.

"ಅದರ ವಿಚಾರ ನನಗೆ ಯೋಚನೆ ಇಲ್ಲವಪ್ಪ. ನಾನು ಮೊದಲೇ ಹೇಳಿದೆನಲ್ಲ, ಇಷ್ಟರಮೇಲೆ ಅದೆಷ್ಟು ಹಣ ಬೇಕಾದರೂ ಖರ್ಚಾಗಲಿ. ನಾನು ಹೇಳಬೇಕು ಅಂತ ಇರುವುದು ಅದಲ್ಲ. ಏನೂ ಅಂದರೆ...."

"ಅದೇನು ಹೇಳಮ್ಮಾ, ಪರವಾಯಿಲ್ಲ."

"ಬಂದಮೇಲೆ ಆಗಲಿ ಅಂತ ಹೇಳಿದ್ದೆ. ಯಾವಾಗ ಆದರೆ ಏನಪ್ಪ? ಮುಂಚೆಯೇ ಆಗಿಹೋಗಲಿ ಅಂತ ನನ್ನ ಇಷ್ಟ...."

"ಏನದು, ಮುಂಚೆಯೇ ಆಗಬೇಕಾದ್ದು?"

ತಮ್ಮ ಮಾತು ಮಗನಿಗೆ ಅರ್ಥವಾಗದ್ದನ್ನು ಕಂಡು ಸುಂದರಮ್ಮ ನವರಿಗೆ ಆಶ್ಚರ್ಯವಾಯಿತು. ಅರ್ಥವಾಗಿದ್ದರೂ ಅದನ್ನು ಅವರ ಬಾಯಿಂದ ಸ್ಪಷ್ಟವಾಗಿ ಹೊರಡಿಸಬೇಕೆಂದು ಶಾಮಣ್ಣನ ಪ್ರಯತ್ನ.

"ಅದೇ ಕಣಪ್ಪ. ನಿನ್ನ ಪ್ರಸ್ತ."

"ಅಮ್ಮ ನನ್ನ ಮನಸ್ಸು ನಿನಗೆ ಇನ್ನೂ ಸಂಪೂರ್ಣವಾಗಿ ಅರ್ಥವಾಗಿಲ್ಲ."

"ನನ್ನ ಮನಸ್ಸು ನಿನಗೆ ಅರ್ಥವಾಗಿಲ್ಲ."

"ನಾನು ಪ್ರಸ್ತಮಾಡಿಕೊಳ್ಳದೆ ಹಾಗೆಯೆ ಹೊರಟು ಹೋದರೆ, ಅಲ್ಲಿನ ವಿದೇಶಿ ಹೆಣ್ಣುಗಳ ಬಲೆಗೆ ಬಿದ್ದುಬಿಡುತ್ತೇನೆ ಅಂತ ನಿನ್ನ ಹೆದರಿಕೆ ಅಲ್ಲವೇನಮ್ಮ?"

"ಆ ಹೆದರಿಕೆಯೂ ಇಲ್ಲದೆ ಇಲ್ಲ ಅಂತ ಇಟ್ಟುಕೋ."

"ನನ್ನನ್ನ ಅದು ಯಾವಳಮ್ಮ ಮೋಹಿಸುತ್ತಾಳೆ" ಎಂದು ಶಾಮಣ್ಣ ಮೆಲ್ಲನೆ ನಕ್ಕ. "ಈ ಮಾತನ್ನೆಲ್ಲಾ ನಿನ್ನೊಂದಿಗೆ ಚರ್ಚೆಮಾಡುವುದು ಚೆನ್ನಾಗಿರುವುದಿಲ್ಲ ಅಮ್ಮ. ಮುಖ್ಯ ಇಷ್ಟು; ನೀನು ಆ ಭಾಗದಲ್ಲಿ ರವೆಯಷ್ಟೂ ಹೆದರಿಕೆ ಇಟ್ಟುಕೊಳ್ಳಬೇಡ. ಯಾವ ಕಾರಣಕ್ಕೋಸ್ಕರ ಪ್ರಸ್ತ ಬೇಡ ಅಂತಿದ್ದೇನೆಯೋ ಆ ಕಾರಣವನ್ನ ಅಲ್ಲಿ ನಾನು ಅಷ್ಟು ಸುಲಭವಾಗಿ ಮರೆತು ಬಿಡುತ್ತೇನೆಯೇ? ಎಂದಿಗೂ ಇಲ್ಲ ಕಣಮ್ಮ. ಹಿಂದಿರುಗಿ ಬಂದ ಮೇಲೆ ನಿನ್ನನ್ನ ಹೇಗೆ ಅಂದರೆ ಹಾಗೆ ಸಂತೋಷಪಡಿಸುತ್ತೇನೆ ಕಣಮ್ಮ. ಅಲ್ಲಿಯವರೆಗೆ...."

"ಅಲ್ಲಿಯವರೆಗೆ ದೇವರು ನನಗೆ ಆಯುಸ್ಸು ಹಾಕಿರಬೇಕಲ್ಲಪ್ಪ. ನೋಡು ಶಾಮಣ್ಣ. ಮುಚ್ಚುಮರೆ ಸಂಕೋಚ ಇಲ್ಲದೆ ಹೇಳಿಬಿಡುತ್ತೇನೆ. ನೀನು ಪ್ರಸ್ತ ಒಂದು ಮಾಡಿಕೊಂಡುಬಿಟ್ಟರೆ, ನೀನು ಹೋಗುವುದ ರೊಳಗೇನೇ ರತ್ನ ಗರ್ಭಿಣಿಯಾದರೂ ಆಗಬಹುದು. ನಾನೂ ಸಾಯುವುದ ರೊಳಗೆ ಮೊಮ್ಮಗುವನ್ನ ಕಣ್ಣಿಂದ ನೋಡಿದ ಹಾಗಾಗುತ್ತೆ."

"ಸಾಯುವ ಮಾತನ್ನೇ ಆಡುತ್ತೀಯಲ್ಲಮ್ಮಾ. ಬದುಕಿರುವ ಮಾತು ಆಡಮ್ಮ. ನಾನು ಹಿಂದಿರುಗಿ ಬರುವವರೆಗೂ ಆಮೇಲೂ ನೀನು ಬದುಕಿರ ಬೇಕು ಅಂತಲೇ ನನ್ನ ಆಸೆ. ನಾನು ಪ್ರಸ್ತಮಾಡಿಕೊಂಡು ನಿನ್ನನ್ನ ಸಾಯಿಸಿ ಹೋಗುವುದಕ್ಕಿಂತ ಪ್ರಸ್ತಮಾಡಿಕೊಳ್ಳದೆ ನಾನು ಹಿಂದಿರುಗಿ ಬರುವವರೆಗಾದರೂ ನಿನ್ನನ್ನ ಉಳಿಸಿಕೊಳ್ಳಬೇಕು ಅಂತ ನನ್ನ ಆಸೆ ಕಣಮ್ಮಾ. ಆದ್ದರಿಂದ, ಈ ಒಂದು ವಿಚಾರದಲ್ಲಿ ಇನ್ನು ನನ್ನನ್ನ

ಬಲವಂತಪಡಿಸಬೇಡ ಕಣಮ್ಮಾ. ನಾನು ಹೇಳುತ್ತಿರುವುದೂ ಎಲ್ಲ ಒಳ್ಳೆಯದಕ್ಕೇ ಹೊರತು ಕೆಟ್ಟದ್ದಕ್ಕೆ ಏನಲ್ಲ. ರತ್ನ ತಾನೇ ಇಷ್ಟು ಚಿಕ್ಕ ವಯಸ್ಸಿನಲ್ಲೇ ಯಾಕೆ ಮಗುವಿನ ತಾಯಾಗಬೇಕು? ಸ್ವಲ್ಪಕಾಲ ಹಾಯಂತ ಇರಲಿ, ಯಾವ ಜವಾಬ್ದಾರೀನೂ ಇಲ್ಲದೆ...."

"ಅದು ಹೇಗಪ್ಪ ಹಾಯಂತ ಇರುತ್ತಾಳೆ? ಅವಳು ಇಲ್ಲಿ, ನೀನು ಅಲ್ಲಿ. ಒಂದು ಮಗುವಾದರೂ ಆದರೆ, ಹಾಯಂತ ಇದ್ದಾಳು. ಎರಡು ವರ್ಷ ಅಲ್ಲದೆ ಹೋದರೆ ಐದು ವರ್ಷ ಬಿಟ್ಟು ಬಾ, ಬೇಡ ಅಂದವರು ಯಾರು."

"ಹಾಯಂತ ನೆಮ್ಮದಿಯಾಗಿರಬೇಕಾದರೆ ಮಗುವೇ ಆಗಬೇಕೆ? ನಾನು ಹೇಳಿದ್ದಕ್ಕೆ 'ಒಲ್ಲೆ' ಎಂದುಬಿಟ್ಟಳು. ನೀನು ಒಂದು ಸಲ ಹೇಳಿ ನೋಡಮ್ಮ. ವೀಣೆ ಕಲಿತುಕೊಳ್ಳಲಿ."

"ಹೆಣ್ಣು ಮಕ್ಕಳು ಮದುವೆಯಾಗುವವರೆಗೆ ಒಂದು ರೀತಿ. ಮದುವೆಯಾದಮೇಲೆ, ಎಂದಿಗೆ ತೊಟ್ಟಿಲು ಕಟ್ಟೇನು ಅನ್ನಿಸಿಬಿಡುತ್ತಪ್ಪ ಅವರಿಗೆ. ಹೆಂಗಸಿಗೆ ತಾಯಾಗುವುದಕ್ಕಿಂತ ಹೆಚ್ಚಿನ ಸುಖ ಸಂಪತ್ತು ಬೇರೆ ಯಾವುದು ಮಗು? ನಿಮ್ಮ ಮನಸ್ಸಿನಲ್ಲಿ ಯಾವಾಗಲೂ ಓದು, ಉದ್ಯೋಗ, ಹೆಸರು ಮಾಡುವುದು, ಹಣ ಗಳಿಸುವುದು ಹೀಗೆ ನಾನಾ ಬಯಕೆಗಳಿರುತ್ತವೆಯಪ್ಪ. ಹೆಣ್ಣಿಗೆ ಮಗುವಿನ ಬಯಕೆ ಒಂದೆ. ಮದುವೆಯಾಗದೆ ಇದ್ದರೆ ಒಂದು ರೀತಿ. ಈಗ ನಿನ್ನನ್ನ ಮದುವೆಯಾಗಿ, ಅದು ಹೇಗಪ್ಪ ಎರಡು ಮೂರು ವರ್ಷ ಅವಳು ನಿನ್ನನ್ನ ಬಿಟ್ಟು ಇರೋದು?........"

ಶಾಮಣ್ಣ ಕೆಲಹೊತ್ತು ಮೌನವಾಗಿದ್ದ. ತಮ್ಮ ಮಾತು ಪರಿಣಾಮಕಾರಿಯಾಗಿದೆ ಎಂದು ಸುಂದರಮ್ಮನವರು ಬಗೆದರು. ನಿಜವಾಗಿ, ತಾಯಿ ಹೇಳುವುದು ಸರಿ ಎಂದು ಅವನಿಗೂ ಅನ್ನಿಸದೇ ಇರಲಿಲ್ಲ. ಆದರೂ, ತನ್ನ ಮೊದಲಿನ ನಿರ್ಧಾರವನ್ನು ಬಿಟ್ಟುಬಿಡಲು ಶಾಮಣ್ಣ ಈಗಲೂ ಸಿದ್ಧನಾಗಿರಲಿಲ್ಲ.

ಅಂತೆಯೇ ಅವನು ನಿರ್ಧರವಾಗಿ ನುಡಿದುಬಿಟ್ಟ:

"ಅಮ್ಮ, ಈ ಒಂದು ವಿಚಾರದಲ್ಲಿ ನನ್ನನ್ನ ಕ್ಷಮಿಸಿಬಿಡಮ್ಮ. ನನ್ನ ವಿದ್ಯಾಭ್ಯಾಸ ಸಂಪೂರ್ಣವಾಗುವವರೆಗೂ ಮದುವೆಯಾಗಿದ್ದರೂ ಬ್ರಹ್ಮಚಾರಿಯಾಗಿಯೇ ಇರಬೇಕು ಅಂತ ಶಪಥಮಾಡಿಬಿಟ್ಟಿದ್ದೇನೆ."

ಮಗನ ಮನಸ್ಸನ್ನು ಮಾರ್ಪಡಿಸಲು ತಮಗೆ ಸಾಧ್ಯವಾಗದೆ ಹೋದದ್ದಕ್ಕಾಗಿ ಸುಂದರಮ್ಮನವರು ತುಂಬಾ ವಿಷಾದಪಟ್ಟರು. ಈಗ ಅವರು ಅವನ ಮನಸ್ಸನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದರು. ಅವನ ಬಗೆಗೆ ವಾತ್ಸಲ್ಯಕ್ಕಿಂತ ಹೆಚ್ಚಾಗಿ ಒಂದು ಬಗೆಯ ಗೌರವಭಾವನೆ ಉಂಟಾಗ ತೊಡಗಿತು.

"ಎಲ್ಲ ಅವರ ಹಾಗೆಯೆ. ದೊಡ್ಡ ತರಹ—ಸ್ವಲ್ಪ ಪ್ರತಿಷ್ಠೆಯೂ ಹೆಚ್ಚು" ಎಂದು ಸುಂದರಮ್ಮನವರು ತಮ್ಮಲ್ಲಿ ತಾವು ಸಮಾಧಾನಗೊಂಡರು.

* * * *

ಸುಂದರಮ್ಮನವರು ಡಾ|| ರಘುರಾಂ ಅವರ ಕೈಲಿ ಶಾಮಣ್ಣನಿಗೆ ಹೇಳಿಸಿದ್ದೂ ಪ್ರಯೋಜನವಾಗಲಿಲ್ಲ. ಅವನು ಹಿಡಿದ ಹಟವನ್ನು ಬಿಡಲೇ ಇಲ್ಲ. ಹಟ ಎಂದು ಇವರ ಮಾತು; ವ್ರತ, ದೀಕ್ಷೆ, ಶಪಥ ಎಂದು ಅವನ ಮಾತು. ಇಷ್ಟೆ ವ್ಯತ್ಯಾಸ.

ಮಗನ ಉತ್ತರದಿಂದ ಸುಂದರಮ್ಮನವರಿಗೆ ಆದ ನಿರಾಶೆ, ಅವನ ಉತ್ತರೋತ್ತರಾಭಿವೃದ್ಧಿಯ ಹೊಂಗನಸಿನಿಂದ ಚೆದರುತ್ತ ಬಂದಿತು. ಎಂದಿನಂತೆ, ಶಾಮಣ್ಣನಿಗೆ ತಂಗಿಯೋ ತಾಯಿಯೋ ಮಾಡಬಹುದಾದಂತಹ ಉಪಚಾರ ರತ್ನನಿಂದ ಯಂತ್ರಿಕವಾಗಿ ಸಲ್ಲುತ್ತಿದ್ದಿತು. ಸುಂದರಮ್ಮನವರು ಇಷ್ಟರಿಂದಲೆ ಸುಪ್ರೀತರಾಗಿದ್ದರು.

ಹೀಗೆ ಎರಡು ಮೂರು ತಿಂಗಳು ಕಳೆಯಿತು. ಸಂತೋಷದ ವರ್ತಮಾನದ ಮೇಲೆ ಸಂತೋಷದ ವರ್ತಮಾನ ಬಂದು, ಶಾಮಣ್ಣನ ಬಗೆಗೆ ಸುಂದರಮ್ಮನವರು ತಳೆದ ಹೆಮ್ಮೆಗೆ ಕೋಡು ಮೂಡಿತು. ಒಂದು ಕಡೆ, ಬೊಂಬಾಯಿ ವಿಶ್ವವಿದ್ಯಾನಿಲಯದಿಂದ ಶಾಮಣ್ಣನಿಗೆ 'ಡಾಕ್ಟರೆಟ್' ಪ್ರಶಸ್ತಿ ಲಭಿಸಿತು; ಅತ್ತ, ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಶಾಮಣ್ಣನಂಥ ಮೇಧಾವಿಗಳು ಹೋಗಿ ಅರ್ಥಶಾಸ್ತ್ರದಲ್ಲಿ ಪ್ರೌಢವ್ಯಾಸಂಗಮಾಡಬೇಕೆಂಬ ಅವನ ಪ್ರೊಫೆಸರ ಶಿಫಾರಸ್ಸಿಗೆ ಬೆಲೆ ಬಂದು, ಭಾರತ ಸರ್ಕಾರದ ವಿದ್ಯಾರ್ಥಿವೇತನವೂ ಲಭಿಸಿತ್ತು.

ಈಗ ಶಾಮಣ್ಣ ಬರಿಯ ಶಾಮಣ್ಣನಲ್ಲ, ಡಾ||ಶಾಮಣ್ಣ. ಇಂಗ್ಲೆಂಡಿಗೆ ತೆರಳಲಿದ್ದವನು ಡಾ||ಶ್ಯಾಮ್.

ಅಣ್ಣನ ಏಳಿಗೆ ಕಂಡು ರಾಜುವಿಗೆ ತುಸ ಕರುಬು; ಯಾವುದಾದರೂ ಕ್ಷೇತ್ರದಲ್ಲಿ ತಾನೂ ಅವನ ಹಾಗೆಯೇ ಪ್ರೌಢನಾಗಿ ಪ್ರತಿಷ್ಠೆ ಗಳಿಸ ಬೇಕೆಂದು ಸಹಜವಾದ ಕರುಬು. ಅವನ ಬಗೆಗೆ ಹೊಳೆದದ್ದು ಒಂದೇ ದಾರಿ: ಇಂದಲ್ಲ ನಾಳೆ ಬೊಂಬಾಯಿಗೆ ಹೋಗಿ ಸಿನಿಮಾ ನಟನಾಗಬೇಕೆಂದು.

ಪತಿಯ ಪ್ರಶಸ್ತಿಲಾಭದಿಂದ ರತ್ನನಿಗೆ ಅಂತಹ ಹಿಗ್ಗೇನೂ ಇಲ್ಲ. ಅವನು ಕೀರ್ತಿಶಿಖರದ ಮೇಲುಮೇಲಕ್ಕೆ ಹೋದಷ್ಟೂ ತಾನು ಅವನಿಂದ ದೂರ ಎಂದು ಅವಳ ಭಾವನೆ.

ರಾಜುವನ್ನು ಮದುವೆಯಾಗಿದ್ದರೆ ಅವಳು ಎಷ್ಟು ಹಿಗ್ಗುತ್ತಿದ್ದಳೋ ಅಷ್ಟು ಹಿಗ್ಗು ಶಾಮಣ್ಣನ ಕೈಹಿಡಿದು ಅವಳಿಗೆ ಉಂಟಾಗಲಿಲ್ಲ. 'ಪಾಲಿಗೆ ಬಂದದ್ದು ಪಂಚಾಮೃತ' ಎಂಬ ಸೂಕ್ತಿಯನ್ನು ಅವಳು ಕೇಳಿ ಬಲ್ಲಳು. ಅದರಂತೆ ಮನಸ್ಸನ್ನು ಹದಕ್ಕೆ ತಂದುಕೊಳ್ಳಲು ಪ್ರಯತ್ನಿಸುತ್ತಲೂ ಇದ್ದಳು.

ಆದರೆ, ಆ ಪಂಚಾಮೃತವೂ ತನ್ನ ಪಾಲಿಗೆ ಇಲ್ಲದಾಗುವುದೇನೋ ಎಂಬ ಶಂಕೆಯೂ ಅವಳಲ್ಲಿ ಮೂಡಿತು. ತನ್ನ ಪಾಲಿಗೆ ಬರುವುದಾದರೂ ಎಂದು? ಇನ್ನೂ ಎರಡು ಮೂರು ವರ್ಷ.

* * * *

ಕಡಲ ಮೂಲಕ ಪ್ರಯಾಣಕ್ಕೆ 'ಪ್ಯಾಸ್‌ಪೋರ್ಟ್' ಬೇಗನೇ ಲಭಿಸಿತು. ಅಷ್ಟರೊಳಗೆಯೇ ಶಾಮಣ್ಣ ಇಷ್ಟವಿಲ್ಲವೆ ತನ್ನ ದೇಶೀಯ ಮಾದರಿಯ ಉಡುಪನ್ನು ತ್ಯಜಿಸಿ ಕಂಟೋನ್‌ಮೆಂಟಿನಲ್ಲಿ ನಾಲ್ಕಾರು 'ಸೂಟು' ಗಳನ್ನು ಹೊಲಿಸಬೇಕಾಯಿತು; ಹೊಸ ಉಡುಪಿನಲ್ಲಿ 'ಪ್ಯಾಸ್ ಪೋರ್ಟ್' ಅವಶ್ಯಕತೆಗಾಗಿ ಫೋಟೋ ತೆಗೆಸಿಕೊಳ್ಳಬೇಕಾಯಿತು.

ಫೋಟೋ ಚಿತ್ರದಲ್ಲಿ ಶಾಮಣ್ಣ ರಾಜುವಿನಷ್ಟೆ ಸುಂದರನಾಗಿ ಕಾಣುತ್ತಾನೆ ಎಂದು ಸುಂದರಮ್ಮನವರು ಹೊಸದಾಗಿ ಕಂಡುಕೊಂಡು, ಸಮಾಧಾನಗೊಂಡರು.

ಶಾಮಣ್ಣ ವಿದೇಶ ಪ್ರಯಾಣಮಾಡುವ ಸಂಗತಿ ಸ್ಥಳೀಯ ಪತ್ರಿಕೆ ಗಳಲ್ಲಿಯೂ ಪ್ರಕಟವಾಯಿತು. ಪತ್ರಿಕೆಗಳವರ ಒತ್ತಾಯಕ್ಕೆ ಶಾಮಣ್ಣ ತನ್ನ ಫೋಟೋ ಪ್ರತಿಗಳನ್ನು ಮಾಡಿಸಿ ಅವರಿಗೆ ಕೊಡಬೇಕಾಯಿತು.

ಶಾಮಣ್ಣನಿಗೆ ಇಷ್ಟವಿಲ್ಲದಿದ್ದರೂ, ಸುಂದರಮ್ಮನವರ ಬಲವಂತಕ್ಕೆ ಮನೆಯಲ್ಲಿ ಒಂದು ಔತಣ ಕೂಟ ಏರ್ಪಾಡಾಯಿತು. ಡಾ|| ರಘುರಾಂ ತಮ್ಮ ಮನೆಯಲ್ಲಿಯೂ ಒಂದು ಔತಣ ಕೂಟ ಏರ್ಪಡಿಸಿ ಡಾ|| ಶಾಮಣ್ಣನನ್ನು ಸತ್ಕರಿಸಿದರು.

ಬೊಂಬಾಯಿನವರೆಗೆ ಡಾ|| ರಘುರಾಂ, ರಾಜು, ರತ್ನ ಶಾಮಣ್ಣನ ಜೊತೆಯಲ್ಲಿ ಹೋಗಿ ಅವನನ್ನು ಬೀಳ್ಕೊಡಬೇಕೆಂದು ಸುಂದರಮ್ಮನವರ ಇಷ್ಟ. ಆದರೆ, ತಮ್ಮನ್ನೇ ನಂಬಿರುವ ಗಿರಾಕಿಗಳನ್ನು ಬಿಟ್ಟು ಹೋಗಲು ಸಾಧ್ಯವಾಗದೆಂದು ಡಾ|| ರಘುರಾಂ ವಿಷಾದಿಸಿದರು.

ರತ್ನ ಜೊತೆಗೆ ಬರುವುದು ಬೇಡ ಎಂದು ಶಾಮಣ್ಣನೇ ಹೇಳಿಬಿಟ್ಟ; ರಾಜು ಮಾತ್ರ ಜೊತೆಗೆ ಬರಲಿ, ನೆರವಿಗೆ ಬೇಕು ಎಂದು ಒಪ್ಪಿಕೊಂಡ.

ಹಿಂದಿರುಗುವಾಗ, ತಾನು ರತ್ನ ಒಟ್ಟಿಗೆ ಬರಬೇಕಾಗುತ್ತದೆ, ಇದು ಶಾಮಣ್ಣನಿಗೆ ಇಷ್ಟವಿಲ್ಲ ಎಂದು ಅವನ ಮಾತಿಗೆ ರಾಜು ಇಲ್ಲದ ಅರ್ಥವನ್ನು ಕಲ್ಪಿಸಿಕೊಂಡ. ಆದರೆ, ತಾನು ಹೋಗಲು ಸಂತೋಷದಿಂದ ಒಪ್ಪಿಕೊಂಡ. ತನ್ನ ಚಲನಚಿತ್ರ ಜೀವನದ ಕಾರ್ಯಕ್ಷೇತ್ರವನ್ನು ಒಮ್ಮೆ ಸಂದರ್ಶಿಸಿ ಬರುವ ಸುಲಭಾವಕಾಶವನ್ನು ಅವನು ಬಿಟ್ಟಾನೆ?

* * *

ಪ್ರಯಾಣದ ದಿನವೂ ಬಂದಿತು. ರಾತ್ರಿಯ ರೈಲಿಗೆ ಹೋಗುವುದಾದ್ದರಿಂದ, ಡಾ|| ರಘುರಾಂ ಸ್ಟೇಷನ್ನಿಗೆ ಹೋಗಿ ಬೀಳ್ಕೊಂಡು ಬರಲು ಮುಂದಾಗಿದ್ದರು. ಅಂದು ರಾತ್ರಿಯೂ ಸುಂದರಮ್ಮನವರ ಮನೆಯಲ್ಲಿ ಸಣ್ಣ ಔತಣ. ಡಾ|| ರಘುರಾಂ ಒಬ್ಬರೇ ಅತಿಥಿ.

ಅಣ್ಣನ 'ಸೂಟ್ ಕೇಸು'ಗಳನ್ನೂ, 'ಬೆಡಿಂಗ'ನ್ನೂ (ಹಾಸಿಗೆ) ರಾಜು ಜಟಕಾಗಾಡಿಯಲ್ಲಿ ಮುಂದಾಗಿಯೇ ರೈಲ್ವೆ ಸ್ಟೇಷನ್ನಿಗೆ ತೆಗೆದುಕೊಂಡು ಹೋದ. ಶಾಮಣ್ಣ ಡಾ|| ರಘುರಾಂ ಅವರ ಕಾರಿನಲ್ಲಿ ಆರಾಮವಾಗಿ ಹೋಗುವುದು ಎಷ್ಟೋ ಅಷ್ಟೇ ಉಳಿದಿದ್ದುದು.

ಹೋಗುವ ಮುನ್ನ, ಸುಂದರಮ್ಮನವರ ಸೂಚನೆಯಂತೆ ಶಾಮಣ್ಣ ದೇವರ ಮನೆಗೆ ಹೋಗಿ ದೇವರಿಗೆ ನಮಸ್ಕಾರ ಮಾಡಿದ; ಅನಂತರ ಪುಷ್ಪ ಮಾಲಿಕೆಯಿಂದ ಅಲಂಕೃತವಾದ ತನ್ನ ತಂದೆಯ ಭಾವಚಿತ್ರಕ್ಕೆ ತಲೆ

ಬಾಗಿದ; ತನ್ನ ತಾಯಿಯ ಕಾಲು ಮುಟ್ಟಿ ನಮಸ್ಕಾರ ಮಾಡಿದ. ಅವರ ಕಣ್ಣಲ್ಲಿ ಉಕ್ಕಿದ ಕಂಬನಿ ಅವನ ತಲೆಯ ಮೇಲೆ ಮುತ್ತಿನ ಸೇಸೆಯಂತೆ ಉದುರಿದುವು; ಅವನ ಕಂಬನಿ ತಾಯಿಗೆ ಪಾದ್ಯವಾಯಿತು.

ಶಾಮಣ್ಣನಿಗೆ ತನ್ನ ಕೋಣೆಯಲ್ಲಿ ಕೆಲಸವೇನೂ ಇರಲಿಲ್ಲ. ಆದರೂ, ತನ್ನ ಕೋಣೆಯನ್ನು ಬೀಳ್ಕೊಳ್ಳಲು ಅವನು ಅದನ್ನು ಪ್ರವೇಶಿಸಿ, ಸುತ್ತ ಕಣ್ಣಾಡಿಸುತ್ತ ನಿಂತ.

ಈ ಸಮಯವನ್ನೇ ಸುಂದರಮ್ಮನವರು ನಿರೀಕ್ಷಿಸುತ್ತಿದ್ದರು:

"ಈ ತಾಂಬೂಲದ ತಟ್ಟೆ ತೆಗೆದುಕೋ ತಾಯಿ. ಶಾಮೂಗೆ ತಾಂಬೂಲ ಕೊಟ್ಟು, ಅವನಿಗೆ ನಮಸ್ಕಾರ ಮಾಡಿ ಬಾರಮ್ಮಾ" ಎಂದು ಬಳಿಯಲ್ಲೇ ಇದ್ದ ರತ್ನನಿಗೆ ಅವರು ಒಲವಿನ ಆದೇಶವಿತ್ತರು.

ಸುಂದರಮ್ಮನವರ ಸೂಕ್ಷ್ಮಮತಿಯನ್ನು ಅಲ್ಲಿಯೇ ಇದ್ದ ಡಾ|| ರಘುರಾಂ ಮೆಚ್ಚಿಕೊಂಡರು.

ರತ್ನ ವಿಧೇಯಳಾಗಿ ತಾಂಬೂಲದ ತಟ್ಟೆಯನ್ನು ತೆಗೆದುಕೊಂಡು ಕೋಣೆಯೊಳಕ್ಕೆ ಹೋಗಿ, ಮೇಜಿನ ಬಳಿ ನಿಂತಿದ್ದ ಶಾಮಣ್ಣನನ್ನು ಸಮೀಪಿಸಿದಳು.

ಒಂದು ನಿಮಿಷವಾಯಿತು; ಎರಡು ನಿಮಿಷವಾಯಿತು. ಸುಂದರಮ್ಮನವರು ನಿರೀಕ್ಷಿಸಿದಂತೆ ನಡೆಯಲಿಲ್ಲ; ಆ ನಿರೀಕ್ಷೆಯಲ್ಲಿ ರತ್ನನೂ ಪಾಲುಗೊಂಡಿದ್ದಳು.

ಶಾಮಣ್ಣ ಕೋಣೆಯ ಬಾಗಿಲನ್ನು ಹಾಕಿಕೊಳ್ಳಲೇ ಇಲ್ಲ!

ಸುಂದರಮ್ಮನವರು ಡಾಕ್ಟರ ಮುಖವನ್ನು ನೋಡಿದರು; ಡಾಕ್ಟರ್ ಅವರ ಮುಖವನ್ನು ನೋಡಿದರು.

ಇಬ್ಬರೂ ಸುಮ್ಮನಿದ್ದರು. ಸುಮ್ಮನಿರದೆ ಬೇರೆಯ ದಾರಿ ವಿಹಿತವಾಗಿ ಕಾಣಲಿಲ್ಲ. ತಾವೇ ಹೋಗಿ ಬಾಗಿಲು ಹಾಕಿಕೊಳ್ಳುವುದೆ?

ಶಾಮಣ್ಣನಿಗಾಗಲಿ ರತ್ನನಿಗಾಗಲಿ ಅಷ್ಟು ಹೊಳೆಯಬೇಡವೆ? ಇದೆಂತಹ ನವದಂಪತಿಗಳು!

ಡಾಕ್ಟರಿಗೂ ಸುಂದರಮ್ಮನವರಿಗೂ ಅಚ್ಚರಿಯಾಯಿತು; ಅರ್ಥವೂ ಆಗಲಿಲ್ಲ.

ಕೋಣೆಯಲ್ಲಿಯೂ ಇಬ್ಬರೂ ಸುಮ್ಮನಿದ್ದರು.

ಕಡೆಗೆ ರತ್ನನೇ ಬಾಯಿ ಬಿಟ್ಟಳು :

"ತಾಂಬೂಲ ತೆಗೆದುಕೊಳ್ಳಿ."

"ನಾನು ತಾಂಬೂಲ ಎಂದು ಹಾಕಿಕೊಂಡಿದ್ದೇನೆಯೆ? ನಿನಗೆ ಗೊತ್ತಿಲ್ಲವೆ?"

"ಅಮ್ಮ ಕೊಟ್ಟು ಬಾ ಅಂದರು."

"ಹಾಗಿದ್ದರೆ ಸರಿ" ಎಂದು ಶಾಮಣ್ಣ ರತ್ನ ನೀಡಿದ ತಾಂಬೂಲವನ್ನು ಸ್ವೀಕರಿಸಿದಂತೆ ಮಾಡಿ, ಅದನ್ನು ಮೇಜಿನಮೇಲೆ ಇರಿಸಿದ.

"ಆಯಿತು. ಆಮೇಲೆ?" ಎಂದು ಮುಗುಳುನಗೆ ಬೀರುತ್ತ ಕೇಳಿದ ಶಾಮಣ್ಣ.

"ನಿಮಗೆ ನಮಸ್ಕಾರ ಮಾಡಬೇಕಂತೆ...."

"ಮಾಡು, ಸಂತೋಷ. ನೆಟ್ಟಗೆ ನಿಂತಿದ್ದೇನೆ."

ರತ್ನ ಯಾಂತ್ರಿಕವಾಗಿ ಅವನ ಕಾಲುಮುಟ್ಟಿ ನಮಸ್ಕಾರ ಮಾಡಿದಳು.

"ಆಯಿತು. ಆಮೇಲೆ ?"

"ಆಮೇಲೆ ಏನು ಅನ್ನುವುದನ್ನ ಹೇಳಿಕೊಡಲಿಲ್ಲ. ನಾನೇನು ಮಗುವೇ ?" ಎಂದು ರತ್ನ ಅಲ್ಲಿ ನಿಲ್ಲದೆ ಸರ್ರನೆ ಹಿಂದಿರುಗಿದಳು. ಆ ರಭಸದಲ್ಲಿಯೆ ರೂಪುಗೊಳ್ಳುತ್ತಿತ್ತು ಅವಳ ಮುನಿಸು.

ಸುಂದರಮ್ಮನವರಿಗೆ ನಿರಾಶೆಯಾಯಿತು.

ಸುಂದರಮ್ಮನವರ ಬಲವಂತಕ್ಕೆ, ರತ್ನನೂ ಡಾಕ್ಟರ ಕಾರಿನಲ್ಲಿ ರೈಲ್ವೆಸ್ಟೇಷನ್ನಿಗೆ ಹೊರಟಳು.

ರೈಲ್ವೆ ಸ್ಟೇಷನ್ನಿನಲ್ಲಿ ಶಾಮಣ್ಣನ ಗೆಳೆಯರು ಕೆಲವರು ಅವನನ್ನು ಬೀಳ್ಕೊಳ್ಳಲು ಬಂದಿದ್ದರು. ರೈಲು ಹೊರಡುವ ಮುನ್ನ ಅವರೆಲ್ಲರೂ ಶಾಮಣ್ಣನಿಗೆ ಹೂವಿನ ಹಾರ ಹಾಕಿದರು. ಡಾ|| ರಘುರಾಂ ಅವರು ಎರಡು ಹೂವಿನ ಹಾರಗಳನ್ನು ತಂದಿದ್ದರು: ಒಂದನ್ನು ತಾವು ಹಾಕಿದರು; ಇನ್ನೊಂದನ್ನು ರಾಜುವಿನ ಕೈಲಿ ಹಾಕಿಸಿದರು.

ರತ್ನ ಸಂದರ್ಭೋಚಿತವಾಗಿ ವರ್ತಿಸಿದಳು; ಸುಪ್ರಸನ್ನಳಾಗಿದ್ದಳು; ರೈಲುಗಾಡಿ ಹೊರಡುವವರೆಗೂ ಶಾಮಣ್ಣನೊಂದಿಗೆ ಗಾಡಿಯಲ್ಲಿಯೇ

ಕುಳಿತಿದ್ದಳು.

ಕಟ್ಟಕಡೆಯಲ್ಲಿ ಬೀಳ್ಕೊಂಡು ರೈಲುಗಾಡಿಯನ್ನು ಇಳಿಯುವಾಗ. "ಇಂಗ್ಲೆಂಡು ತಲಪಿದ ಮೇಲೆ ಬರೆಯುತ್ತೀರಿ ತಾನೆ?" ಎಂದು ಕೇಳಿದಳು.

"ಬರೆಯದೆ ಉಂಟೆ?" ಎಂದು ಶಾಮಣ್ಣ ಹೇಳಿದ.

ರೈಲು ಇಳಿಯುವಾಗ ರತ್ನನ ಸೀರೆಯ ಸೆರಗು ಬಾಗಿಲ ಹಿಡಿಗೆ ಸಿಲುಕಿಕೊಂಡಿತು. ಅವಳು ಕೆಳಕ್ಕೆ ಇಳಿದ ಮೇಲೂ ಸಿಕ್ಕಿಕೊಂಡೇ ಇದ್ದಿತು.

"ನೋಡು, ಸೆರಗು ಸಿಕ್ಕಿಕೊಂಡಿದೆ, ಬಿಡಿಸಿಕೊ" ಎಂದು ಒಳಗಿನಿಂದಲೇ ನುಡಿದ ಶಾಮಣ್ಣ.

ಇನ್ನೂ ಒಳಗೇ ಇದ್ದ ರಾಜು ಬಾಗಿಲ ಬಳಿಗೆ ಬಂದು, ಅತ್ತಿಗೆಯ ಸೆರಗನ್ನು ಬಿಡಿಸಿದ.

ಎಂಜಿನ್ ಕೂಗಿತು; ಗಂಟೆ ಬಾಜಿಸಿತು; ರೈಲುಗಾಡಿ ಚಲಿಸಿತು.

ರಾಜು ಕೆಳಕ್ಕೆ ಹಾರಿದ; ಡಾಕ್ಟರ್ ಮತ್ತು ರತ್ನ ಇವರ ಜೊತೆಗೂಡಿದ.

ಮೂವರೂ ಮನೆಗೆ ಹಿಂದಿರುಗಿದರು. ಡಾಕ್ಟರು ಸುಂದರಮ್ಮನವರಿಗೆ ವೈಭವದ ಬೀಳ್ಕೊಡುವ ದೃಶ್ಯವನ್ನು ವರ್ಣಿಸಿದರು. ಸುಂದರಮ್ಮನವರಿಗೆ ಸಂತೋಷವಾಯಿತು.

"ತಲಪಿದ ಮೇಲೆ ಕಾಗದ ಬರಿ ಅಂತ ಹೇಳುವುದು ಮರೆತೇ ಹೋಯಿತು" ಎಂದು ಸುಂದರಮ್ಮನವರು ವ್ಯಸನಪಟ್ಟರು.

"ರತ್ನ ನೆನಪು ಕೊಟ್ಟಳು" ಎಂದು ರಾಜು ಹೇಳಿದ.

"ಹಾಗಿದ್ದ ಮೇಲೆ ಸರಿ" ಎಂದು ಸುಂದರಮ್ಮನವರು ಸಮಾಧಾನದ ನಿಟ್ಟುಸಿರು ಬಿಟ್ಟರು.

* * * *

ಮಗನ ವಿದೇಶ ಪ್ರಯಾಣ, ಅವನಿಗೆ ಇಲ್ಲಿಯೇ 'ಡಾಕ್ಟರ್' ಪ್ರಶಸ್ತಿ ಲಭಿಸಿದ್ದು—ಇವೆಲ್ಲ ಸುಂದರಮ್ಮನವರ ಅತಿಶಯ ಸಂತೋಷಕ್ಕೆ ಕಾರಣವಾಗಿ, ಅವರು ಹತ್ತು ಹದಿನೈದು ದಿನ ಅಸ್ವಸ್ಥರಾಗಿ ಹಾಸಿಗೆ ಹಿಡಿಯಬೇಕಾಯಿತು. ಮಗನನ್ನು ದೀರ್ಘಕಾಲ ಅಗಲಿರಬೇಕೆಂಬ ಚಿಂತೆಯೂ

ಅವರನ್ನು ಕಾಡದೆ ಇರಲಿಲ್ಲ. ಎರಡು ವಾರದ ಕಾಲದ ಚಿಕಿತ್ಸೆ, ಸಂಪೂರ್ಣ ವಿಶ್ರಾಂತಿ ಇವುಗಳಿಂದಾಗಿ ಮತ್ತೆ ಗುಣಮುಖಕ್ಕೆ ಬಂದರು.

*　　*　　*

ತಿಂಗಳಾದ ಮೇಲೆ, ಶಾಮಣ್ಣನಿಂದ ಎರಡು ಕಾಗದಗಳು ಬಂದುವು: ಒಂದು ಡಾ|| ರಘುರಾಂ ಅವರಿಗೆ; ಅವರ ಷಾಪಿನ ವಿಳಾಸಕ್ಕೆ. ಇನ್ನೊಂದು ಮನೆಯ ವಿಳಾಸಕ್ಕೆ, ಸುಂದರಮ್ಮನವರ ಹೆಸರಿಗೆ.

'ಏರ್‌ಮೇಲ್ ಲೆಟರ್' ನೋಡಿಯೇ ಅದು ಶಾಮಣ್ಣನದೆಂದು ರಾಜು ತಿಳಿದ; ತೆಗೆದುಕೊಂಡು ಹೋಗಿ ತಾಯಿಯ ವಶಕ್ಕೆ ಕೊಟ್ಟ; ಶಾಮಣ್ಣನ ಕಾಗದ ಎಂದು ತಿಳಿಸಿದ.

ಸಂತೋಷದಿಂದ ನಡುಗುವ ಕೈಲಿ ಸುಂದರಮ್ಮನವರು ಕಾಗದವನ್ನು ಈಸಿಕೊಂಡರು. ಅದನ್ನು ಮುಟ್ಟಿ ಮುಟ್ಟಿ ನೋಡಿದ ಸುಖವನ್ನು ಅನುಭವಿಸಿಯಾದ ಮೇಲೆ, "ಇದನ್ನ ತಗೊಂಡು ರತ್ನನಿಗೆ ಕೊಡಪ್ಪ. ನನಗೆ ಯಾಕೆ?" ಎಂದರು.

"ಇಲ್ಲ, ನಿನ್ನ ಹೆಸರಿಗೆ ಬಂದಿದೆ."

"ನನ್ನ ಹೆಸರಿಗೆ ಬಂದರೇನು? ಅವಳಿಗೇ ಬರೆದಿರುತ್ತಾನೆ. ಅವಳ ಕೈಗೆ ಕೊಡು" ಎಂದರು.

ರಾಜು ವಿಧೇಯನಾಗಿ ರತ್ನನ ಕೋಣೆಗೆ ಹೋಗಿ ಅದನ್ನು ಅವಳ ಮುಂದೆ ಹಾಕಿ ದೂರ ನಿಂತ. ಆಗ ಅವಳು ಹೊರಗಾಗಿದ್ದಳು.

ರತ್ನ ಆತುರದಿಂದ ಕಾಗದವನ್ನು ಕೈಗೆ ತೆಗೆದುಕೊಂಡಳು. ತನ್ನ ಹೆಸರಲ್ಲ; ಅವಳಿಗೆ ನಿರಾಶೆಯಾಯಿತು.

"ಕಾಗದ ನನಗೆ ಬರೆದಿಲ್ಲ, ರಾಜು. ಅಮ್ಮನಿಗೆ" ಅವಳ ಮುಖದಲ್ಲಿ ಅಸಮಾಧಾನ ಅಚ್ಚೊತ್ತಿತ್ತು.

"ನೀನೇ ಒಡೆದು ಓದಿಕೊಳ್ಳಬೇಕಂತೆ. ನಿನಗೇ ಇರಬಹುದು ಅಂದರು."

"ಹಾಗೋ, ನೋಡೋಣ" ಎಂದು ರತ್ನ ಕವರನ್ನು ಒಡೆದಳು.

"ಮಾತೃಶ್ರೀಯವರ ಚರಣ ಸನ್ನಿಧಾನಗಳಲ್ಲಿ ಬಾಲಕನ ಸಾಷ್ಟಾಂಗ ಪೂರ್ವಕ ನಮಸ್ಕಾರಗಳು....ಇತ್ಯಾದಿ ಇತ್ಯಾದಿ...."

ಮುಂದಕ್ಕೆ ಓದಲಿಲ್ಲ. ಉದ್ದಕ್ಕೂ ಕಣ್ಣನ್ನು ಮಾತ್ರ ಹಾಯಿಸಿದಳು. ಪ್ರಯಾಣದ ವಿವರ, ಇಂಗ್ಲೆಂಡ್ ತಲಪಿದ ಬಗೆ, ಆರೋಗ್ಯ, ಅಲ್ಲಿನ ಹವಾಗುಣ, ಸದ್ಯಕ್ಕೆ ಒಬ್ಬರ ಗೃಹದಲ್ಲಿ ಅತಿಥಿಯಾಗಿ ಇಳಿದುಕೊಂಡಿರು ವುದು, ಇತ್ಯಾದಿ ಇತ್ಯಾದಿ. "ಚಿ|| ರಾಜುವಿಗೂ. ಸೌ|| ರತ್ನನಿಗೂ ನನ್ನ ಆಶೀರ್ವಾದಗಳನ್ನು ತಿಳಿಸುವುದು."

"ನೀನೇ ಓದಿ ಹೇಳಿಬಿಡು, ರಾಜು. ನಿಮ್ಮ ಅಮ್ಮನಿಗೆ" ಎಂದು ರತ್ನ ಮಡಿಸಿದ ಕಾಗದವನ್ನು ರಾಜುವಿನ ಕಾಲಬಳಿಗೆ ದೂಡಿದಳು.

ರತ್ನನ ಮುಖದ ಮೇಲೆ ಮೂಡಿದ್ದ ಮುನಿಸು, ನಿರಾಶೆ, ಅಪಮಾನ—ರಾಜುವಿನ ಗಮನಕ್ಕೆ ಬಾರದೆ ಹೋಗಲಿಲ್ಲ.

ಅವನು ಕಾಗದವನ್ನು ತೆಗೆದುಕೊಂಡು ತಾಯ ಬಳಿಗೆ ಹೋದ.

* * * *

ಇದಾದಮೇಲೆ ಹದಿನೈದು ದಿನಕ್ಕೆ ಒಮ್ಮೆ ಒಂದರಂತೆ ಶಾಮಣ್ಣ ನಿಂದ ತಪ್ಪದೆ ಕಾಗದ ಬರತೊಡಗಿತು. ಪ್ರತಿಸಲವೂ ತಾಯ ಹೆಸರಿಗೆ. ಎಲ್ಲ 'ಯೋಗಕ್ಷೇಮ' ವಿಚಾರ; ಉಭಯ ಕುಶಲೋಪರಿ ಸಾಂಪ್ರತ. ವಿದ್ಯಾಭ್ಯಾಸ ಬಹು ಚೆನ್ನಾಗಿ ಮುಂದುವರಿಯುತ್ತಿದೆ, ಹವಾ ಚೆನ್ನಾಗಿ ಒಗ್ಗಿದೆ, ಮಾಂಸ ಮದ್ಯಗಳನ್ನು ಸೇವಿಸುತ್ತಿಲ್ಲ, ಈಗ ಇಂಡಿಯನ್ ಸ್ಟೂಡೆಂಟ್ಸ್ ಹಾಸ್ಟಲಿನಲ್ಲಿ ಇರುವುದು—ಇತ್ಯಾದಿ ಇತ್ಯಾದಿ. ಯಾವ ತಾಯಿಗೇ ಆದರೂ ಹಿಗ್ಗನ್ನು ಉಂಟುಮಾಡುವ ಸುದ್ದಿಗಳು.

## ೨೮

ಶಾಮಣ್ಣ ವಿದೇಶಪ್ರಯಾಣ ಮಾಡಿದಂದಿನಿಂದ ಮನೆಯಲ್ಲಿ ಗೆಲವೇ ಇಲ್ಲ. ಮನೆ ಮಾತ್ರವಲ್ಲದೆ ಎಲ್ಲರ ಮನವೂ ಬಿಕೋ ಎನ್ನುತ್ತಿತ್ತು.

ರತ್ನನಿಗಂತೂ ಈಗ ಯಾವ ಕಾರ್ಯವೂ ಇಲ್ಲ. ಅವನ ಕಾಲೇಜು ವಿದ್ಯಾಭ್ಯಾಸವನ್ನು ಶಾಮಣ್ಣನ ಇಚ್ಛೆಯಂತೆ ಎಂದೋ ನಿಲ್ಲಿಸಿಬಿಟ್ಟಿತ್ತು. 'ನೀನು ಒಂದು ಸಲ ಬಲವಂತಮಾಡಿ ನೋಡಮ್ಮ, ರತ್ನ ಒಪ್ಪಿದರೆ ಅವಳಿಗೆ

ವೀಣೆ ಹೇಳಿಸುವ ಏರ್ಪಾಡುಮಾಡು "ಎಂದು ಶಾಮಣ್ಣ ಪ್ರಯಾಣಹೊರಡುವ ಮುನ್ನ ತಿಳಿಸಿದ್ದ.

ರತ್ನನ ಲವಲವಿಕೆಯಿಲ್ಲದ ಮುಖ ಕಂಡು ಸುಂದರಮ್ಮನವರು, "ಅವಳಿಗೆ ಹೇಗಾದರೂ ಬಲವಂತ ಮಾಡಿ ವೀಣೆಯ ಪಾಠ ಗೊತ್ತುಮಾಡಬೇಕು" ಎಂದುಕೊಂಡರು, ಮನಸ್ಸಿನಲ್ಲಿ ಈ ಉದ್ದೇಶವನ್ನಿಟ್ಟುಕೊಂಡು ಒಂದು ದಿನ ಸೊಸೆಯನ್ನು ಪ್ರಶ್ನಿಸಿದರು :

"ಹೊತ್ತು ಹೋಗದೆ ಬೇಜಾರಾಗುವುದಿಲ್ಲವೆ, ತಾಯಿ?"

"ಹೊತ್ತು ಹೋಗದೆ ಏನು? ಅವರ ಹೆಸರಿನಲ್ಲಿ ರಾಜು ಪಬ್ಲಿಕ್ ಲೈಬ್ರರಿಯಿಂದ ಪುಸ್ತಕಗಳನ್ನು ತಂದು ಕೊಡುತ್ತಾನೆ. ಶ್ಯಾಮಲನಿಗೆ ರಾಜುವಿನ ಕೈಲಿ ಹೇಳಿಕಳಿಸಿದ್ದೆ; ಅವಳೂ ಏನಾದರೂ ಪುಸ್ತಕ ತಂದು ಕೊಡುತ್ತ ಇರುತ್ತಾಳೆ."

"ಅದೇನೋ ಆವೊತ್ತು ಬಂದಿದ್ದಾಗ ಶ್ಯಾಮಲಾ ಪಿಟೀಲು ಕಲಿಯುತ್ತ ಇದೀನಿ ಅಂದಳಲ್ಲ? ಅವಳ ಮೇಷ್ಟ್ರರನ್ನ ಕರಸಿ ಕೇಳಿ ನೋಡಬಾರದೆ, ವೀಣೆ ಏನಾದರೂ ಹೇಳಿಕೊಡುತ್ತಾರೆಯೇ ಅಂತ?"

"ಏನೂ ಬೇಡ ಅತ್ತೆ. ಅದು ಬೇರೆ ದುಡ್ಡುದಂಡ" ಎಂದು ರತ್ನ ಗೊಣಗಿದಳು.

"ವಿದ್ಯೆಗೋಸ್ಕರ ವೆಚ್ಚಮಾಡಿದ ಹಣ ಎಂದಿಗೂ ದಂಡವಾಗುವುದಿಲ್ಲವಮ್ಮ. ಅದರಲ್ಲೂ ಸಂಗೀತ ವಿದ್ಯೆ. ನೀನು ಚೆನ್ನಾಗಿ ವೀಣೆ ಬಾರಿಸುವುದನ್ನ ಕಲಿತರೆ ಅದರಿಂದ ಎಷ್ಟು ಜನಕ್ಕೆ ಸಂತೋಷ, ನೋಡು?"

"ಆಗಲಿ ಅತ್ತೆ, ನಿಮ್ಮ ಇಷ್ಟ."

"ನನ್ನ ಇಷ್ಟ ಇರಲಿ. ನನಗಿಂತ ಹೆಚ್ಚಾಗಿ ಇದು ಶಾಮಣ್ಣನ ಇಷ್ಟ. ನನ್ನ ಇಷ್ಟಾನೂ ಒಂದಿದೆ...."

"ಅದೇನು, ಅತ್ತೆ?"

"ಹೇಗಿದ್ದರೂ ವೀಣೆ ಕಲಿಯುತ್ತೀಯಲ್ಲ. ಹೇಳಿಸಿದಮೇಲೆ ಇವೊತ್ತೊ ನಾಳೆಯೋ ಕಲಿತೇ ಕಲಿಯುತ್ತಿ. ವೀಣೆಯ ಜೊತೆಗೆ ಬಾಯಲ್ಲಿ ಹಾಡುವ ಹಾಗೆ ಕಲಿತು, ನಾಲ್ಕು ಕನ್ನಡ ದೇವರನಾಮ ಕಲಿತುಕೊಳ್ಳೇ ತಾಯಿ. ರೇಡಿಯೋದಲ್ಲಿ ರಾಜು ತಿರುಗಿಸಿದರೆ ಅದೇನೋ ಕ್ರಿಕೆಟ್ಟು ಸ್ಕೋರಂತೆ

ಅದು, ಅದು ತಪ್ಪಿದರೆ ಹಾಳು ಹಿಂದಿಯ ಹಾಡುಗಳು. ಶಾಮಣ್ಣ ಅವರ ಕಿವಿ ಹಿಂಡಿದರೆ, ತೆಲುಗು ಹಾಡು ಇಲ್ಲವೆ ತಮಿಳು ಹಾಡು. ಭೂಮಿಯ ಮೇಲೆ ಈ ಇಂಗ್ಲೀಷು, ತೆಲುಗು, ತಮಿಳು, ಹಿಂದಿ ಬಿಟ್ಟರೆ ಕನ್ನಡ ಅನ್ನುವುದು ಇದೆಯೋ ಇಲ್ಲವೋ ಅನ್ನಿಸಿಬಿಟ್ಟಿದೆ ಹಾಳಾದ್ದು. ನೀನೇ ನೋಡಿದ್ದೀಯಲ್ಲ. ಕೆಂಚಪ್ಪನಿಗೆ ತಮಿಳು ತೆಲುಗು ಒಂದೂ ಬರೋದಿಲ್ಲ; ಈ ಬೊಗಳೂರಿನ ಭಿಕ್ಷುಕರನ್ನ ಬಯ್ದು ಕಳಿಸಬೇಕಾದರೂ ಕನ್ನಡ ಪ್ರಯೋಜನಕ್ಕೆ ಬರದಹಾಗಾಗಿದೆ. ನೀನು ನಾಲ್ಕು ಕನ್ನಡದ ದೇವರ ನಾಮಗಳನ್ನು ಕಲಿಯಮ್ಮ. ಸಾಯುವ ಕಾಲದಲ್ಲಿ ಅದನ್ನಾದರೂ ಕಿವಿಗೆ ಹಾಕಿಕೊಂಡು ಸಾಯೋಣ...."

ಏನೋ ಆವೇಶದಿಂದ ಮಾತನಾಡಿ ಸುಂದರಮ್ಮನವರಿಗೆ ತುಸ ಆಯಾಸವಾದಂತಾಗಿತ್ತು. ರತ್ನ ನಡುವೆ ಬಾಯಿಹಾಕಿದಳು:

"ಹೀಗೆ ಅಂತ ಹೇಳಿದ್ದರೆ ನಾನು ಎಂದೋ ಕಲಿಯುತ್ತಾ ಇದ್ದೆ, ಅತ್ತೆ."

ಸುಂದರಮ್ಮನವರು ಉಪಾಯದಿಂದ ರತ್ನನ ಮನಸ್ಸನ್ನು ಶಾಮಣ್ಣನ ಇಷ್ಟಾನುಸಾರ ತಿರುಗಿಸಿಕೊಂಡರು.

ಸಂಗೀತದ ಶಿಕ್ಷಕರನ್ನು ಗೊತ್ತುಮಾಡುವ ಕಾರ್ಯ ರಾಜುವಿನ ಪಾಲಿಗೇ ಬಂತು. ಆಗ, ಶಾಮಣ್ಣ ಸೂಚಿಸಿದ್ದ ವೀಣೆ ರಂಗಸ್ವಾಮಿಗಳನ್ನು ಗೊತ್ತುಮಾಡುವುದೋ ಇಲ್ಲ ಶ್ಯಾಮಲೆಯ ಶಿಕ್ಷಕರು ಪಿಟೀಲು ವಿದ್ವಾನ್ ವೆಂಕಟಗಿರಿ ಶಾಸ್ತ್ರಿಗಳನ್ನು ಗೊತ್ತುಮಾಡುವುದೋ ಎಂಬ ಜಿಜ್ಞಾಸೆ ಯಾಯಿತು.

ರಾಜು ಪೀಟಿಲು ವಿದ್ವಾಂಸರ ಪರವಾಗಿ ವಾದಮಾಡಿದ. ಅವನಿಗೆ ಕರ್ಣಾಟಕ ಸಂಗೀತ ತಲೆಗೆ ಹಿಡಿಸದಿದ್ದರೂ, ಚೌಡಯ್ಯನವರ ಪಿಟೀಲಿನ ನಾದ ವೈಖರಿಗೆ ಮನಸೋತಿದ್ದ. ಶಾಮಣ್ಣ ರಾಜಮಾಣಿಕ್ಯಂ ಪಿಳ್ಳೆ, ದ್ವಾರಂ ವೆಂಕಟಸ್ವಾಮಿ ನಾಯುಡು, ಮೈಸೂರಿನ ಅಂಧ ವಿದ್ವಾಂಸರು ಆಸ್ಥಾನವಿದ್ವಾನ್ ಶಿವರುದ್ರಪ್ಪ—ಇವರ ಪಕ್ಷಪಾತಿ. ಈ ವಿಷಯವಾಗಿಯೇ ಇಬ್ಬರೂ ಅದೆಷ್ಟೋ ಸಂದರ್ಭಗಳಲ್ಲಿ 'ಸೋದರ ಕಲಹ' ಆಡಿದ್ದೂ ಉಂಟು.

ರತ್ನನೂ ರಾಜುವಿನ ಸಲಹೆಯನ್ನೇ ಅನುಮೋದಿಸಿದಳು: "ಸಂಗೀತ ಮುಖ್ಯ. ಕನ್ನಡ ದೇವರನಾಮ ಕಲಿಯುವುದು ಮುಖ್ಯ. ಪಿಟೀಲಾದರೇನು ವೀಣೆಯಾದರೇನು?" ರತ್ನನ ಈ ಮಾತನ್ನು ಆಕ್ಷೇಪಿಸಲು ಸುಂದರಮ್ಮ ನವರಿಗೆ ಬೇರೆ ಕಾರಣ ಗೊತ್ತಾಗಲಿಲ್ಲ.

"ಏನೋ ವೀಣೆಯಾಗಿದ್ದರೆ ಮೇಲಾಗಿತ್ತು. ಶಾಮಣ್ಣ ಹಾಗಂತ ಇಷ್ಟಪಟ್ಟಿದ್ದ."

ರಾಜು ವಿಚಾರಣೆಯ ಕಾರ್ಯವನ್ನು ಮುಗಿಸಿ, ತಾಯಿಗೆ ವರದಿ ಒಪ್ಪಿಸಿದಾಗ, ಸುಂದರಮ್ಮನವರೂ ಪಿಟೀಲು ವಿದ್ವಾಂಸರನ್ನೇ ಗೊತ್ತು ಮಾಡಲು ಒಪ್ಪಿಕೊಂಡರು.

ರಾಜು ವಿವರಿಸಿದ:

"....ನೋಡಮ್ಮ, ಆ ವೀಣೆ ರಂಗಸ್ವಾಮಿ ಹುಡುಗ. ಅನುಭವ ಸಾಲದು. ಅಲ್ಲದೆ, ನಿತ್ಯ ತಮ್ಮ ವೀಣೆಯನ್ನು ಹೊತ್ತುಕೊಂಡು ಬರುವುದಕ್ಕೆ ಆಗುವುದಿಲ್ಲವಂತೆ. ಅದೇನೋ ದಿಟ ಅನ್ನು. ಜೋಡಿ ವೀಣೆಯ ಮೇಲೆ ಪಾಠ ಆಗಬೇಕಂತೆ. ನಾವು ಎರಡು ವೀಣೆ ಕೊಂಡುಕೊಳ್ಳಬೇಕಂತೆ. ಒಳ್ಳೆಯ ವೀಣೆ ಎಂದರೆ, ಕಲಿಕೆಗಾದರೂ, ಎರಡರಿಂದ ಮುನ್ನೂರು ರೂಪಾಯಿಗೆ ಕಡಮೆ ಆಗುವುದಿಲ್ಲವಂತೆ. ವಾರಕ್ಕೆ ಮೂರು ದಿನ ಬರುತ್ತಾರಂತೆ. ತಿಂಗಳಿಗೆ ಮೂವತ್ತು ರೂಪಾಯಿ ಕೊಡಬೇಕಂತೆ. ಪೀಟೀಲಿಗಾದರೆ, ಒಳ್ಳೆಯದೇ ನಲವತ್ತು ಐವತ್ತಕ್ಕೆ ಬರುತ್ತಂತೆ. ಅವರ ಪಿಟೀಲನ್ನ ಅವರೇ ತರುತ್ತಾರೆ. ದಿನಬಿಟ್ಟು ದಿನ ಬಂದು ಪಾಠ ಹೇಳುತ್ತಾರಂತೆ. ಅಲ್ಲದೆ, ಮೂವತ್ತು ರೂಪಾಯಿಗೆ ಇಬ್ಬರಿಗೆ ಪಾಠ ಹೇಳಿಕೊಡುತ್ತಾರೆ...."

"ಇಬ್ಬರಿಗೆ! ಇಬ್ಬರು ಯಾರೋ ಹೇಳಿಸಿಕೊಳ್ಳುವವರು?"

"ಹೇಗಿದ್ದರೂ ಬರುತ್ತಾರಲ್ಲ. ನನಗೂ ಕಲಿಯೋಣ ಅಂತ ಆಸೆಯಾಗಿದೆ...."

ಅವನಿಗೆ ಆ ಆಸೆ ನಿಜವಾಗಿ ಉಂಟಾಗಿತ್ತು.

ಸುಂದಮ್ಮನವರು ಯೋಚಿಸುವವರಂತೆ ಕ್ಷಣಕಾಲ ಮೌನವಾಗಿದ್ದರು.

"....ಅಲ್ಲದೆ, ವೆಂಕಟಗಿರಿಶಾಸ್ತ್ರಿಗಳು ಮುದುಕರು. ತುಂಬ ಅನುಭವಸ್ಥರು; ಹಳೇ ಹುಲಿಗಳಂತೆ...."

"ಹಾಗೇ ಆಗಲಪ್ಪ. ನಿಮ್ಮ ಇಷ್ಟದಂತೆಯೇ ಆಗಲಿ" ಎಂದು ಸುಂದರಮ್ಮನವರು ಒಪ್ಪಿಕೊಂಡರು.

ಒಂದು ಶುಭ ದಿನ ಪಿಟೀಲು ಪಾಠ ಪ್ರಾರಂಭವಾಯಿತು. ಆದಿನ ಶ್ಯಾಮಲೆಯೂ ಆಹ್ವಾನಿತಳಾಗಿ ಬಂದಿದ್ದಳು. ಸಣ್ಣ ಪ್ರಮಾಣದಲ್ಲಿಯೇ ಆದರೂ 'ಶಾರದಾ ಪೂಜೆ' ಚೆನ್ನಾಗಿ ನಡೆಯಿತು.

ರಾಜು ಮತ್ತು ರತ್ನ ಇಬ್ಬರಿಗೂ ಒಟ್ಟಿಗೆಯೇ ಪಾಠ ಪ್ರಾರಂಭ ವಾಯಿತು. ಇಬ್ಬರಿಗೆಂದು ಎರಡು ಪಿಟೀಲುಗಳನ್ನು ಕೊಂಡಿತ್ತು.

ಪಿಟೀಲುವಾದನದ ಅಭ್ಯಾಸವನ್ನೂ ನಿತ್ಯ ಇಬ್ಬರೂ ಒಟ್ಟಿಗೆ ನಡಸುತ್ತಿದ್ದರು, ಬೇರೆ ಬೇರೆಯಾಗಿಯೂ ಅಭ್ಯಾಸಮಾಡುತ್ತಿದ್ದರು.

ಇಬ್ಬರ ಪಿಟೀಲು ವಾದ್ಯದ ಅಭ್ಯಾಸ ಮೊದಮೊದಲಿನ ಕೆಲವು ದಿನ ಗಳಲ್ಲ ಸುಂದರಮ್ಮನವರಿಗೆ ಬೇಸರವನ್ನೇ ಉಂಟುಮಾಡಿತು. "ಇದನ್ನು ಕೇಳುವುದಕ್ಕಿಂತ ಬೀಸುವ ಕಲ್ಲಿನ ಗರಗರ ಸದ್ದು ಕೇಳುವುದು ಮೇಲು" ಎಂದು ಅವರು ತಮ್ಮ ಮನಸ್ಸಿನಲ್ಲಿಯೇ ಜುಗುಪ್ಸೆಗೊಳ್ಳುತ್ತಿದ್ದರು; "ವೀಣೆ ಯಾಗಿದ್ದರೆ ಕೇಳುವುದಕ್ಕೆ ಹಿತವಾಗಿರುತ್ತಿತ್ತೇನೋ" ಎಂದುಕೊಳ್ಳು ತ್ತಿದ್ದರು.

ಸರಳೆವರಿಸೆ, ಜಂಟೆವರಿಸೆ, ಸ್ವರಜತಿ, ಪಿಳ್ಳಾರಿಗೀತೆ ಎಲ್ಲಾ ಮುಗಿದು 'ವರ್ಣ' ಮೊದಲಾದಾಗ ಸುಂದರಮ್ಮನವರು ತಮ್ಮ ಅಭಿಪ್ರಾಯವನ್ನು ಮಾರ್ಪಡಿಸಿಕೊಂಡರು. ಮಕ್ಕಳ ಸಂಗೀತ ವಿದ್ಯಾಭ್ಯಾಸ ಅವರಿಗೆ ಸುಶ್ರಾವ್ಯ ವೆನಿಸತೊಡಗಿತು. ಅಲ್ಲದೆ, ಶಾಮಣ್ಣ ಮನೆಯಲ್ಲಿ ಇಲ್ಲದ್ದು ಅವರಿಗೆ ಕ್ರಮೇಣ ಅಭ್ಯಾಸವಾಗತೊಡಗಿತ್ತು.

ರಾಜು–ರತ್ನ ಇಬ್ಬರೂ ಜೊತೆಯಲ್ಲಿ ಅಭ್ಯಾಸ ಮಾಡುತ್ತಿದ್ದುದನ್ನು ಅವರು ಕೇಳಿ ಕೇಳಿ ಅವರ ಕಿವಿ ಅದಕ್ಕೆ ಒಗ್ಗಿತ್ತು. ಎಂದಾದರೂ ಒಮ್ಮೊಮ್ಮೆ ರತ್ನ ಒಬ್ಬಳೇ ಅಭ್ಯಾಸಕ್ಕೆ ಕುಳಿತರೆ, "ಇಬ್ಬರೂ ಒಟ್ಟಿಗೆ ನುಡಿಸಿದರೆ ಚೆನ್ನ. ಒಬ್ಬಳೇ ನುಡಿಸಿದರೆ ಅದೇನೋ ಪಿಚ್ಚೆನ್ನುತ್ತದೆ" ಎನ್ನುತ್ತಿದ್ದರು.

ಶಾಮಣ್ಣ ರತ್ನನಿಗೆಂದು ಪ್ರತ್ಯೇಕವಾಗಿ ಎಂದೂ ಕಾಗದ ಬರೆದದ್ದಿಲ್ಲ.

ಆದರೆ ಪ್ರತಿಯೊಂದು ಕಾಗದದಲ್ಲಿಯೂ ರತ್ನನಿಗೆ ಅವನ 'ಆಶೀರ್ವಾದ'ವೋ 'ನೆನಪು ಕೊಡುವುದೋ' ಇದ್ದೇ ಇರುತಿತ್ತು. ಈಚೀಚಿನ ಪತ್ರಗಳಲ್ಲಿ ಅದೂ ಮಾಯವಾಗುತ್ತ ಬಂದಿತು.

ರತ್ನ ಪೀಟೀಲು ಕಲಿಯಲು ಪ್ರಾರಂಭಿಸಿದಾಗ, ರಾಜುವಿನ ಕೈಲಿ ಶಾಮಣ್ಣನಿಗೆ ಬರೆಸಿದ ಕಾಗದದಲ್ಲಿ ಸುಂದರಮ್ಮನವರು ಆ ಸಂಗತಿಯನ್ನು ತಿಳಿಸಿದ್ದರು. "ವೀಣೆಯನ್ನೇ ಕಲಿಯತೊಡಗಿದ್ದರೆ ಚೆನ್ನಾಗಿತ್ತು" ಎಂದು ಅದಕ್ಕೆ ಶಾಮಣ್ಣ ತನ್ನ ಹಿಂದಿನ ಅಪೇಕ್ಷೆಗೇ ಪ್ರಾಧಾನ್ಯ ಕೊಟ್ಟಿದ್ದ. "ಯಾವುದಾದರೇನು. ಪರವಾಯಿಲ್ಲ" ಎಂದು ಸಮಾಧಾನದ ವಾಕ್ಯವನ್ನೂ ಸೇರಿಸಿದ್ದ. ಆದ್ದರಿಂದ, ರತ್ನನ ಪಿಟೀಲುವಾದನದ ಅಭ್ಯಾಸ ನಿಲ್ಲದೆ ಮುಂದುವರಿಯಿತು.

ಶಾಮಣ್ಣ ಹದಿನೈದು ದಿನಕ್ಕೆ ಒಮ್ಮೆ ಒಂದು ಪತ್ರ ಬರೆಯುತ್ತಾ ಇದ್ದವನು ತಿಂಗಳಿಗೊಂದರಂತೆ ಬರೆಯಲು ತೊಡಗಿದ. ಆಮೇಲೆ ಎರಡು ತಿಂಗಳು ಪತ್ರವೇ ಇಲ್ಲ; ಆಮೇಲೆ ಒಂದು ನಾಲ್ಕುಪಂಕ್ತಿಯ ಕಾಗದ: ಅದರಲ್ಲಿ, ಬಿಡುವಿಲ್ಲದ ಕಾರ್ಯಕ್ರಮಗಳ, ನಿರಂತರ ವ್ಯಾಸಂಗದ, ಮುಂಬರುವ ಪರೀಕ್ಷೆಯ ಪ್ರಸ್ತಾಪ. ರತ್ನನ ನೆನಪಿನ ಸುಳಿವಿಲ್ಲ.

ಇತ್ತ ರಾಜುವಿನ ಎಲ್.ಎಂ.ಪಿ. ಮೊದಲ ವರ್ಷದ ಪರೀಕ್ಷೆಯೂ ಸಮೀಪಿಸುತಿತ್ತು. ಹಗಲು ಹೊತ್ತು ಓದಲು ಅವನಿಗೆ ಏನಾದರೊಂದು ಕಾರಣದಿಂದ ಬಿಡುವೇ ಇಲ್ಲ. ಮಧ್ಯರಾತ್ರಿಯವರೆಗೂ ದೀಪ ಉರಿಸಿ ವ್ಯಾಸಂಗಮಾಡಲು ತೊಡಗಿದ್ದ.

ಸುಂದರಮ್ಮನವರು ಒಂದು ಬಗೆಯ ಶಾಂತಿ ಸಮಾಧಾನಗಳ ಕಾಲವನ್ನು ಕಳೆಯುತ್ತಿದ್ದರು. ರಾಜುವಿಗಂತೂ ಯಾವ ಕೊರತೆಗಾಗಲಿ ಕಾರ್ಪಣ್ಯಕ್ಕಾಗಲಿ ಕಾರಣವೇ ಇರಲಿಲ್ಲ. ಅವನು ಕೇಳಿದಾಗ, ಕೇಳಿದಷ್ಟು ಹಣವಲ್ಲದಿದ್ದರೂ ಅದರಲ್ಲಿ ಅರ್ಧವನ್ನಾದರೂ, ಸುಂದರಮ್ಮನವರು ಅವನಿಗೆ ಕೊಟ್ಟುಬಿಡುತ್ತಿದ್ದರು. ಈ ಮರ್ಮವನ್ನು ಅರಿತ ಅವನು, ಐದು ರೂಪಾಯಿ ಬೇಕಾಗಿದ್ದರೆ ಹತ್ತು ಬೇಕು ಎಂದು ಕೇಳುತ್ತಿದ್ದ.

ರತ್ನನ ಮುಖವೂ ಗೆಲವುಗೂಡಿತ್ತು; "ಮೊದಲಿನ ಬೇಸರವಿಲ್ಲ, ಸಂತೋಷವಾಗಿದ್ದಾಳೆ" ಎಂದು ಸುಂದರಮ್ಮನವರೂ ಅವಳ ಬಗೆಗೆ ತೃಪ್ತಿಯನ್ನು ತಳೆದರು.

ಡಾ|| ರಘುರಾಂ ಕೂಡ ಈಗ ಸುಂದರಮ್ಮನವರನ್ನು ವಿಚಾರಿಸಿ ಕೊಂಡುಹೋಗಲು ಬರುವುದು ವಿರಳವಾಗಿತ್ತು. ಸುಂದರಮ್ಮನವರ ದೇಹ ಸ್ಥಿತಿಯ ಬಗೆಗೆ ಅವರು ಸಮಾಧಾನಗೊಂಡಿದ್ದರು. "ಮುಖ್ಯ ಅವರ ಮನಸ್ಸಿಗೆ ನೆಮ್ಮದಿಯಾಗಿದೆ ಈಗ" ಎಂದು ಡಾಕ್ಟರು ತಮ್ಮೊಳಗೆ ತೀರ್ಮಾನಿಸಿ ಕೊಂಡಿದ್ದರು.

೨೯

ಮುಗಿಲಿಲ್ಲದ ಆಕಾಶದಲ್ಲಿ ಬರಸಿಡಿಲು ಮೂಡಿ ಮೊಳಗಿದಂತೆ, ಒಂದು ದಿನ ಇದ್ದಕ್ಕಿದ್ದಹಾಗೆ ಕೆಂಚಪ್ಪ ಧಾವಿಸಿ ಬಂದು, "ಡಾಕ್ಟರೇ, ನಿಮ್ಮನ್ನ ಬಿರ್ರನೆ ಕರಕೊಂಡು ಬರಯೇಳದ್ರು" ಎಂದು ಸುತ್ತಮುತ್ತ ಇದ್ದ ಬಡರೋಗಿ ಗಳನ್ನ ಲೆಕ್ಕಿಸದೆ ಗಟ್ಟಿಯಾಗಿ ಹೇಳಿದಾಗ, ಡಾ|| ರಘುರಾಂ ನಿಜವಾಗಿ ಚಕಿತಗೊಂಡರು. ಸುಂದರಮ್ಮನವರ ಕಡೆಯ ಗಳಿಗೆಯೇ ಸಮೀಪಿಸಿಬಿಟ್ಟಿದೆ ಎಂದುಕೊಂಡುಬಿಟ್ಟರು.

"ಯಾರೋ, ಹೇಳಿಕಳಿಸಿರುವವರು?" ಎಂದು ಆತಂಕದಿಂದ ಡಾಕ್ಟರು ಪ್ರಶ್ನಿಸಿದರು.

"ಇನ್ನು ಯಾರು, ಅಮ್ಮಾವರು."

"ಚಿಕ್ಕಮ್ಮಾವರೋ ದೊಡ್ಡಮ್ಮಾವರೋ?"

"ದೊಡ್ಡಮ್ಮಾವರೇ ಕಣ್ ಬುದ್ಧೀ...."

"ಸರಿ. ಮಾತಾಡುವ ಮಟ್ಟಿಗಿದ್ದರೇನೋ?"

"ಮಾತಾಡದೆ ಏನು ಬುದ್ಧಿ. ಸ್ವಸ್ಥವಾಗೇ ಇದ್ದರು. ಆದರೂ, ಏನೋ ಮೈಗೆ ಒಸಿ ಲಗು ಇಲ್ಲ ಅಂತಲೇ ಮಲಗಿದ್ದರು...."

ಸುಂದರಮ್ಮನವರ ದೇಹಸ್ಥಿತಿ ತತ್‌ಕ್ಷಣದಲ್ಲಿ ಕಳವಳಕ್ಕೆ ಕಾರಣವಿಲ್ಲ ವೆಂದು ಡಾಕ್ಟರು ಸಮಾಧಾನಗೊಂಡು, ಮತ್ತೆ ಕೇಳಿದರು:

"ಮನೆಗೆ ಹೋಗುತ ಬಂದರಾಗುವುದಿಲ್ಲವೇನೋ?"

"ಅದೇನೋ ಬುದ್ಧಿ, ಬಿರ್ರನೆ ಒಂದಿಗೇನೇ ಕರಕೊಂಡು ಹೊಂಟುಬಾ

ಅಂದ್ರು. ಇಸ್ಟರ ಮೇಲೆ ತಮ್ಮ ಚಿತ್ತ. ಬತ್ತೀರೋ ಇಲ್ಲ ನಾ ಹೋಗಾನೋ....?"

ಎಂದಿನಂತೆ, ಅವನಿಗೆ ಡಾಕ್ಟರ ಕಾರಿನ ಸವಾರಿ ಬಿಡಲು ಇಷ್ಟವಿಲ್ಲ.

ಡಾಕ್ಟರು, "ನೀನು ಹೋಗು. ನಾನು ಹೊರಟು ಬರುತ್ತೇನೆ" ಎಂದಾಗ ಕೆಂಚಪ್ಪನಿಗೆ ನಿರಾಶೆಯಾಯಿತು.

"ಮನೇಲೂ ನಂಗೇನೂ ಕೆಲ್ಸ ಇಲ್ಲ. ಇಲ್ಲೇ ಕುಂತಿದ್ದು ನಿಮ್ಮೊಂದಿಗೇನೇ ನಾನೂ ಬರ್ತೀನಿ" ಎಂದ ಕೆಂಚಪ್ಪ.

ಅವನ ಈ ಮಾತಿನಿಂದ, ಸುಂದರಮ್ಮನವರಿಗೆ ನಿಜವಾಗಿ ಶೀಘ್ರ ಕಳವಳಕ್ಕೆ ಕಾರಣವಾದ ರೋಗಸ್ಥಿತಿಯ ಪ್ರಕೋಪ ಏನೂ ಇಲ್ಲವೆಂದು ಡಾಕ್ಟರು ಬಹು ಸುಲಭವಾಗಿ ಊಹಿಸಿದರು. ತಮ್ಮ ಇತರ ರೋಗಿಗಳ ಪರೀಕ್ಷೆಯಲ್ಲಿ ನಿರತರಾದರು.

"ನೀನು ಇಲ್ಲಿ ಕುಂತಿರೋ ಬದಲು ಹಂಗೇ ಒಸಿ ಕಾಲಾಡಿಕೊಂಡು ಬಾ ಕೆಂಚಪ್ಪ"—ಎಂದು ಡಾಕ್ಟರು ಅವನಿಗೆ ಆದೇಶವಿತ್ತರು.

ಇಂಥ ಸಂದರ್ಭ ಸಾವಿರದ ಒಂದನೆಯ ಸಲ. ಕೆಂಚಪ್ಪ ಪಕ್ಕದ ಹೋಟಲಿಗೆ ಹೋಗಿ, ಎರಡು ಇಡ್ಲಿ ತಿಂದು, ಮೂರು ಲೋಟ ನೀರು ಕುಡಿದು, ಕಾರಿನ ಹಿಂದುಗಡೆಯ ಸೀಟಿನಲ್ಲಿ ಒರಗಿಕೊಂಡು, ಕಾಲಾಡುವ ಬದಲು ನಿದ್ದೆಮಾಡಿ ಇಡ್ಲಿಯನ್ನು ಅರಗಿಸಿಕೊಳ್ಳಲು ಪ್ರಯತ್ನಪಟ್ಟ !

ಡಾಕ್ಟರು ಬಂದು ಕಾರನ್ನು 'ಸ್ಟಾರ್ಟ್' ಮಾಡಿದಾಗಲೇ ಅವನಿಗೆ ಎಚ್ಚರ!

ಎಂದಿಗಿಂತ ಸ್ವಲ್ಪ ಮುಂಚೆಯೇ ತಮ್ಮ ಷಾಪನ್ನು ಬಿಟ್ಟ ಡಾ|| ರಘುರಾಂ ಸುಂದರಮ್ಮನವರ ಮನೆಯ ಮುಂದೆ ಕಾರನ್ನು ನಿಲ್ಲಿಸಿ, ನೇರವಾಗಿ ಅವರು ಮಲಗುವ ಕೋಣೆಯ ಕಡೆಗೇ ಧಾವಿಸಿದರು.

ಬೂಡ್ಸು ಕಾಲಿನ ಸದ್ದನ್ನು ಕೇಳಿಯೇ ಸುಂದರಮ್ಮನವರು ಮಲಗಿದ್ದ ಕಡೆಯೆ ತಮ್ಮ ಹೊದ್ದಿಕೆಯನ್ನು ಸರಿಪಡಿಸಿಕೊಂಡು, ಡಾಕ್ಟರನ್ನು ಸ್ವಾಗತಿಸಲು ಸಿದ್ಧರಾದರು.

ರಾಜು ಮೆಡಿಕಲ್ ಸ್ಕೂಲಿಗೆ ಹೋಗಿದ್ದವನು ಇನ್ನೂ ಬಂದಿರಲಿಲ್ಲ.

ಅದೇ ತಾನೆ ಊಟ ಮುಗಿಸಿಕೊಂಡು ರತ್ನ ತನ್ನ ಕೋಣೆಯಲ್ಲಿ ಬಾಗಿಲು ಹಾಕಿಕೊಂಡು, ಏನನ್ನೂ ಮಾಡಲು ತೋಚದೆ, ಯಾವುದೋ ಪುಸ್ತಕ ವನ್ನು ವಿಮನಸ್ಕಳಾಗಿ ಓದುತ್ತಿದ್ದಳು.

ಡಾಕ್ಟರು ಬಂದ ಕೂಡಲೆ ಉಪಚಾರ ಹೇಳಿಸಿಕೊಳ್ಳದೆ ಕುರ್ಚಿಯ ಮೇಲೆ ಕುಳಿತರು. ಭಟ್ಟರು ಯಥಾಕ್ರಮದಂತೆ 'ಉಷ್ಣೋಪಚಾರ' ಮಾಡಿದರು.

ಸುಂದರಮ್ಮನವರ ಸೂಚನೆಯ ಮೇರೆಗೆ ಕೆಂಚಪ್ಪ ಕೋಣೆಯ ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು ಹೊರಟ.

"ಸ್ವಸ್ಥವಾಗಿದ್ದೀರಿ ತಾನೆ?"

"ನನ್ನ ಮಕ್ಕಳು ನನ್ನನ್ನ ಸ್ವಸ್ಥವಾಗಿ ಇರಿಸುತ್ತಾರೆಯೆ? ಏನಾದರೂ ಹೊಸ ಹೊಸ ಚಿಂತೆ ತಂದು ಒಡ್ಡುತ್ತಲೇ ಇರುತ್ತಾರೆ...."

"ಏನು, ರಾಮಣ್ಣ ಇನ್ನೂ ಕಾಗದವನ್ನೇ ಬರೆದಿಲ್ಲವೋ?"

"ಇಲ್ಲ."

"ಪರೀಕ್ಷೆ ಹತ್ತಿರವಾಗುತ್ತಾ ಇದೆ ಅಂತ ಕಾಣುತ್ತೆ."

"ಅವನ ವಿಚಾರ ನನಗೆ ಯೋಚನೆ ಇಲ್ಲ...."

"ರಾಜುವಿನ ವಿಚಾರವೋ? ಸರಿಯಾಗಿ ಓದುತ್ತಾ ಇದ್ದಾನೋ ಇಲ್ಲವೋ?"

"ಓದುತ್ತಾ ಇರುವ ಹಾಗೆ ಕಾಣುತ್ತೆ. ಅವನ ವಿಚಾರವೂ ಅಲ್ಲ...."

"ಹಾಗಾದರೆ...."

"ಏನು ಮಾಡುವುದು ಡಾಕ್ಟರೆ? ನಿಮ್ಮಲ್ಲೂ ಹೇಳಿಕೊಳ್ಳದೆ ಹೋದರೆ ನನಗೆ ಮನಶ್ಶಾಂತಿ ಇಲ್ಲ. ನನಗೆ ಇನ್ನು ಯಾರಿದ್ದಾರೆ, ನಿಮ್ಮನ್ನ ಬಿಟ್ಟರೆ ಬೇರೆ ಆಪ್ತರು? ಹೇಳದೆ ಹೋದರೆ ಗತಿಯಿಲ್ಲ...."

"ರತ್ನನ ವಿಚಾರವೊ?"

"ಹ್ಞೂ...."

"ಏನು ಮೈಗೆ ಸರಿಯಿಲ್ಲವೊ?"

"ಸರಿಯಿಲ್ಲ ಅಂತಲೇ ಕಾಣುತ್ತೆ."

"ಎಲ್ಲಿ ಅವಳು? ಅದಕ್ಕೇನು, ಪರೀಕ್ಷೆ ಮಾಡಿಬಿಟ್ಟರಾಯಿತು?

'ಶುಭಸ್ಯ ಶೀಘ್ರಂ' ಅನ್ನುವ ಹಾಗೆ ಚಿಕಿತ್ಸಾ ಶೀಘ್ರಂ...."

"ಅಷ್ಟು ಸುಲಭವಾಗಿ ಗೊತ್ತಾಗುತ್ತೆಯೇ, ಡಾಕ್ಟರೆ?...."

"ಯಾಕೆ, ಏನಾದರೂ ಹೇಳಿಕೊಳ್ಳದೆ ಮುಚ್ಚಿಟ್ಟುಕೊಂಡಿದ್ದಾಳೇನು? ಚಿಕ್ಕವಳು ಪಾಪ, ತಿಳಿಯದು. 'ವ್ಯಾಧಿ ರಟ್ಟು, ಸಂಸಾರ ಗುಟ್ಟು' ಅನ್ನುವ ಗಾದೆ ಅವಳಿಗೆ ತಿಳಿಯದು ಅಂತ ಕಾಣುತ್ತೆ ಪಾಪ...."

"ಏನು ಮಾಡುವುದು, ಡಾಕ್ಟರೆ. ಈಗ ಅವಳ ವ್ಯಾಧಿಯನ್ನು ಗುಟ್ಟು ಮಾಡಬೇಕಾಗಿದೆ ಅಂತ ಕಾಣುತ್ತೆ, ಇಲ್ಲದೆ ಹೋದರೆ, ಸಂಸಾರ ರಟ್ಟಾಗುತ್ತೆ. ಏನು ಮಾಡುವುದು ಹೇಳಿ. ನಮ್ಮ ಗ್ರಹಚಾರ...."

"ಯಾಕೆ, ಅವಳನ್ನೇ ಕರೆದುಬಿಡಿ. ನಿಮ್ಮ ಎದುರಿಗೇನೆ ಹೇಳಿ ಬಿಡುತ್ತೇನೆ: ಹಾಗೆಲ್ಲಾ ಖಾಯಿಲೆಯನ್ನು ಮುಚ್ಚಿಟ್ಟುಕೊಳ್ಳಬಾರದು ಅಂತ."

"ಅವಳನ್ನ ಕರಸಿ ಕೇಳಬಹುದೋ ಇಲ್ಲವೋ ನಾನು ಹೇಳಲಾರೆ. ಅದು ಮುಂದಿನ ವಿಚಾರ."

"ಹೋಗಲಿ. ನೀವಾದರೂ ವಿಚಾರ ಮಾಡಿದ್ದೀರೋ ಇಲ್ಲವೋ?"

"ಇಲ್ಲ."

"ಇಲ್ಲ! ಹಾಗಾದರೆ ಅವರಿಗೆ ಏನು ಖಾಯಿಲೆ ಅಂತ ನಿಮಗೆ ಹೇಗೆ ಗೊತ್ತು? ಚೆನ್ನಾಗಿ ಊಟ ನಿದ್ರೆ ಎಲ್ಲ ಸರಿಯಾಗಿ ಮಾಡುತ್ತಾಳೋ ಇಲ್ಲವೋ?"

"ಊಹೆಗೀಹೆಯ ಖಾಯಿಲೆ ಏನೂ ಅಲ್ಲ. ಊಟ ನಿದ್ರೆ ಎಲ್ಲ ಸರಿಯಾಗೇ ಇದೆ. ಹೇಗೆ ಗೊತ್ತು ಅಂದರೆ ಹೇಗೆ ಹೇಳಲಿ? ಇಂಥ ವಿಚಾರ ಹೆಂಗಸರ ಬುದ್ಧಿಗೆ ಹೊಳೆಯುವ ಹಾಗೆ ನಿಮಗೆ ಹೊಳೆಯು ವುದಿಲ್ಲ. ಅವಳ ದೇಹಸ್ಥಿತಿ ವ್ಯತ್ಯಾಸವಾಗಿರುವ ಹಾಗೆ ನನಗೆ ತೋರುತ್ತೆ...."

"ಅಂದರೆ....ನಿಮ್ಮ ಊಹೆ...."

"ಹೌದು."

"ನೀವು ಯಾವಾಗಲೂ ಹೀಗೆಯೇ. ಇಲ್ಲದ್ದನ್ನ ಊಹಿಸಿ ಚಿಂತೆ ಪಡುತ್ತೀರಿ. ಚಿಂತೆ ಚಿಂತೆಯನ್ನು ಮರಿಹಾಕುತ್ತೆ. ನಿಮ್ಮ ಖಾಯಿಲೆ

ವಿಚಾರವನ್ನೇ ತೆಗೆದುಕೊಳ್ಳಿ. ನಿಮಗೆ ಮೊದಲು ರಕ್ತದ ಒತ್ತಡ ಇರಲಿಲ್ಲ; ಹೃದಯ ಚೆನ್ನಾಗಿಯೇ ಇತ್ತು. ಊಹಿಸಿ ಊಹಿಸಿ ಖಾಯಿಲೆ ಹೆಚ್ಚುಮಾಡಿಕೊಂಡಿರಿ. ನರದೌರ್ಬಲ್ಯ ಹೆಚ್ಚಾದಾಗ ಖಾಯಿಲೆ ಇನ್ನಷ್ಟು ಹೆಚ್ಚುತ್ತೆ. ಅದರ ವಿಚಾರ ಯೋಚನೆಯೇ ಮಾಡಬಾರದು. ಎಷ್ಟೋ ಜನರ ಹೊಟ್ಟೆಯ ಹುಣ್ಣು, ಹೃದಯ ದೌರ್ಬಲ್ಯ ಇವೆಲ್ಲಾ ದುರ್ಬಲ ಮನಸ್ಸಿನಿಂದ ಆದದ್ದು ಅಂತ ಈಚೆಗೆ ಕಂಡುಹಿಡಿದಿದ್ದಾರೆ. ಇದಕ್ಕೆ Psycho- somatic Diseases ಅಂತ ಹೇಳ್ತಾರೆ....ನಿಜವಾದ ಖಾಯಿಲೆ ಏನೂ ಇಲ್ಲದೆ ಹೋದರೂ ಇದೆ ಅಂತ ಊಹಿಸಿಕೊಂಡು ತೊಳಲುತ್ತಾರೆ. ಅದೇ ಒಂದು ಬಗೆಯ ಖಾಯಿಲೆ! Hypochondria (ಹೈಪೋಕಾಂಡ್ರಿಯ) ಅಂತ. ನಮ್ಮ ದೇಶದಲ್ಲಿ 'ಸಿಕಿಯಾಟ್ರಿ' (Psychiatry) ಅಂದರೆ ಮನಸ್ಸಿನ ಚಿಕಿತ್ಸೆ ಇನ್ನೂ ಬೆಳೆದಿಲ್ಲ...."

"ಡಾಕ್ಟರೇ, ಡಾಕ್ಟರೆ!...."

"ಏನು?"

"ಈಗ ನನ್ನ ಖಾಯಿಲೆ ವಿಚಾರ ಅಲ್ಲ. ರತ್ನನ ವಿಚಾರ, ನಾನು ಹೇಳುತ್ತಿರುವುದು."

"ಹೋಗಲಿ. ಏನು, ಅವನ ಖಾಯಿಲೆ ವಿಚಾರ ?"

"ಖಾಯಿಲೆ ಅಂತ ಖಾಯಿಲೆ ಅಲ್ಲ...."

"ಯಾಕೆ ಇಷ್ಟು ತೊಳಲುತ್ತೀರಿ. ನನ್ನ ಕೂಡವೂ ಇಷ್ಟೊಂದು ಸಂಕೋಚವೆ?"

"ಸಂಕೋಚಪಡಬೇಕಾದ ವಿಚಾರ ಡಾಕ್ಟರೆ..." ಎಂದು ಸುಂದರಮ್ಮನವರು ಮಾತನ್ನು ನಿಲ್ಲಿಸಿ, ಮುಂದಿನದನ್ನು ಹೇಳಲು ಮನಸ್ಸನ್ನು ಗಟ್ಟಿ ಮಾಡಿಕೊಂಡರು. ಅದರ ಸೂಚನೆಯಾಗಿಯೋ ಎಂಬಂತೆ ಬಲಗೈ ಮುಷ್ಟಿಯಲ್ಲಿ ಹೊದೆದಿದ್ದ ಶಾಲನ್ನು ಭದ್ರವಾಗಿ ಹಿಡಿದಿದ್ದರು.

"ರತ್ನ...."

ಡಾಕ್ಟರು ಮೌನವಾಗಿ ಅವರ ಮುಂದಿನ ಮಾತನ್ನು ನಿರೀಕ್ಷಿಸುತ್ತಿದ್ದರು.

"....ಗರ್ಭಿಣಿ....ಅಂತ ಕಾಣುತ್ತೆ...,"

ಡಾಕ್ಟರು ಅವಾಕ್ಕಾದರು. ಅವರ ಬಿಟ್ಟ ಕಣ್ಣುಗಳಲ್ಲಿ ಅಚ್ಚರಿಯ ಭಾವ ಹುಚ್ಚೇರಿತ್ತು.

"ರತ್ನ....ಗರ್ಭಿಣಿ!.... ನಾನು ನಂಬಲಾರೆ!" ಎಂದರು ಕಡೆಗೆ.

"ನಾನೂ ನಂಬಲಾರೆ" ಎಂದು ಸುಂದರಮ್ಮನವರು ಮೆಲ್ಲನೆ ನರಳು ದನಿಯಲ್ಲಿ ಪಡಿನುಡಿದರು.

"ಅವಳನ್ನು ವಿಚಾರಿಸಿದಿರಾ?"

"ಇಲ್ಲ. ಅವಳನ್ನು ಯಾಕೆ ವಿಚಾರಿಸಬೇಕು? ಅವಳಿಗೇನು ಗೊತ್ತಾಗುತ್ತೆ? ನಾನೇ ಊಹಿಸಿ ತಿಳಿದುಕೊಂಡೆ...."

"ಅಂದರೆ.......,"

"ನನಗೆ ಚೆನ್ನಾಗಿ ಜ್ಞಾಪಕ ಇದೆ. ಹೋದ ಸಲ ಅವಳ ಮುಟ್ಟು ನೀರಾದ್ದು ರಥಸಪ್ತಮಿ ನಾಳೆ ಅಂತ. ಆಗಲೇ ಅಮಾವಾಸ್ಯೆಯೂ ಆಗಿ ಹೋಯಿತು. ಅವಳು ಇನ್ನೂ ಹೊರಗಾಗಿಲ್ಲ...."

"ಕಾಲಕಾಲಕ್ಕೆ ಸರಿಯಾಗಿ ಆಗುತ್ತ ಇದ್ದಳೋ ಇಲ್ಲವೋ?"

"ಅವಳು ಯಾವಾಗಲೂ ಒಂದುದಿನ ಹಿಂಚೇ ಹೊರತು ಮುಂಚಿಲ್ಲ."

ಡಾಕ್ಟರು ಒಂದೆರಡು ನಿಮಿಷ ಮೌನವಾಗಿದ್ದರು. ಅವರಿಗೂ ದಿಕ್ಕು ತೋಚದಂತಾಗಿತ್ತು. ತಮ್ಮ ಮನೆಯಲ್ಲೇ ಇಂತಹುದೊಂದು ಘಟನೆ ನಡೆದಿದ್ದರೆ ಮನಸ್ಸು ಎಷ್ಟು ಕಲಕಬಹುದೋ ಅಷ್ಟು ಕಲಕಿತ್ತು. ಸುಂದರಮ್ಮನವರ ಮನಸ್ಸ್ಥಿತಿ ಹೇಗಿರಬಹುದೆಂಬುದನ್ನು ಊಹಿಸಿಕೊಳ್ಳುವುದು ಅವರಿಗೆ ಕಷ್ಟವಾಗಲಿಲ್ಲ. ಆದರೂ, ಅವರು ಎಷ್ಟು ಸಮಾಧಾನ ಚಿತ್ತರಾಗಿ ಮಾತಾಡುತ್ತಿರುವರೆಂಬುದನ್ನು ಕಂಡು ಡಾಕ್ಟರಿಗೇ ಅಚ್ಚರಿಯಾಯಿತು. ಇನ್ನೂ ವಿಷಯ ಸಂದಿಗ್ಧವಾಗಿರುವುದರಿಂದ ಅವರ ನೆಮ್ಮದಿಗೆ ಪೂರ್ತಿ ಭಂಗವುಂಟಾಗಿಲ್ಲವೆಂದು ಅವರು ಬಗೆದರು. ಅವರ ನೆಮ್ಮದಿಯ ದೃಷ್ಟಿಯಿಂದಲೇ ಅವರಿಗೆ ಸಮಾಧಾನ ಧೈರ್ಯ ಉಂಟಾಗುವ ರೀತಿಯಲ್ಲಿ ತಾವು ವರ್ತಿಸಬೇಕಾದ್ದು ತಮ್ಮ ಕರ್ತವ್ಯವೆಂದು ತಿಳಿದರು.

"ಇನ್ನೂ ಒಂದು ವಾರ ಎರಡು ವಾರ ತಡೆದು ನೋಡಬಹುದಲ್ಲ?" ಎಂದರು ಡಾಕ್ಟರು.

"ಹಾಗಂತೀರ?"

"ನನಗೆ ಹಾಗೆ ತೋರುತ್ತೆ. ಕೆಲವು ಸಲ ಹೀಗಾಗುವುದೂ ಉಂಟು. ನಾವು ಮೋಸ ಹೋಗಿ ಇಲ್ಲದ ಗಾಬರಿಗೆ ಯಾಕೆ ಅವಕಾಶ ಮಾಡಿಕೊಳ್ಳ ಬೇಕು ?''

"ಇನ್ನು ಒಂದು ವಾರ ಆದಮೇಲೆ ಏನು ಮಾಡುವುದು ಅಂತ ?"

"ಹೆಂಗಸರ ಆಸ್ಪತ್ರೆಗೆ ತೋರಿಸಿ, ಖಚಿತಪಡಿಸಿಕೊಳ್ಳುವುದು. ಅಷ್ಟರಲ್ಲಿ, ನಾನು ಒಂದು ವಾರ ಕಾಲ ಬಂದು ಔಷಧಿ ಕೊಡುತ್ತೇನೆ. ಏನಾದರೂ ಅಕ್ರಮವಾಗಿದ್ದರೆ, ಸರಿಹೋಗುತ್ತೆ.''

ಡಾಕ್ಟರ ಈ ಮಾತಿನಿಂದ ಸುಂದರಮ್ಮನವರಿಗೆ ತಾತ್ಕಾಲಿಕವಾಗಿ ಸ್ವಲ್ಪ ನೆಮ್ಮದಿ ದೊರಕಿತು.

"ಅವಳಲ್ಲಿಯಾಗಲಿ ರಾಜುವಿನಲ್ಲಿಯಾಗಲಿ ಈ ಪ್ರಸ್ತಾಪ ಮಾಡಿಲ್ಲ ತಾನೆ ?" ಎಂದು ಡಾಕ್ಟರು ಹೊರಡಲು ಎದ್ದಾಗ ಕೇಳಿದರು.

ರಾಜು!—ಸುಂದರಮ್ಮನವರಿಗೆ ಅದು ಹೊಳೆದಿರಲಿಲ್ಲ! ಸಂಗೀತದ ಮೇಷ್ಟ್ರೋ ಯಾರೋ ಏನೊ ಎಂದುಕೊಂಡಿದ್ದರು! ಅಜ್ಞಜ್ಞಾನದಲ್ಲಿದ್ದಾಗ ಕೆಂಡ ಮುಟ್ಟಿದಂತಾಯಿತು! ತತ್‌ಕ್ಷಣದ ಕುಟುಕು ವೇದನೆಯನ್ನು ಉಗುಳಿ ನೊಂದಿಗೆ ನುಂಗಿಕೊಂಡರು.

ಸರ್ಪ ಕಚ್ಚಿರುವುದು ದಿಟ. ಮನೆಯೊಳಗೇ ಹುತ್ತವೇ ! ಅಚಾತುರ್ಯ ವಾಗಿರುವುದೇ ಆದರೆ ಎಂತಹ ಅಚಾತುರ್ಯ ! ನಂಬಲಾಗಲಿಲ್ಲ ಸುಂದರಮ್ಮ ನವರಿಗೆ!

ಬಹುಶಃ, ವಿಷಯ ಗೋಪ್ಯವಾಗಿರಲಿ ಎಂದು ಡಾಕ್ಟರು ರಾಜುವಿನ ಹೆಸರೆತ್ತಿರಬೇಕು; ಸಂಶಯದ ಬಾಣ ಅವನ ಕಡೆಗೆ ಗುರಿಯಿಟ್ಟಿದ್ದಲ್ಲ— ಎಂದು ತೋರಿತು.

ಡಾಕ್ಟರ ಪ್ರಶ್ನೆಗೆ "ಇಲ್ಲ''ಎಂದು ತಡೆದು ಉತ್ತರಕೊಟ್ಟರು ಸುಂದರಮ್ಮನವರು.

"ಹಾಗಿದ್ದಮೇಲೆ ಸರಿ. ನೀವು ಯೋಚನೆಮಾಡಬೇಡಿ. ನಾನ ಬರುತ್ತೇನೆ'' ಎಂದು ಡಾಕ್ಟರು ಹೊರಟರು.

"ನೀವು ಯೋಚನೆಮಾಡಬೇಡಿ'' ಎಂದು ಡಾಕ್ಟರು ಹೇಳದೆ ಇದ್ದುದು ಎಂದು ?

ರತ್ನ ತನ್ನ ವಿಚಾರದಲ್ಲಿ ತಾನೇ ಏನೂ ಇನ್ನೂ ಸುಳಿವು ಕಂಡು ಕೊಂಡಿರಲಿಲ್ಲ. ಮೈಗೇನೋ ಒಂದು ಬಗೆಯ ಆಲಸ್ಯವಾಗಿದೆ ಎಂದಷ್ಟೆ ಎನ್ನಿಸುತ್ತಿತ್ತು; ಏನೋ ಜಡ್ಡು, ಏನೋ ಜುಗುಪ್ಸೆ; ಯಾವ ಕೆಲಸದಲ್ಲೂ ಮನಸ್ಸಿಲ್ಲ, ಉತ್ಸಾಹವಿಲ್ಲ.

ಇದ್ದಕ್ಕಿದ್ದ ಹಾಗೆ ಕೆಂಚಪ್ಪ ಔಷಧದ ಸೀಸೆಯನ್ನು ಮುಂದಿಟ್ಟು, "ಅಮ್ಮಾವರು ಹೇಳವರೆ, ಈ ಔಸಧೀನ ಡಾಕ್ಟರು ಸಾಕು ಅನ್ನೋಗಂಟಾ ಕುಡೀತಾ ಇರಬೇಕಂತೆ" ಎಂದು ಹೇಳಿದಾಗ ಅವಳಿಗೂ ತುಸ ಅಚ್ಚರಿಯೆ. ಸುಂದರಮ್ಮನವರ ಸೂಕ್ಷ್ಮ ದೃಷ್ಟಿಗೆ ತನ್ನ ಅಲಸಿಕೆ ವ್ಯಕ್ತಪಟ್ಟಿದೆ ಎಂದು ತಿಳಿದಳು.

ರತ್ನ ಮರುಮಾತಾಡದೆ ಅತ್ತೆಯ ಆಜ್ಞೆಯನ್ನು ಪಾಲಿಸತೊಡಗಿದಳು.

ಒಂದು ವಾರ ಕಳೆಯಿತು. ಡಾ|| ರಘುರಾಂ ನಿರೀಕ್ಷಿಸಿದ ಪ್ರತಿ ಕ್ರಿಯೆ ಕಂಡುಬರಲಿಲ್ಲ. ಸುಂದರಮ್ಮನವರ ಅಪೇಕ್ಷೆಯಂತೆ, ರತ್ನ ಡಾ|| ರಘುರಾಂ ಅವರೊಂದಿಗೆ ಹೆಂಗಸರ ಆಸ್ಪತ್ರೆಗೆ ಕಾರಿನಲ್ಲಿ ಹೋಗಲೇ ಬೇಕಾಯಿತು. ಆಗಲೀಗ ಅವಳ ಮನಸ್ಸಿನ ಮೂಲೆಯಲ್ಲಿ ಭಯಂಕರ ಸಂದೇಹವೊಂದು ತನ್ನ ಕರಾಳ ಮುಖದಿಂದ ಇಣಿಕಿ ನೋಡಿ ತನ್ನನ್ನು ಅಣಕಿಸಿದಂತೆ ಅವಳಿಗೆ ವ್ಯಕ್ತವಾಯಿತು. ಯತ್ನವಿಲ್ಲದೆ ವೈದ್ಯ ಪರೀಕ್ಷೆಗೆ ತಲೆಬಾಗಿದಳು.

ಅಲ್ಲಿ ಸಂದೇಹ ಖಚಿತವಾಯಿತು. ಒಳಗೆ ಕರೆದೊಯ್ದು ಪರೀಕ್ಷೆ ಮಾಡಿದ 'ಲೇಡಿ ಡಾಕ್ಟರ್', "ಗರ್ಭಿಣಿ ಕಣಮ್ಮಾ. ಎರಡು ತಿಂಗಳೂ ಇಲ್ಲ ಅಂತ ಕಾಣುತ್ತೆ ಅಲ್ಲವೆ?" ಎಂದರು, ತಮ್ಮ ಪರೀಕ್ಷೆಯಿಂದ ಮತ್ತು ತಮ್ಮ ಪ್ರಶ್ನೆಗಳಿಗೆ ದೊರೆತ ಉತ್ತರದಿಂದ.

ಲೇಡಿ ಡಾಕ್ಟರ ಮುಖ ಸುಪ್ರಸನ್ನವಾಗಿತ್ತು; ರತ್ನನನ್ನು ಅಭಿನಂದಿಸುವ ರೀತಿಯಲ್ಲಿತ್ತು.

ತಮ್ಮ ಪರೀಕ್ಷೆಯ ಫಲಿತಾಂಶವನ್ನು ಲೇಡಿ ಡಾಕ್ಟರ್ ಹೊರಬಂದು ರಘುರಾಂ ಅವರಿಗೆ ನಸುನಗುತ್ತ ತಿಳಿಸಿದರು. ಆಕೆ ಈ ಸಂಗತಿಯನ್ನು ರತ್ನನಿಗೆ ತಿಳಿಸಿಲ್ಲ ಎಂದು ರಘುರಾಂ ಭಾವಿಸಿದರು.

ರತ್ನನ ಮುಖ ಮಾತ್ರ ಕುಗ್ಗಿತ್ತು—ನಾನು ಗರ್ಭಿಣಿ! ಈ ಸಂಗತಿ ಈಗ ಸುಂದರಮ್ಮನವರಿಗೂ ಡಾ|| ರಘುರಾಂ ಅವರಿಗೂ ತಿಳಿದುಹೋಯಿತು!

ರಾಜುವಿಗೂ ತಿಳಿಯುವುದರಲ್ಲಿ ಸಂದೇಹವಿಲ್ಲ.

ಹೀಗಾಗುವುದೆಂದು ತನಗೆ ಗೊತ್ತಿರಲಿಲ್ಲ. ಏನು ಮಾಡಬೇಕು? ಮುಂದೆ ಏನು ಮಾಡಬೇಕು? ಇದರಲ್ಲಿ ತನ್ನ ಅಪರಾಧ ಎಷ್ಟೋ ರಾಜು ವಿನದೂ ಅಷ್ಟೇ ಅಪರಾಧವಿದೆ. ಅವನಿಗೆ ವಿಷಯ ತಿಳಿಸಬೇಡವೆ? ಅವನ ಸಲಹೆ ಪಡೆಯಬೇಡವೆ?

ಆಸ್ಪತ್ರೆಯಿಂದ ಮನೆಗೆ ಹಿಂದಿರುಗುವಾಗ ಕಾರಿನಲ್ಲಿ ರತ್ನನ ಮನಸ್ಸಿನಲ್ಲಿ ಇವೇ ಬಗೆಯ ಆಲೋಚನೆಗಳು.

ರತ್ನ ತಾನು ತಾಯಾಗಬೇಕೆಂದು ಬಯಸಿದವಳಲ್ಲ; ತಾಯಾಗ ಲಿರುವವಳು ಎಂಬ ಹಿಗ್ಗಿಲ್ಲ.

ರಾಜುವಿಗೆ ಹೇಳಿಕೊಂಡು ಏನಾದರೂ ಔಷಧಿ ತರಿಸಿಕೊಂಡು ಗರ್ಭವನ್ನು ನಾಶಮಾಡಿಕೊಂಡರೋ? ಏಕಾಗಬಾರದು ?

ತಾನು ಗರ್ಭಿಣಿಯಾದ ವಿಷಯ ಅತ್ತೆಗೆ, ಡಾಕ್ಟರಿಗೆ, ತಿಳಿಯುವು ದಕ್ಕೆ ಮುಂಚೆ ಆಗಿದ್ದರೆ ಹಾಗೆ ಮಾಡಬಹುದಾಗಿತ್ತು. ಈಗ, ಆ ಎರಡನೆಯ ಅಪರಾಧದ ವಿಷಯವೂ ಗೊತ್ತಾಗುತ್ತದೆ. ಅತ್ತೆಯ ದೃಷ್ಟಿ ಯಲ್ಲಿ ತಾನು ಎಂತಹ ನಿಕೃಷ್ಟವಸ್ತುವಾಗುತ್ತೇನೆ ?

ತನಗೇಕೆ ಈ ವಿಷಯದ ಸೂಚನೆ ಮುಂದಾಗಿ ತಿಳಿಯಲಿಲ್ಲ? ಯಾಕೆ ಉದಾಸೀನ ಮಾಡಿದೆ? ಗೊತ್ತಾಗಿದ್ದರೆ, ಆಗಲೇ ಏನಾದರೂ ಔಷಧ ಸೇವಿಸಿ ಸರಿಪಡಿಸಿಕೊಳ್ಳಬಹುದಾಗಿತ್ತಲ್ಲವೆ?

ಇದು ಯಾಕೆ ಹೀಗಾಯಿತು? ರಾಜು ಬಲಾತ್ಕರಿಸಿದ್ದು ದಿಟ; ತಾನು ಅವನಿಗೆ ಸೋತದ್ದೂ ಅಷ್ಟೇ ದಿಟ. ಹೀಗೆ ಪರಿಣಮಿಸುವುದೆಂದು ಇಬ್ಬರೂ ಮುಂಗಾಣಲಿಲ್ಲ.

ಮುಂದೆ—ಅತ್ತೆಯ ತಿರಸ್ಕಾರ, ಕ್ರೋಧ; ಅನಂತರ ಗಂಡನ ತಿರಸ್ಕಾರ, ಕ್ರೋಧ. ಇಷ್ಟಕ್ಕೆ ಮುಗಿಯುವುದೇ ?

ಮನೆ ಬಿಟ್ಟು ಹೊರಡು ಎಂದರೋ ?

ಅದಕ್ಕಿಂತ ಆತ್ಮಹತ್ಯೆ ಮೇಲಲ್ಲವೆ ?

ಆತ್ಮಹತ್ಯೆ !—ಹೇಗೆ ? ರಾಜುವನ್ನೇ ಕೇಳಿದರೆ ವಿಷ ತಂದು ಕೊಟ್ಟಾನೆ?........

ಅನಿಷ್ಟ ಯೋಚನೆಗಳ ಸುಳಿಯಲ್ಲಿ ರತ್ನನ ಮೆದುಳು ಗಿರ‍್ರನೆ ಸುತ್ತುತಿತ್ತು. ಬವಳಿ ಬಂದಂತಾಗಿ ಹಾಗೆಯೇ ಕಾರಿನ ಪೀಠದಮೇಲೆ ಮಲಗಿಬಿಟ್ಟಿದ್ದಳು. ಡಾಕ್ಟರು ಕಾರನ್ನು ನಿಲ್ಲಿಸಿದಾಗ, ಅವಳನ್ನು ಮೃದುವಾಗಿ ಎಚ್ಚರಿಸಿ, ಕೈಹಿಡಿದು ಒಳಕ್ಕೆ ಕರೆದುಕೊಂಡು ಹೋಗಬೇಕಾಯಿತು. ಆಮೇಲೆ ಪರೀಕ್ಷೆ ಮಾಡಿದ್ದರಲ್ಲಿ, ಅವಳಿಗೆ ಸ್ವಲ್ಪ ಜ್ವರವೂ ಬಂದಿತ್ತು. ಕೆಂಚಪ್ಪನಿಗೆ ಹೇಳಿ ಹಾಸಿಗೆ ಬಿಚ್ಚಿಸಿ, ಅವಳನ್ನು ಮಲಗುವಹಾಗೆ ಹೇಳಿದರು.

"....ನೋಡಿದೆಯಾ ಅಮ್ಮ, ಸ್ವಲ್ಪ ಜ್ವರವೂ ಬಂದಿದೆ. ಲೇಡಿ ಡಾಕ್ಟರು ಪರೀಕ್ಷೆ ಮಾಡಿಬಿಟ್ಟರೆ ಒಳ್ಳೆಯದು ಅಂತ ಕರೆದುಕೊಂಡು ಹೋಗಿದ್ದೆ, ಅಷ್ಟೆ. ಪಾಪ, ನಿಮ್ಮ ಅತ್ತೆ ಹೊರಕ್ಕೆ ಹೊರಡುವಹಾಗೇ ಇಲ್ಲವಲ್ಲ. ಇನ್ನೇನೂ ಆಗಿಲ್ಲ, ಯೋಚನೆಮಾಡಬೇಡ. ಸಂಪೂರ್ಣ ವಿಶ್ರಾಂತಿ ತೆಗೆದುಕೋ, ಎಲ್ಲ ಸರಿಹೋಗುತ್ತೆ...."

"ಬಹುಶಃ ರತ್ನನಿಗೇ ವಿಷಯ ಗೊತ್ತಿಲ್ಲ; ನಮಗೆ ಗೊತ್ತಿದೆ ಎನ್ನುವುದೂ ಗೊತ್ತಿಲ್ಲ. ಅವಳಿಗೆ ವಿಷಯ ತಿಳಿಯುವುದಕ್ಕೆ ಮುಂಚೆಯೇ ಏನಾದರೂ ಪವಾಡ ಮಾಡಿ ಸಂಗತಿಯನ್ನು ಹೇಗಾದರೂ ಸರಿಪಡಿಸಬೇಕು" ಎಂದು ಡಾಕ್ಟರು ಮನಸ್ಸಿನಲ್ಲಿಯೇ ದೊಂಬರಾಟ ಆಡಿದರು.

ಡಾಕ್ಟರ ಬರವನ್ನು ಸುಂದರಮ್ಮನವರು ಮುಳ್ಳಮೇಲೆ ಮಲಗಿ ಕಾದಿದ್ದರು.

"ಸಂದೇಹವಿಲ್ಲ ಅಮ್ಮಾ...."

ಡಾಕ್ಟರ ಉತ್ತರವನ್ನು ಸುಂದರಮ್ಮನವರು ಪ್ರಯತ್ನಪೂರ್ವಕವಾಗಿ ಸಮಾಧಾನದಿಂದ ಸ್ವೀಕರಿಸಿದರು.

"ನೋಡಿದಿರಾ ರಘುರಾಮಯ್ಯನವರೆ, ಕಡೆಗೂ ನನ್ನ ಹಾಳು ಊಹೆ ನಿಜವಾಯಿತೋ ? ಯಾರು ಅಂತ ನಿರ್ಧಾರವಾದರೆ ಮುಂದಿನ ಯೋಚನೆ ಏನಾದರೂ ಮಾಡಬಹುದು ಅಲ್ಲವೆ?"

ಸುಂದರಮ್ಮನವರ ಧ್ವನಿ ಆಗಲೇ ಸ್ವಲ್ಪ ಕುಗ್ಗುತ್ತಿತ್ತು. ಡಾ|| ರಘುರಾಂ ಅವರಿಗೆ ಸಮಾಧಾನ ಹೇಳುವ ರೀತಿಯಲ್ಲಿ ನುಡಿದರು.

"....ಅಮ್ಮಾ, ಆಗಬಾರದ್ದು ಆಗಿ ಹೋಗಿದೆ. ಅದನ್ನ ಹೇಗಾದರೂ ಮಾಡಿ ಸರಿಪಡಿಸುವುದಕ್ಕೆ ಮುಂದಿನ ಉಪಾಯ ಹುಡುಕಬೇಕೇ ಹೊರತು, ಆದ್ದದ್ದನ್ನ ಕುರಿತು ಸುಮ್ಮನೆ ಚಿಂತಿಸಿ ಫಲವಿಲ್ಲ. ದಯವಿಟ್ಟು ಈ ವಿಚಾರ ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ...."

"ಹೇಳುವುದು ಸುಲಭ ಡಾಕ್ಟರೇ. ಅದು ಹೇಗೆ ಮನಸ್ಸಿಗೆ ಹಚ್ಚಿಕೊಳ್ಳದೆ ಇರುವುದು? ಶಾಮಣ್ಣ ಸೀಮೆಗೆ ಹೋಗಿರುವುದು ಪ್ರಪಂಚಕ್ಕೇ ಗೊತ್ತು. ಶಾಮಣ್ಣ ಇಲ್ಲದೆ ಇರುವಾಗ ರತ್ನ ಹೀಗೆ ಅಂತ ಜನಕ್ಕೆ ಈಗ ಗೊತ್ತಾಗದೆ ಇರುತ್ತೆಯೆ? ಬೀದಿಯ ಮಾತಾಗುವುದಕ್ಕೆ ಮುಂಚೆ ಏನಾದರೂ ಮಾಡಬೇಕೋ ಇಲ್ಲವೋ, ಡಾಕ್ಟರೆ? ನಮ್ಮ ಗ್ರಹಚಾರ, ಮನೆಗೆ ಎಂತಹ ಕಳಂಕ ಬರುವ ಹಾಗಾಯಿತು, ನೋಡಿ? ಈಗ ನೀವೇ ನನಗೆ ದಿಕ್ಕು. ಹೇಗಾದರೂ ಇದರಿಂದ ನೀವು ನಮ್ಮನ್ನ ಪಾರು ಮಾಡಬೇಕು, ಡಾಕ್ಟರೇ...." ಎಂದು ದೀರ್ಘವಾಗಿ ಸ್ವರವೆಳೆದು, ಅಂಗಲಾಚಿಕೊಂಡರು.

"ಏನು ಮಾಡಬೇಕು ಅನ್ನುವುದನ್ನು ನಾನು ಯೋಚನೆ ಮಾಡಿ ಹೇಳುತ್ತೇನೆ. ನನಗೆ ಒಂದು ದಿನದ ಮಟ್ಟಿಗೆ ಕಾಲಾವಕಾಶ ಕೊಡಿ...."

"ಒಂದು ದಿನ ಅಲ್ಲದೆ ಹೋದರೆ, ಒಂದು ವಾರ ತೆಗೆದುಕೊಳ್ಳಿ. ಸದ್ಯಕ್ಕೆ, ರತ್ನನಿಗೆ ಮೈಗೆ ಸರಿಯಿಲ್ಲ ಅಂತ ಸಂಗೀತ ಪಾಠಾನೂ ನಿಲ್ಲಿಸಿ ಬಿಡುತ್ತೇನೆ...."

"ನೀವು ಏನೂ ಮಾಡಬೇಡಿ. ನಿತ್ಯ ಹೇಗೆ ನಡೆಯುತ್ತಿತ್ತೋ ಹಾಗೆ ನಡೆದುಕೊಳ್ಳಲಿ. ವಿಷಯ ನಮಗೆ ಗೊತ್ತಿದೆ ಅನ್ನುವುದು ರತ್ನನಿಗೆ ಕೂಡ ತಿಳಿಯುವುದು ಬೇಡ...."

"ಹಾಗೇ ಆಗಲಿ. ನೀವು ಹೇಳಿದ ಹಾಗೆ."

ಡಾ|| ರಘುರಾಂ ಸುಂದರಮ್ಮನವರನ್ನು ಬೀಳ್ಕೊಂಡು ಹೋಗುವಾಗ, ಅವರಿಗೆ ಹೇಳಿ ಕೆಂಚಪ್ಪನನ್ನೂ ಜೊತೆಯಲ್ಲಿ ಕರೆದೊಯ್ದರು.

ಕಾರಿನ ಸವಾರಿಗೆ ಅವನು ಎಂದೂ ಸಿದ್ಧ. ಡಾಕ್ಟರು ಹೇಳಿದ್ದೇ ತಡ, ಕಾರಿನ ಹಿಂದಿನ ಪೀಠ ಏರಿದ.

ಡಾಕ್ಟರ್ ರಘುರಾಂ ಕಾರನ್ನು ನಿಧಾನವಾಗಿಯೆ ಬಿಟ್ಟುಕೊಂಡು ಹೋದರು; ಕೆಂಚಪ್ಪನಿಗೆ ಸುಂದರಮ್ಮನವರ ಮನೆಯ ವಿಚಾರವಾಗಿ ಕೆಲವು ಸಾಮಾನ್ಯ ಪ್ರಶ್ನೆಗಳನ್ನು ಹಾಕಿ, ಬೇಕಿಲ್ಲದ ಉತ್ತರಗಳನ್ನು ಪಡೆದರು. ಅನಂತರ ಮೆಲ್ಲನೆ ವಿಷಯಕ್ಕೆ ಪ್ರವೇಶ ಮಾಡಿದರು:

"ಲೋ ಕೆಂಚಪ್ಪ...."

ಡಾಕ್ಟರ ಹಾಸ್ಯೋಕ್ತಿಗೆ ಕೆಂಚಪ್ಪ ನಕ್ಕ.

"ಅಲ್ಲ, ಅದು ಯಾಕೆ ಹಾಗೆ ಕಿರಿಚಿಕೊಳ್ಳುತ್ತೀಯೆ, ಕಂಚು ಹೊಡೆದ ಹಾಗೆ? ಮೆಲ್ಲಗೆ ಮಾತಾಡೋ...."

"ಕಾರು ಭರ್ರಂತ ಹೋಯ್ತಾದಲ್ಲ, ನನ್ನ ಮಾತು ನನಗೇ ಕೇಳೋ ಕಿಲ್ಲ, ಗಟ್ಟಿಯಾಗಿ ಮಾತಾಡವೆ ಹೋದ್ರೆ.... ಗಾಳಿ ಮಾತಾಗಬಾರದು, ನೋಡಿ; ಗಟ್ಟಿ ಮಾತಾಗಿರಲಿ ಅಂತ....."

ಕೆಂಚಪ್ಪನ ಹಾಸ್ಯೋಕ್ತಿ ಕೇಳಿ ಡಾಕ್ಟರಿಗೂ ನಗು ಬಂದಿತು.

"ನಿನಗೆ ಕೇಳವೆ ಹೋದ್ರೆ ಚಿಂತೆಯಿಲ್ಲ. ನನಗೆ ಕೇಳಿದರೆ ಸಾಕು. ಎಲ್ಲಿ, ಈಗ ನಾನು ಕೇಳಿದ್ದಕ್ಕೆ ಮೆಲ್ಲಗೆ ಹೇಳು. ಕಾರು ಭರ್ ಅಂತ ಇಲ್ಲ ಈಗ. ....ಈಗ ಸುಮಾರು ಎರಡು ಮೂರು ತಿಂಗಳಿಂದ ರತ್ನಮ್ಮನೋರು ಒಬ್ಬರೇನೇ ಎಲ್ಲಾದರೂ ಹೋಗಿರೋದು ಉಂಟೇನೋ ?"

"ಅಲ್ಲ, ನೀವು ಕೇಳೋದು ಒಳ್ಳೇ ಸರಿಯಾಗೈತೆ. ಅವರು ಹೋಗು ವಾಗ ನನ್ನ ಹೇಳಿ ಕೇಳಿ ಹೋಗ್ತಾರಾ ?"

"ನಿನ್ನ ಕೇಳಬೇಕಾಗಿಲ್ಲವೋ. ಅವರು ಒಬ್ಬರೇ ಹೊರಕ್ಕೆ ಹೋದ ದ್ದನ್ನು ನೀನು ಎಂದಾದರೂ ಕಂಡಿದ್ದೀಯೇನೋ?"

"ಅಷ್ಟೆಲ್ಲಾ ಎಲ್ಲಿ ನಿಗಾ ಮಡಗೋಕಾಯ್ತದೆ ಬುದ್ಧಿ? ಪುಸಕ್ ಅಂತ ಹೋಗಿ ಪುಸಕ್ ಅಂತ ಬಂದರೆ ಅದು ಹೆಂಗೆ ಕಾಣೋವ್ನಾ?"

"ಅದು ಸರಿ ಅಂತ ಇಟ್ಟುಕೋ. ಅದಲ್ಲ, ನಾನು ಕೇಳಿದ್ದು. ಸಾಮಾನ್ಯವಾಗಿ ಅವರ ಪದ್ಧತಿ ಹೇಗೆ ಅಂತ? ಹೊರಕ್ಕೆ ಹೊರಟರೆ ಒಬ್ಬರೇ ಹೋಗುತ್ತಾರೆಯೋ, ಇಲ್ಲ ಯಾರಾದರೂ—ನೀನೋ ರಾಜಪ್ಪ

ನೋರೋ ಜೊತೆಗೆ ಹೋಗ್ತಾರೋ ಅಂತ ಕೇಳಿದೆ...."

"ಸಾಮಣ್ಣೋರು ಸೀಮೆಗೆ ಹೋದರು ನೋಡಿ, ಅವೊತ್ತಿನಿಂದ ಚಿಕ್ಕವ್ವಾವ್ರು ಹೊರಕ್ಕೆ ಹೊಂಟಿದ್ದೇ ನಾ ಕಾಣೆ...."

"ಅದು ಯಾರೋ ಶ್ಯಾಮಲಾ ಅಂತ ಅವರ ಸ್ನೇಹಿತೆ ಅಂತೆ, ಅವರ ಮನೆಗೂ ಹೋಗುತ್ತಾ ಇರಲಿಲ್ಲವೇನೋ"?

"ನಾ ಕಂಡಂಗೆ ಇಲ್ಲ ಬುದ್ಧಿ. ಆ ಸಾಮಲವ್ವಾನೇ ಈ ಕಡೆ ಒಂದೆರಡು ದಫ ಬಂದಿದ್ರು, ಅಷ್ಟೆ."

"ಸರಿಯೆ. ನಿಮ್ಮ ಮನೆಗೆ ಸಂಗೀತದ ಮೇಷ್ಟ್ರು ಅಲ್ಲದೆ ಇನ್ನು ಯಾರಾದರೂ ಹೊರಗಿನ ಗಂಡಸರು ಬಂದು ಹೋಗುತ್ತ ಇದ್ದರೇನೋ?"

"ಯಾರೂ ಕಾಣಲಿಲ್ಲ ಬುದ್ಧಿ. ರಾಜಪ್ಪನೋರ ಸ್ನೇಯಿತರು ಒಬ್ಬಿಬ್ರು ಬರೋದು ಉಂಟು. ಬಂದ್ರೂನೂ, ಹೊರಗೇ ನಿಂತ್ಕೊಂಡು ರಾಜಪ್ನೋರ್ನ ಕೂಗ್ತಾರೆ. ಮನೇಲಿ ಇದ್ದರೆ ಇವರೇ ಹೊರಕ್ಕೆ ಹೋಗೋದೇ ಸಿವಾಯಿ, ಒಳಕ್ಕೆ ಯಾರೂ ಬಾ ಅಂದ್ರೂ ಬರೋಕಿಲ್ಲ. ಅದರ ಗುಟ್ಟು ನಿಮಗೆ ಗೊತ್ತು ತಾನೆ?"

"ಏನು ಕೆಂಚಪ್ಪ ಅದು?" ಎಂದು ರಘುರಾಂ ಕಪಟ ಕುತೂಹಲ ವನ್ನು ನಟಿಸಿದರು.

"ಅಂದರೆ, ಅವ್ವಾವ್ರಿಗೆ ಹೇಳಬಾರ್ದು ಬುದ್ಧಿ. ಪಾಪ, ಮನಸ್ಸಿನಾಗೆ ತುಂಬ ನೊಂದುಕೊಂಡಾರು..."

"ಅದು ಏನೂ ಅಂತ ?"

"ರಾಜಪ್ಪನೋರು ಇದಾರೆ ನೋಡಿ...."

"ಹ್ಞೂ."

"ಅವರ ಅಣ್ಣ ಸಾಮಣ್ಣನ ಹಂಗಲ್ಲ; ತುಂಬಾ ಸೀಗರೇಟು ಸೇದು ತ್ತಾರೆ ಬುದ್ದಿ, ಜೊತೆಯವರ ಕೂಡ. ಮನೆ ಒಳಗೆ ಸೇದೋಕಿಲ್ಲ; ಅಷ್ಟೆ. ಅದಕ್ಕೇನೆ ಅವರ ಜೊತೆಯೋರು ಮನೆ ಒಳಕ್ಕೆ ಬರೋಕಿಲ್ಲ. ಹೊರಗೆ ಅಂದರೆ, ಯಾರಿಗೂ ಕೇರ್ ಮಾಡೋದಿಲ್ಲ. ಆ ಬಿನ್ನಿಮಿಲ್ ಕೊಳವೆ ಐತೆ ನೋಡಿ, ಹಂಗೆ ಸದಾ ಹೊಗೆ ಬಿಡುತಾ ಇರೋದೇ...."

ಹೀಗೆ ಮಾತು ಎಲ್ಲಿಂದೆಲ್ಲಿಗೋ ಹರಿಯಿತು. ಡಾ|| ರಘುರಾಂ

ಬೇಕೆಂದೇ ಅವನ ಅಸಂಬದ್ಧಪ್ರಲಾಪಕ್ಕೆ ಅವಕಾಶ ಕೊಟ್ಟರು. ಎಂದೂ ಇಲ್ಲದ್ದು ಇಂದು ಸುಂದರಮ್ಮನವರ ಮನೆಯವರ ಬಗ್ಗೆ ತಾವು ಅವನಿಗೆ ಏನೇನೋ ಪ್ರಶ್ನೆಗಳನ್ನು ಹಾಕಿದ್ದರಿಂದ ಅವನ ಮನಸ್ಸಿನಲ್ಲಿ ಇಲ್ಲದ ಸಂಶಯ ಮೂಡಬಾರದೆಂವೇ ಅವರ ಉದ್ದೇಶ.

ಷಾಪನ್ನು ತಲಪಿದ ಮೇಲೆ, ಡಾ|| ರಘುರಾಂ ರತ್ನನಿಗೆಂದು ಔಷಧವನ್ನು ಮಾಡಿ ಕೆಂಚಪ್ಪನ ಕೈಗೆ ಕೊಟ್ಟು, ನಿತ್ಯ ಬಂದು ತೆಗೆದು ಕೊಂಡು ಹೋಗುವಂತೆ ಅವನಿಗೆ ಸೂಚನೆ ಕೊಟ್ಟರು.

ಔಷಧಿ ಕೊಟ್ಟ ಕೂಡಲೆ, ಮತ್ತೆ ಕೆಂಚಪ್ಪನನ್ನು ಕಾರಿನಲ್ಲಿ ಕೂರಿಸಿ ಕೊಂಡು ಸುಂದರಮ್ಮನವರ ಮನೆಯಕಡೆಗೆ ಹಿಂದಿರುಗಿದರು. ಅವರು ಅವನಿಗೆ ಒಂದು ಪ್ರಶ್ನೆ ಹಾಕುವುದನ್ನು ಮರೆತಿದ್ದರು. ಮತ್ತೆ ಯಾವ ಯಾವುದೋ ಮಾತನ್ನೆತ್ತಿ, ಪ್ರಸಕ್ತವಾದ ವಿಷಯಕ್ಕೆ ಹೊರಳಿದರು:

"ರತ್ನಮ್ಮನೋರ ಸಂಗೀತದ ಅಭ್ಯಾಸ ಚೆನ್ನಾಗಿ ನಡೆಯುತ್ತಾ ಇದೆಯೋನೋ ?"

"ನಡೀದೇ ಏನು ಬುದ್ಧಿ? ಕೈ ತುಂಬಾ ಕಾಸು ಮಡಗಿದರೆ ಸರಿ, ಯಾವ್ನೋನಾದರೂ ಬಂದು ಕಲಿಸಿ ಹೋಗ್ತಾನೆ,"

"ಮೇಷ್ಟ್ರು ತಪ್ಪಿಸಿಕೊಳ್ಳದೆ ಬರುತ್ತಾರೇನೋ, ಕ್ರಮವಾಗಿ."

"ಒಳ್ಳೆಯವರು ಬುದ್ಧಿ ಅವರು. ಹಂಗೆಲ್ಲಾ ತಪ್ಪಿಸಿಕೊಳ್ಳೋಕಿಲ್ಲ. ತಪ್ಪಿಸಿಕೊಳೋದಾದ್ರೆ, ಮುಂದಾಗೆ ತಿಳಿಸಿಬಿಡ್ತಾರೆ."

"ಅವರು ರತ್ನಮ್ಮನೋರಿಗೆ ಪಾಠ ಹೇಳುವಾಗ ಜೊತೆಗೆ ಯಾರೂ ಇರುವುದಿಲ್ಲವೇನೋ?"

"ರಾಜಪ್ಪನೋರೇ ಇರ್ತಾರಲ್ಲ? ಅವರೂ ಪೀಟಿಲು ಕಲೀತ ಇದಾ ರಲ್ಲ, ಬುದ್ಧಿ. ರತ್ನಮ್ಮನೋರಿಗಿಂತ ಪಸಂದಾಗಿ ನುಡಿಸುತಾರೆ. ಇಬ್ಬರೂ ಒಂದಿಗೇನೇ ಕಲೀತಾರೆ, ಒಂದಿಗೇನೇ ಬಾರಿಸ್ತಾ ಕುಂತುಬಿಡುತಾರೆ. ಒಂದುದಿನ, ಇಬ್ಬರೂ ಊಟಕ್ಕೆ ಕೂಡ ಏಳದೆ ರಾತ್ರಿ ಒಂಬತ್ತು ಗಂಟೆ ಮೇಲೂ ಬಾರಿಸ್ತಾ ಕುಂತುಬಿಟ್ಟದ್ರು. ಅವರು ಜೋಡೀಮೇಲೆ ಪೀಟೀಲು ಕುಯ್ತಾ ಇದ್ರೆ, ನನಗೆ ಹಂಗೇನೇ ಜೊಂಪು ಹತ್ತಿಬಿಡೋದಾ! ಭಟ್ರು ಬಂದು ಎಬ್ಬಿಸ್ದಾಗಲೆ ನನಗೆ ಎಚ್ಚರ. ಅವರ ಜೋಡಿ ಪಿಟೀಲು ಅಂದರೆ

ದೊಡ್ಡವ್ವಾವ್ರೂ ತುಂಬ ಖುಸಿಬೀಳ್ತಾರೆ.....''

"....ಓ, ರಾಜಪ್ಪನೋರೂ ಪಿಟೀಲು ಕಲಿಯತ್ತಾ ಇದಾರೋ, ರತ್ನ ಮ್ಮನೋರ ಜೊತೆಗೆ! ನನಗೆ ಗೊತ್ತೇ ಇರಲಿಲ್ಲ...."

ರಘುರಾಂ ಅವರಿಗೆ ನಿಜವಾಗಿಯೂ ಆ ಸಂಗತಿ ತಿಳಿಯದು. ಸುಂದ ರಮ್ಮನವರೂ ತಿಳಿಸಿರಲಿಲ್ಲ. ಹಾಗೆ ತಿಳಿಸಲು ಕಾರಣವೂ ಇರಲಿಲ್ಲ.

ಡಾ|| ರಘುರಾಂ ಕೆಂಚಪ್ಪನಿಂದ ತಮಗೆ ಎಷ್ಟು ಅವಶ್ಯವೋ ಅಷ್ಟು ವಿಷಯ ಸಂಗ್ರಹವನ್ನು ಮಾಡಿದ್ದರು. ಸುಂದರಮ್ಮನವರ ಮನೆಯನ್ನು ತಲಪಿದಾಗ, ಕೆಂಚಪ್ಪನನ್ನು ಕಾರಿನಿಂದ ಇಳಿಸಿದರು.

''....ನನಗೆ ಊಟಕ್ಕೆ ಹೊತ್ತಾಯಿತು. ನಾನು ನಾಳೆ ನಾಳಿದ್ದರಲ್ಲಿ ಬರುತ್ತೀನಿ ಅಂತ ಅಮ್ಮಾವರಿಗೆ ತಿಳಿಸೋ. ರತ್ನಮ್ಮನವರಿಗೆ ನಿತ್ಯ ಬಂದು ಔಷಧ ತೆಗೆದು ಹೋಗು'' ಎಂದು ಕೆಂಚಪ್ಪನಿಗೆ ಹೇಳಿ, ಹಿಂದಿರುಗಿದರು.

## ೩೦

ಡಾ|| ರಘುರಾಂ ತಾವು ಹೇಳಿದ್ದಂತೆ ಎರಡು ದಿನ ಬಿಟ್ಟುಕೊಂಡು ಸುಂದರಮ್ಮನವರನ್ನು ಕಾಣಲು ಬಂದರು. ಕರುಳು ಕೊಯ್ಯುವ ಆತಂಕ ದಿಂದ ಅವರ ದೇಹಸ್ಥಿತಿ ಬಲು ಕುಗ್ಗಿತ್ತು. ಡಾಕ್ಟರ್ ಬಂದವರೇ ಮೊದಲು ಅವರ ದೇಹಸ್ಥಿತಿಯನ್ನು ಪರೀಕ್ಷೆಮಾಡಿ, ನಿಟ್ಟುಸಿರು ಬಿಟ್ಟರು.

''....ನಾಳೆಯಿಂದ ನಿಮಗೂ ಔಷಧಿ ಕಳಿಸಿ ಕೊಡುತ್ತೇನೆ, ಮತ್ತೆ. ಸರಿಹೋಗುತ್ತೆ...."

"ನನಗೆ ಔಷಧಿಯ ವಿಚಾರ ಹಾಗಿರಲಿ ಅಪ್ಪ. ಇನ್ನು ನಾನು ಸತ್ತ ರೆಷ್ಟು ಬದುಕಿದರೆಷ್ಟು?''

''ಹಾಗಂದವರುಂಟೆ..,."

"ಆಗಲಿ, ಬದುಕಿರೋಣ. ನನಗೆ ಔಷಧಿಯುಮಾತು ಹಾಗಿರಲಿ. ಆದ ಅಚಾತುರ್ಯಕ್ಕೆ ಏನಾದರೂ ಪರಿಹಾರ ಆದರೆ, ನಿಮ್ಮ ಔಷಧಿ ಇಲ್ಲದೇನೇ ನಾನು ಬದುಕಿರಬಲ್ಲೆ...."

ಡಾಕ್ಟರು ಕೆಲಹೊತ್ತು ಮೌನವಾಗಿದ್ದರು.

ನಿಜವನ್ನು ನುಡಿಯುವುದೇ ಬಿಡುವುದೇ ಎಂದು ಅವರ ಮನಸ್ಸು ತುಡಿಯುತಿತ್ತು. ಎಲ್ಲ ಬಗ್ಗೆಯೂ ಅವರು ಖಚಿತವಾದ ನಿರ್ಧಾರಕ್ಕೇನೋ ಬಂದಿದ್ದರು. ಯಾವ ಪ್ರಶ್ನೆ ಎದ್ದರೆ ಹೇಗೆ ಸಮಾಧಾನ ಹೇಳಬೇಕು, ಎಂದು ತಮ್ಮ ಮನಸ್ಸಿನಲ್ಲಿಯೇ ಒಂದು 'ರಿಹರ್ಸಲ್' (ಪೂರ್ವಾಭ್ಯಾಸ) ಮಾಡಿಕೊಂಡು ಬಂದಿದ್ದರು.

ಸಂಬಂಧ ಪಡದ ಮಾತುಕತೆಗೆ ಅವಕಾಶವೇ ಇರಲಿಲ್ಲ. ಡಾಕ್ಟರ್ ನೇರವಾಗಿ ಮಾತೆತ್ತಿದರು :

"ನಾನು ಹೇಳುವುದರಿಂದ ನೀವು ಗಾಬರಿ ಹಚ್ಚಿಕೊಳ್ಳಕೂಡದು."

"ಹೇಳಿ, ಅದಕ್ಕೇನು. ಇಳಿಯ ಮುಳುಗಿದವಗೆ ಚಳಿಯೇನು ಮಳೆಯೇನು?"

"ರತ್ನ ಒಂದುವೇಳೆ ಮಗು ಹಡೆದರೆ....ಅದು....ನಿಮ್ಮ ಮೊಮ್ಮಗುವೇ. ಅದರಲ್ಲೇನೂ ಸಂದೇಹವಿಲ್ಲ...."

"ರತ್ನನ್ನ...."

"ಅವಳನ್ನ ಕೇಳಿದ್ದೋರು ಉಂಟೆ? ಮನೆಗೆ ಯಾರು ಬರ್‍ತಾರೆ ಯಾರು ಇಲ್ಲ ಏನು ಎತ್ತ ಅಂತ ಕೆಂಚಪ್ಪನ್ನ ಚೆನ್ನಾಗಿ ವಿಚಾರಮಾಡಿದೆ. ರಾಜುವಲ್ಲದೆ ಇನ್ನು ಯಾರ ಮೇಲೂ ಸಂಶಯ ಪಡುವುದಕ್ಕೆ ಅವಕಾಶವೇ ಇಲ್ಲ. ಇದ್ದಷ್ಟರಲ್ಲಿ ಮಧ್ಯಸ್ಥ ಅಂದುಕೊಳ್ಳಬೇಕು...."

"ಅಲ್ಲವೇ ಮತ್ತೆ? ಮನೆಯ ಬಾವಿಗೇ ಬಿದ್ದಹಾಗಾಯಿತು."— ವಿಕಟಹಾಸವೊಂದು ಸುಂದರಮ್ಮನವರ ತುಟಿಯನ್ನು ಕೊಂಕಿಸಿತು."....ಮೊಮ್ಮಗು, ಮೊಮ್ಮಗು....ಎಂಥ ಧರ್ಮಸಂಕಟ, ನೋಡಿ ಡಾಕ್ಟರೆ. ಬಿಸಿಯ ತುಪ್ಪ—ನುಂಗುವುದಕ್ಕಿಲ್ಲ ಉಗುಳುವುದಕ್ಕಿಲ್ಲ. ಇನ್ನು ಅವರನ್ನ ಅಂದು ಆಡಿ ಪ್ರಯೋಜನವೇನು? ನೀವು ಹೇಳಿದಹಾಗೆ ನಾನು ಮಾಡಬೇಕಾಗಿತ್ತು. ರತ್ನ ಶಾಮಣ್ಣನ ಹೆಂಡತಿ ಅನ್ನಿಸಿಕೊಳ್ಳುವ ಬದಲು ರಾಜುವಿನ ಹೆಂಡತಿ ಅನ್ನಿಸಿಕೊಂಡಿದ್ದರೆ, ನಾನು ಈಗ ಹಿಗ್ಗುತಾ ಇರಬಹುದಾಗಿತ್ತಲ್ಲ ಡಾಕ್ಟರೆ! ಅವರಿಬ್ಬರು ಹಸೆಮೇಲೆ ಕೂತು ಇವರಿಬ್ಬರು ಕೂರದೆ ಇರುವುದರಿಂದ, ನ್ಯಾಯವಾಗಬಹುದಾಗಿದ್ದದ್ದು ಅನ್ಯಾಯವಾಗಿದೆ, ಧರ್ಮವಾಗ

ಬಹುದಾಗಿದ್ದದ್ದು ಅಧರ್ಮವಾಗಿದೆ, ಮೆಚ್ಚಿಕೊಳ್ಳಬಹುದಾದ್ದನ್ನು ಮುಚ್ಚಿಕೊಳ್ಳಬೇಕಾಗಿದೆ. ನಾನು ಬಯಸಿದ್ದೊಂದು ಅದು ಆದದ್ದೊಂದು. ಮುಖ್ಯ ತಪ್ಪು ನನ್ನದು. ನಾನು ಹಾಗೆ ಬಯಸಬಾರದಾಗಿತ್ತು. ನನ್ನದು, ಡಾಕ್ಟರೆ, ತಪ್ಪು ನನ್ನದು. ಹೊಂದಿಕೊಂಡಿದ್ದೋರನ್ನ ನಾನು ಅಗಲಿಸೋದಕ್ಕೆ ಪ್ರಯತ್ನಪಟ್ಟರೆ ಅದು ನಡೆಯುತ್ತೆಯೆ? ವಿಧಿ ಹಾಕಿದ್ದ ಗಂಟನ್ನ ನಾನು ಬಿಚ್ಚೋದಕ್ಕೆ ಪ್ರಯತ್ನ ಪಟ್ಟೆ. ಅದು ಸಾಧ್ಯವೇ ಡಾಕ್ಟರೆ? ಆದರೆ, ವಿಧಿ ಹೀಗೆ ಅಂತ ನನಗೆ ಆಗ ಗೊತ್ತಾಗಲಿಲ್ಲ, ಡಾಕ್ಟರೆ. ನಿಮ್ಮ ಮೂಲಕ ಹೇಳಿಸಿತು. ನಾನು ಕಿವಿಗೊಡಲಿಲ್ಲ, ಡಾಕ್ಟರೆ. ದೇವರು, ನಮಗೆ ಹೆಜ್ಜೆ ಹೆಜ್ಜೆಗೂ ಎಚ್ಚರಿಕೆ ಕೊಡುತ್ತಾನೇ ಇರುತ್ತಾನೆ. ನಾವು ಅದನ್ನ ಗಮನಿಸದೆ ಕೆಟ್ಟುಹೋಗುತ್ತೇವೆ. ಅಯ್ಯೋ ಅಯ್ಯೋ....ಎಂಥ ಧರ್ಮಸಂಕಟಕ್ಕೆ ಸಿಲುಕಿಸಿದೆಯಪ್ಪಾ, ವೆಂಕಟಾಚಲಪತಿ. ನನ್ನನ್ನ.... ಅಯ್ಯೋ....''

ಡಾಕ್ಟರ್ ರಘುರಾಂ ಬೇಕೆಂದೇ ಅವರ ವಿಲಾಪಕ್ಕೆ ಸಂಪೂರ್ಣ ಅವಕಾಶ ಕೊಟ್ಟುಬಿಟ್ಟರು. ನುಂಗಿದ ದುಃಖಕ್ಕಿಂತ ಹರಿಯಬಿಟ್ಟ ದುಃಖ ಪರಿಣಾಮದಲ್ಲಿ ಹಿತಕರವೆಂಬುದನ್ನು ಅವರು ಬಲ್ಲರು. ಸುಂದರಮ್ಮನವರ ಉದ್ರೇಕದ ಉರುಬು ತಣ್ಣಗಾಗಿ, ಅವರ ಕಂಬನಿಯು ಕೋಡಿಯೆಲ್ಲ ಬತ್ತಿದಮೇಲೆ, ರಘುರಾಂ ಗಂಭೀರವಾಗಿ ನುಡಿದರು.

''ಮಿಂಚಿದ್ದಕ್ಕೆ ಚಿಂತಿಸಿ ಫಲವಿಲ್ಲ. ದೇವರ ಮೇಲೆ ಭಾರಹಾಕಿ, ಮುಂದಿನ ಯೋಚನೆ ಮಾಡಬೇಕೋ ಇಲ್ಲವೋ?"

"ಅದೇ ಡಾಕ್ಟರೆ, ನಾನು ಕೇಳುವುದು, ಮುಂದಿನ ಯೋಚನೆ ಏನು ಅಂತ?"

"ನಾನು ಹೇಳಿದ್ದನ್ನ ನೀವು ನಡಸಲೇ ಬೇಕು ಅಂತ ಏನಿಲ್ಲ. ನಾನೂ ನಾಲ್ಕಾರು ರೀತಿ ಆಲೋಚನೆ ಮಾಡಿದ್ದೀನಿ. ಬೇರೆ ಸಂದರ್ಭದಲ್ಲಿ ನಾನು ಈ ಸಲಹೆಯನ್ನ ಯಾರಿಗೂ ಕೊಡುತ್ತಿರಲಿಲ್ಲ. ನನ್ನ ಇಷ್ಟು ವರ್ಷಗಳ ವೃತ್ತಿಯಲ್ಲಿ ಈ ಸಲಹೆಯನ್ನು ನಾನು ಯಾರಿಗೂ ಕೊಟ್ಟಿಲ್ಲ. ಮುಂದೆ ಕೊಡುವುದೂ ಇಲ್ಲ. ಆದರೆ ಇದು ವಿಶೇಷ ಸಂದರ್ಭ........"

"ಏನು, ನಿಮ್ಮ ಸಲಹೆ?"

"ರತ್ನನಿಗೆ ಬಹುಶಃ ತಾನು ಗರ್ಭಿಣಿ ಅನ್ನುವ ವಿಷಯ ತಿಳಿದಿರಲಾರದು."

"ಅದು ಹೇಗೆ ಹೇಳುವುದಕ್ಕೆ ಆಗುತ್ತೆ? ಹೆಣ್ಣು ಜಾತಿಗೆ ದೇವರು ಅಷ್ಟು ಬುದ್ಧಿ ಕೊಡದೆ ಇರುತ್ತಾನೆಯೆ? ಹ್ಞೂ, ಗೊತ್ತಿಲ್ಲ ಅಂತ ಇಟ್ಟುಕೊಳ್ಳೋಣ. ನಿಮ್ಮ ಸಲಹೆ ಏನು?"

"ಹೇಗೂ ಔಷಧ ಕೊಡುತ್ತಾ ಇದೇನೆ. ಕೆಲವು ಇಂಜಕ್ಷನ್, ಮಾತ್ರೆಗಳು ಇವೆ. ಅವನ್ನು ಕೊಟ್ಟರೆ ಗರ್ಭ ನಿಲ್ಲುವುದಿಲ್ಲ...."

"ಈಗಲೇ ನಿಂತಿದ್ದರೋ, ಡಾಕ್ಟರೆ?"

"ಇನ್ನೂ ಸ್ವಲ್ಪ ತೀಕ್ಷ್ಣವಾದ ಔಷಧ ಕೊಡಬೇಕು, ಅಷ್ಟೆ."

ರಘುರಾಂ ಅವರ ಸಲಹೆಯನ್ನು ಪರ್ಯಾಲೋಚಿಸುವಂತೆ ಸುಂದರಮ್ಮನವರು ಕೆಲಹೊತ್ತು ಮೌನವಾಗಿದ್ದರು. ಬಳಿಕ, ಸ್ವಲ್ಪವೂ ಪ್ರಕ್ಷುಬ್ಧಗೊಂಡಿಲ್ಲದ ರೀತಿಯಲ್ಲಿ, ದೃಢಕಂಠದಿಂದ, ಒತ್ತಿ ಒತ್ತಿ ನುಡಿದರು:

"ಬಂದ ಅಪಖ್ಯಾತಿ ಬರಲಿ. ಆದದ್ದು ಆಗಲಿ. ಮೊಮ್ಮಗುವನ್ನು ಕೈಯ್ಯಾರ ಕೊಲ್ಲುವುದಕ್ಕೆ ನಾನು ಒಪ್ಪಲಾರೆ, ಡಾಕ್ಟರೆ."

ರತ್ನ ಶಾಮಣ್ಣನನ್ನು ಮದುವೆಯಾಗಬೇಕೆಂದು ಸುಂದರಮ್ಮನವರು ಎಷ್ಟು ಅಚಲ ಅಪೇಕ್ಷೆಯನ್ನು ಹೊಂದಿದ್ದರೋ, ಈಗಣ ಅವರ ಅಪೇಕ್ಷೆಯೂ ಅಷ್ಟೇ ಅಚಲವೆಂಬುದನ್ನು ಡಾಕ್ಟರ್ ರಘುರಾಂ ಅವರ ಮಾತಿನ ರೀತಿಯಿಂದಲೇ ಅರಿತುಕೊಂಡರು. ಅವರೊಂದಿಗೆ ವಾದಿಸಿ ಪ್ರಯೋಜನವಿಲ್ಲವೆಂದೂ ಅವರು ಬಲ್ಲರು.

"ಹಾಗಾದರೆ ಏನು ಮಾಡಬೇಕು ಅಂತ ನಿಮ್ಮ ಇಷ್ಟ?"

"ನನ್ನ ಇಷ್ಟ ತಿಳಿಸಿ ಆಯಿತಲ್ಲ. ಇಂಥ ಸಂದರ್ಭದಲ್ಲಿ, ನನಗೆ ಶಾಮಣ್ಣ ಬೇರೆ ರಾಜು ಬೇರೆ ಅಲ್ಲ. ರಾಜುವಿನ ಮಗುವನ್ನು ನಾನು ಕೊಲ್ಲಗೊಡಿಸಲೆ? ಖಂಡಿತ ಸಾಧ್ಯವಿಲ್ಲ.....ಆದ ತಪ್ಪನ್ನ ತಿದ್ದುವುದಕ್ಕೆ ಏನಾದರೂ ದಾರಿ ಇದ್ದರೆ ತೋರಿಸಿಕೊಡಿ."

"ಹೇಗೆ ತಿದ್ದುವುದು ಸುಂದರಮ್ಮನವರೆ? ಶಾಮಣ್ಣನ ಹೆಂಡತಿಯನ್ನು ರಾಜುವಿನ ಹೆಂಡತಿಯಾಗಿ ಹೇಗೆ ಮಾಡುವುದು.....?"

"ಅದೂ ದಿಟ ಅನ್ನಿ. ಪಾಪ, ನೀವು ತಾನೆ ಏನು ಮಾಡುತ್ತೀರಿ.

ಇರೋ ಒಂದು ದಾರಿ ತಿಳಿಸಿದಿರಿ. ಇಂಥ ಸಂದರ್ಭದಲ್ಲಿ ಎಲ್ಲರೂ ಮಾಡೋದೇ ಅದು. ಬೇರೆ ದಾರಿ ಇಲ್ಲವೆ ಹೋದರೆ ಹಾಗೆ ಮಾಡಬೇಕು ಅಂತ ಕಾಣುತ್ತೆ. ಇನ್ನೇನು ತಾನೆ ಮಾಡ್ತಾರು, ಯಾರು ತಾನೆ? ನೋಡೋಣ, ಹಾಗೇ ಮಾಡಿದರಾಯಿತು" ಎಂದು ಸುಂದರಮ್ಮನವರು ಸೋಲನ್ನೊಪ್ಪಿಕೊಂಡ ರೀತಿ ಕುಗ್ಗಿದ ದನಿಯಲ್ಲಿ ನುಡಿದರು.

"ನಾಳೆಯೋ ಒಂದು ಇಂಜೆಕ್ಷನ್ ಕೊಟ್ಟುಬಿಡಿ ಡಾಕ್ಟರೆ" ಎಂದು ಸುಂದರಮ್ಮನವರು ಸಮಾಪ್ತಿ ವಾಕ್ಯವನ್ನು ನುಡಿದು, ಬೇರೆಯ ಮಗ್ಗುಲಾದರು.

ಅವರು ತುಂಬ ಬಳಲಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅವರನ್ನು ಇನ್ನು ದಣಿಸಬಾರದೆಂದು ಡಾಕ್ಟರ್ ರಘುರಾಂ ಅವರನ್ನು ಬೀಳ್ಕೊಂಡು ಹೊರಟರು.

*　　　*　　　*

ಕಳಂಕ ತಟ್ಟಬಾರದು; ಬಸಿರ ಗೂಸುಳಿ ಸಾಧ್ಯವಾದರೆ ಉಳಿಯಬೇಕು —ಇದು ಡಾಕ್ಟರಿಗೆ ಬಗೆಹರಿಯದ ಸಮಸ್ಯೆಯಾಯಿತು; ಅವರ ಒಂದು ಇರುಳಿನ ನಿದ್ರೆಯನ್ನು ನುಂಗಿತು.

ಡಾಕ್ಟರು ಒಂದು ರಾತ್ರಿ ನಿದ್ರೆಗೆಟ್ಟದ್ದು ವ್ಯರ್ಥವಾಗಲಿಲ್ಲ. ಅವರಿಗೆ ಒಂದು ಪರಿಹಾರೋಪಾಯ ಹೊಳೆದಿತ್ತು. ಆದರೆ ಅದಕ್ಕೆ ಸುಂದರಮ್ಮನವರು ಒಪ್ಪುತ್ತಾರೆಯೋ ಇಲ್ಲವೋ ಎನ್ನುವುದೆ ಅವರ ಸಂದೇಹ. ಅಲ್ಲದೆ, ಆ ಉಪಾಯವನ್ನು ಕಾರ್ಯಕಾರಿಯಾಗಿ ಮಾಡಬೇಕಾದರೆ ಸುಂದರಮ್ಮನವರ ಮನಃಪೂರ್ವಕವಾದ ಸಹಕಾರವೂ ಅತ್ಯಾವಶ್ಯಕವಾಗಿತ್ತು.

ಡಾಕ್ಟರಿಗೆ ಈ ಉಪಾಯ ಹೊಳೆದದ್ದು ಕುರುಡನಿಗೆ ಕಣ್ಣು ಬಂದಂತಾಗಿತ್ತು; ಆರ್ಕಿಮಿಡೀಸನಿಗೆ ಚಿನ್ನದ ಕಿರೀಟದ ದೋಷ ವ್ಯಕ್ತಪಟ್ಟಂತಾಯಿತು. ಹೊಸದಾಗಿ ಹೊಳೆದ ಉಪಾಯವನ್ನು ತಲೆಯಲ್ಲಿರಿಸಿಕೊಂಡು ಬೆಳಗ್ಗೆಯೇ ಸುಂದರಮ್ಮನವರ ಬಳಿಗೆ ಧಾವಿಸಿದರು.

ಅನಿರೀಕ್ಷಿತವಾಗಿ ಡಾಕ್ಟರ್ ರಘುರಾಂ ಬಂದುದನ್ನು ಕಂಡು, ಸುಂದರಮ್ಮನವರ ಮನಸ್ಸಿನಲ್ಲಿಯೂ ಭರವಸೆಯ ಕಿರಣವೊಂದು ಮೂಡಿತು.

ಸುಂದರಮ್ಮನವರು ಅದೇ ತಾನೆ ಕಾಫಿ ಕುಡಿದು ತಮ್ಮ ಕೋಣೆಯಲ್ಲೇ ಮಲಗಿದ್ದರು. ಬಂದ ಡಾಕ್ಟರಿಗೂ ಕಾಫಿಯ ಆತಿಥ್ಯವಾದಮೇಲೆ, ಸುಂದರಮ್ಮನವರೆ ತುಸ ಗೆಲವಿನಿಂದ ಪ್ರಶ್ನಿಸಿದರು :

"ಏನಾದರೂ ದಾರಿ ತೋರಿತೇನು ?"

"ಈ ಉಪಾಯ ನನಗೆ ಹೊಳೆಯದೆ ಇದ್ದರೆ ಆತ್ಮಹತ್ಯೆ ಮಾಡಿ ಕೊಂಡುಬಿಡುತ್ತಿದ್ದೆ. ನನಗೂ...."

"ಅದು ಏನು ಉಪಾಯ, ಬೇಗ ಹೇಳಬಾರದೆ ?"

"ಅಷ್ಟು ಸುಲಭವಾಗಿ ಒಂದುಮಾತಿನಲ್ಲಿ ಹೇಳುವುದಕ್ಕಾಗುವುದಿಲ್ಲ. ನನ್ನ ಉಪಾಯ ಫಲಿಸಬೇಕಾದರೆ, ನಿಮ್ಮ ಸಹಕಾರ ಅತ್ಯಗತ್ಯ."

"ನನ್ನಿಂದ ಏನಾಗಬೇಕು, ಹೇಳಿ ಡಾಕ್ಟರೆ. ಹೇಗೂ ಸಾಯುವ ಮುದುಕಿ. ಮಕ್ಕಳಿಗೋಸ್ಕರ ಪ್ರಾಣ ಬೇಕಾದರೂ ಒಪ್ಪಿಸುತ್ತೇನೆ."

"ಅಲ್ಲಿಯವರೆಗೆ ಹೋಗಬೇಕಾಗಿಲ್ಲ. ನೀವು ಸಕತ್ತು ಖಾಯಿಲೆ ಬೀಳ ಬೇಕು. ಸಾಯುವ ಹಾಗಿದ್ದಾರೆ ಅನ್ನಿಸಿಕೊಳ್ಳುವುದಕ್ಕೆ ಒಪ್ಪಬೇಕು."

"ಇನ್ನು ಹೊಸದಾಗಿ ಖಾಯಿಲೆ ಬೀಳಬೇಕೆ ಡಾಕ್ಟರೆ? ಇಷ್ಟು ಸಾಲದೆ?"

"ಸಾಲದು. ತುಂಬ ಅಸ್ವಾಸ್ಥ್ಯಾವಸ್ಥೆಯಲ್ಲಿರುವ ಹಾಗೆ ನಟಿಸಬೇಕು. ತಿಂಗಳುಕಾಲ ಹಾಸಿಗೆಯಲ್ಲೆ ಮಲಗಿರಬೇಕಾದೀತು...."

"ಏನಪ್ಪ ರಘುರಾಮಯ್ಯ, ಮಕ್ಕಳನ್ನ ಮರುಳುಗೊಳಿಸುವಹಾಗೆ ಮಾತಾಡುತ್ತೀರಲ್ಲ. ನಾನು ಖಾಯಿಲೆ ಬೀಳುವುದಕ್ಕೂ ಆ ವಿಚಾರಕ್ಕೂ ಏನು ಸಂಬಂಧ? ನೀವು ಹೇಳುವುದು ಒಂದೂ ಅರ್ಥವಾಗುವುದಿಲ್ಲವಲ್ಲ?"

"ಅದು ಹೀಗೆ: 'ನಿಮ್ಮ ತಾಯಿಗೆ ಸಕತ್ತು ಖಾಯಿಲೆ. ಈಗಲೇ ಹೊರಟು ಬಾ' ಅಂತ ಶಾಮಣ್ಣನಿಗೆ ಕೇಬಲ್‌ಗ್ರಾಂ (Cablegram ಕಡಲ ತಂತೀ ಸಮಾಚಾರ) ಕೊಟ್ಟು, ಅವನನ್ನ ಕರಸಿಕೊಳ್ಳುವುದು. ನೀವು ಒಂದು ಮಾತು ಹೇಳಿದರೆ ಸಾಕು, ಅವನು ಪ್ರಸ್ತಕ್ಕೆ ಒಪ್ಪಿ ಬಿಡುತ್ತಾನೆ. ಪ್ರಸ್ತಮಾಡಿಕೊಂಡು ಅವನು ಹೊರಟುಬಿಡಲಿ. ರತ್ನ ಗರ್ಭಿಣಿಯಾಗಿ, ಏಳು ತಿಂಗಳಿಗೆ ಹೆರುತ್ತಾಳೆ. ರಾಜುವಿನ ಮಗು ಶಾಮಣ್ಣ ನದಾಗುತ್ತೆ. ಹೇಗಾದರೂ ನಿಮ್ಮ ಮೊಮ್ಮಗು ತಾನೆ? ಅದು ಉಳಿಯುತ್ತೆ.

ಎಲ್ಲ ಸರಿಹೋಗುತ್ತೆ. ಇದು ಬಿಟ್ಟರೆ ಬೇರೆಯ ಉಪಾಯ ಯಾವುದೂ ನನಗೆ ತೋರುವುದಿಲ್ಲ."

"ಕುದುರೆ ಇಲ್ಲದೆ ಗಾಡಿ ಕಟ್ಟುವ ಸಮಾಚಾರವಾಗಿದೆಯಲ್ಲ ಡಾಕ್ಟರೆ, ನೀವು ಹೇಳುವುದು? ಶಾಮಣ್ಣ ಬರದೆ ಹೋದರೋ...."

"ಆ ಮಾತಿಗೆ ಅವಕಾಶವೇ ಇಲ್ಲ. ಅವನು ಬಂದೇ ಬರುತ್ತಾನೆ. ಅವನ ಮನಸ್ಸನ್ನ ನಾನು ಕಾಣೆನೆ?"

"ಅದು ದಿಟ ಅನ್ನಿ. ನನ್ನ ಇಷ್ಟವನ್ನ ಅವನು ನಡಸದೆ ಇರುವುದಿಲ್ಲ. ಅಂತೂ, ಚಿನ್ನದಂತಹ ಹುಡುಗನಿಗೆ ನಾವು ಈಗ ಮೋಸಮಾಡಬೇಕು. ಅದಕ್ಕಾಗಿ ಒಂದು ನಾಟಕ ಆಡಬೇಕು. ನನ್ನ ರೋಗದ ನಾಟಕ; ಅವನ ಪ್ರಸ್ತದ ನಾಟಕ. ಯಾಕೋ ಮನಸ್ಸಿಗೆ ತುಂಬ ಜುಗುಪ್ಸೆ ಯಾಗುತ್ತೆ, ಡಾಕ್ಟರೆ."

"ಹೌದು ಅಮ್ಮಾ, ತುಂಬಾ ಜುಗುಪ್ಸೆಯ ಮಾತು; ಯಾರಿಗೂ ಇಷ್ಟವಿಲ್ಲದ ಕೆಲಸ. ರತ್ನ ಏನು ಸುಖವಾಗಿದ್ದಾಳೆ ಅಂತ ತಿಳಿದಿರಾ? ಅವಳ ಮನಸ್ಸಿನ ಕಸಿವಿಸಿ ನಾನು ಬಲ್ಲೆ. ತಾನು ಗರ್ಭಿಣಿ ಅನ್ನುವುದು ಬಹುಶಃ ಅವಳಿಗೂ ಗೊತ್ತು, ನೀವು ಹೇಳುವ ಹಾಗೆ. ಆದರೆ, ಅವಳಿಗೆ ಗೊತ್ತಿಲ್ಲ, ನಮಗೂ ಗೊತ್ತಿಲ್ಲ ಅನ್ನುವ ಹಾಗೆ ನಟಿಸಬೇಕು. ಉಚ್ಚಕ್ಕಾ ನಟನೆ. ಏನು ಮಾಡುವುದು ಹೇಳಿ. ನನಗೂ ಬೇರೆ ಉಪಾಯ ಇನ್ನೇನೂ ತೋರಲಿಲ್ಲ."

ಡಾಕ್ಟರ್ ರಘುರಾಂ ಅವರ ಸಲಹೆಗೆ ಸುಂದರಮ್ಮನವರು ಒಪ್ಪದೆ ಗತಿಯೆ ಇರಲಿಲ್ಲ. ಮರುಮಾತಾಡದೆ ಒಪ್ಪಿಕೊಂಡರು.

## ೩೧

ಮುಂದಿನ ನಾಟಕಕ್ಕೆಲ್ಲ ಡಾಕ್ಟರ್ ರಘುರಾಂ ಅವರೇ ಸೂತ್ರಧಾರ ರಾಗಬೇಕಾಯಿತು. ಆ ಕಾರ್ಯವನ್ನು ಅವರು ಬಹು ದಕ್ಷತೆಯಿಂದಲೆ ನಿರ್ವಹಿಸಿದರು.

ಅವರು ಮೊದಲು ಮಾಡಿದ ಕೆಲಸ, ಸುಂದರಮ್ಮನವರನ್ನು ಖಾಯಿಲೆ ಬೀಳಿಸಿದ್ದು! ಡಾಕ್ಟರ ಸೂಚನೆಯಂತೆ ಅವರು ಇಪ್ಪತ್ತನಾಲ್ಕು ಗಂಟೆಯೂ

ಹಾಸಿಗೆಯಲ್ಲೆ ಮಲಗಿ ತಮ್ಮ ರೋಗದ ಉಲ್ಬಣಾವಸ್ಥೆಯನ್ನು ನಟಿಸುವ ಹೊಣೆಹೊತ್ತರು.

ಡಾಕ್ಟರ್ ದಿನಕ್ಕೆ ಎರಡು ಸಲ ಬಂದು ಸುಂದರಮ್ಮನವರನ್ನು ಪರೀಕ್ಷೆ ಮಾಡಿ ಹೋಗತೊಡಗಿದರು.

ಕೆಂಚಪ್ಪ, ರಾಜು, ರತ್ನ, ಅಡಿಗೆಯ ಭಟ್ಟರು—ಎಲ್ಲರಿಗೂ ಗಾಬರಿ ಹಿಡಿಯುವ ಸ್ಥಿತಿಯನ್ನು ಸುಂದರಮ್ಮನವರು ಎರಡು ಮೂರು ದಿನಗಳಲ್ಲಿ ಸುಲಭವಾಗಿ ತಂದುಕೊಂಡರು. ತಮ್ಮಲ್ಲಿ ಸಹಜವಾಗಿಯೇ ಇದ್ದ ರೋಗದ ಬಳ್ಳಿಯನ್ನು ಹೊರವಾಗಿ ಹಬ್ಬಿಸಿದರು.

"ಹೆಚ್ಚೆಂದರೆ ಇನ್ನು ಹತ್ತು ಹದಿನೈದು ದಿನ. ಕೇಬಲ್‌ಗ್ರಾಂ ಕೊಟ್ಟು ನಿಮ್ಮ ಅಣ್ಣನನ್ನ ಕರಸಿಕೊಳ್ಳಬೇಕಪ್ಪ" ಎಂದು ಡಾಕ್ಟರ್ ರಾಜುವಿನ ಕಿವಿಯಮೇಲೆ ಹಾಕಿ, ತಾವು ಮೊದಲೇ ಏರ್ಪಾಡು ಮಾಡಿಕೊಂಡಿದ್ದಂತೆ ಶಾಮಣ್ಣನಿಗೆ ಕೇಬಲ್‌ಗ್ರಾಂ ಕಳಿಸಿಯೇ ಬಿಟ್ಟರು.

ಸರಿಯಾಗಿ ಗುರಿಯಿಟ್ಟು ಹೊಡೆದ ಕವಣೆಗಲ್ಲಿಗೆ ಹಕ್ಕಿ ಬೀಳದೆ ಇರುವುದೆ? ಕೇಬಲ್‌ಗ್ರಾಂ ತಲಪಿದೊಡನೆಯೇ ಶಾಮಣ್ಣ ನಿಂತ ನಿಲುವಿನಲ್ಲಿ ಹೊರಟು, ವಿಮಾನ ಹತ್ತಿ ಹೊರಟು ಬಂದು ವಾರದೊಳಗಾಗಿಯೇ ತಾಯಿ ಸೇವೆಗೆ ಸಿದ್ಧನಾದ.

ಬಂದವನೇ ತಾಯ ವಕ್ಷಸ್ಥಳದಲ್ಲಿ ಮೊಗವಿಟ್ಟು ಮಗುವಿನಂತೆ ಬಿಕ್ಕಿ ಬಿಕ್ಕಿ ಅಳತೊಡಗಿದ; ಈಗಲೀಗ, ನಾನಾ ಕಾರಣಗಳಿಗಾಗಿ ತಾಯಿಗೂ ತುಂಬ ದುಃಖವೆನಿಸಿತು. ಧಾರಾಕಾರವಾಗಿ ಕಂಬನಿ ಸುರಿಸಿದರು.

ಶಾಮಣ್ಣ ಬಂದು ಒಂದು ದಿನ ವಿಶ್ರಾಂತಿ ಪಡೆದಾದಮೇಲೆ, ಸುಂದರಮ್ಮನವರು ಡಾಕ್ಟರ್ ರಘುರಾಂ ಅವರನ್ನು ಮುಂದಿಟ್ಟುಕೊಂಡು ತಮ್ಮ ಹೊಸ ಬಯಕೆಯನ್ನು ಮಗನ ಮುಂದಿಟ್ಟರು.

ಡಾಕ್ಟರ್ ರಘುರಾಂ ಅವರೇ ಸುಂದರಮ್ಮನವರ ಪರವಾಗಿ ಮಾತನಾಡಿದರು :

"ನೋಡು ಶಾಮಣ್ಣ, ನೀನು ಕಂಡಿರುವಹಾಗೆ ನಿಮ್ಮ ತಾಯಿಯ ಸ್ಥಿತಿ ತುಂಬ ಕಳವಳಕ್ಕೆ ಕಾರಣವಾಗಿದೆ. ನಾನು ಎಷ್ಟೇ ಭರವಸೆ ಕೊಟ್ಟರೂ ಅವರಿಗೇ ಬದುಕುವ ಆಸೆ ಇಲ್ಲ. ತಾವು ಸಾಯುವುದರೊಳಗೆ

ನಿನ್ನ ಪ್ರಸ್ತ ಆಗಿಬಿಡಬೇಕೆಂದು ಅವರ ಇಷ್ಟ. ಏನೋ ದೇವರ ದಯ ಇದ್ದರೆ, ಮೊಮ್ಮಗುವನ್ನು ನೋಡುವುದಕ್ಕಾದರೂ ಅವರು ಬದುಕಿರಲೂ ಬಹುದು. ಈಗ ಅವರಿಗೆ ಪ್ರಾಣದಾನ ಮಾಡುವುದು ನಿನ್ನ ಕೈಯಲ್ಲಿದೆ. ನೀನು ಯಾವ ಸಬೂಬನ್ನೂ ಮುಂದೊಡ್ಡದೆ ಕೂಡಲೆ ಪ್ರಸ್ತಕ್ಕೆ ಒಪ್ಪಿಬಿಡ ಬೇಕು. ರತ್ನನಿಗೂ ಮೈಗೆ ಹುಷಾರಿರಲಿಲ್ಲ.; ಈಗ ಆರೋಗ್ಯ ವಾಗಿದ್ದಾಳೆ...."

"ಆಗಲಿ ಡಾಕ್ಟರೆ. ನಮ್ಮ ತಾಯಿ ಬದುಕುವುದೊಂದಾದರೆ, ಯಾವ ತ್ಯಾಗಕ್ಕೂ ನಾನು ಸಿದ್ಧನಾಗಿದ್ದೇನೆ. ಅವರು ಹಾಗೆಂದು ತಿಳಿಸಿದರೆ, ನಾನು ಮತ್ತೆ ಇಂಗ್ಲೆಂಡಿಗೂ ಹೋಗುವುದಿಲ್ಲ."

"ಅಂಥಾದ್ದೇನಿಲ್ಲ. ಪ್ರಸ್ತಮಾಡಿಕೊಂಡು, ಅವರ ದೇಹಸ್ಥಿತಿ ಸುಧಾರಿಸುವುದನ್ನು ನೋಡಿಕೊಂಡು, ನೀನು ಮತ್ತೆ ಇಂಗ್ಲೆಂಡಿಗೆ ಹೋಗ ಬಹುದು."

ಇಂಥ ಮಗನಿಗೆ ನಾನು ಮೋಸಮಾಡುತ್ತಿರುವೆನಲ್ಲಾ ಎಂಬ ದುಃಖ ವೊಂದು ಕಡೆ; ಎಂದೂ ತಮ್ಮ ಇಷ್ಟದಂತೆ ನಡೆದುಕೊಂಡು, ಈಗ ತಮ ಗೋಸ್ಕರ ಸರ್ವತ್ಯಾಗಕ್ಕೂ ಸಿದ್ಧನಾಗಿರುವ ಸತ್ಪುತ್ರನನ್ನು ಕಂಡು ಅಪಾರ ಹರ್ಷವೊಂದು ಕಡೆ. ದುಃಖ ಹರ್ಷಭಾರದಿಂದ ಅವರ ಕಂಬನಿಯ ಕಟ್ಟೆ ಒಡೆಯಿತು. ಸುಂದರಮ್ಮನವರು ಒಂದೇ ಸಮನಾಗಿ ಗಳಗಳನೆ ಅತ್ತುಬಿಟ್ಟರು. ಶಾಮಣ್ಣನೂ ಸಹಾನುಭೂತಿಯ ಕಂಬನಿಯನ್ನು ಸುರಿಸದೆ ಇರಲಾಗಲಿಲ್ಲ.

"ಅಲ್ಲ, ನಿಮ್ಮ ತಾಯಿಯನ್ನು ಸಮಾಧಾನ ಮಾಡುವುದು ಬಿಟ್ಟು ನೀನೇ ಹೀಗೆ ಅಳುತ್ತ ಕುಳಿತರೆ ಹೇಗಯ್ಯ?...." ಎಂದು ಡಾಕ್ಟರು ಇಬ್ಬರನ್ನೂ ಸಮಾಧಾನ ಮಾಡಬೇಕಾಯಿತು.

ಶಾಮಣ್ಣನಿಗೆ ಕೇಬಲ್‌ಗ್ರಾಂ ಕೊಟ್ಟು ಕರೆಸಿಕೊಂಡದ್ದರ ಒಳತಂತ್ರ ರಾಜುವಿಗಾಗಲಿ ರತ್ನನಿಗಾಗಲಿ ತಿಳಿಯದು. ಅವನ ಬರವಿನಿಂದ ಆದ ಹೊಸ ತೀರ್ಮಾನ ಇಬ್ಬರಿಗೂ ತಿಳಿದಾಗ, ಅದೂ ಅವರಿಗೆ ಬಹು ಸಹಜವಾಗಿಯೇ ಕಂಡಿತು.

ರತ್ನನಿಗಂತೂ ತಾನು ಗರ್ಭಿಣಿ ಎಂಬ ಸಂಗತಿ ಖಚಿತಪಟ್ಟಿತ್ತು. ಪ್ರಥಮ ಗರ್ಭಧಾರಣೆಯಿಂದ ಆಗುವ ತೀವ್ರವಾದ ದೈಹಿಕ ಮಾನಸಿಕ ಸೂಕ್ಷ್ಮ ವ್ಯತ್ಯಾಸಗಳ ಅರಿವು ಅವಳಿಗೆ ಕ್ರಮಾಕ್ರಮವಾಗಿ ಆಗತೊಡಗಿತ್ತು. ಮುಂದಿನ ದಾರಿ ಏನು, ರಾಜುವಿನೊಂದಿಗೆ ಆಲೋಚಿಸಿ ಏನಾದರೂ ಪರಿಹಾರೋಪಾಯವನ್ನು ಕಂಡುಕೊಳ್ಳಬೇಕಲ್ಲವೆ, ಯಾವುದೂ ಉಪಾಯ ಕಾಣದೆ ಹೋದರೆ ಆತ್ಮಹತ್ಯೆಯೊಂದೇ ಉಳಿದಿರುವ ಮಾರ್ಗವಲ್ಲವೆ ಎಂದು ಚಿಂತೆಯ ಸುಳಿಯಲ್ಲಿ ಗಿರ್ರನೆ ಸುತ್ತುತ್ತಿದ್ದ ರತ್ನ, ತನಗೆ ಪ್ರಸ್ತ ಎಂಬ ಸುದ್ದಿಯನ್ನು ಕೇಳಿದಮೇಲೆ, ಆ ಸುಳಿಯ ವೇಗ ಕಡಮೆಯಾಯಿತು. ದೇವರೇ ಒಂದು ದಾರಿ ತೋರಿಸಿದ್ದಾನೆ ಎಂದುಕೊಂಡಳು. ಏನಾದರೂ ಶಾಮಣ್ಣನಿಗೆ ಮೋಸ. ಇದೊಂದು ಅಳುಕು ಮಾತ್ರ ಅವಳ ಹೃದಯವನ್ನು ಕುಟುಕುತ್ತಲೇ ಇದ್ದಿತು.

ರತ್ನ ಗರ್ಭಿಣಿ ಎಂಬ ಸುಳಿವು ರಾಜುವಿಗೂ ಗೊತ್ತಾಗದೆ ಇರಲಿಲ್ಲ. ಡಾಕ್ಟರ ಓಡಾಟ, ರತ್ನ ಹೆಂಗಸರ ಆಸ್ಪತ್ರೆಗೆ ಹೋಗಿ ಬಂದದ್ದು—ಇನೆಲ್ಲ ಅವನ ಮನಸ್ಸಿನ ಸಂಶಯವನ್ನು ಬಲಪಡಿಸಿದ್ದುವು. ಇದೆಲ್ಲಾ ಬೆಳೆಯುವ ಮೊದಲೇ ಮೊಳಕೆಯನ್ನು ಚಿವುಟಿಹಾಕುವ ಪ್ರಯತ್ನ ಎಂದು ಅವನು ಊಹಿಸಿದ; ಆದರೂ, ಇದ್ದಕ್ಕಿದ್ದ ಹಾಗೆಯೇ ಶಾಮಣ್ಣನನ್ನು ಕರಸಿಕೊಂಡದ್ದು ಒಂದು 'ನಾಟಕ' ಎಂದು ಮಾತ್ರ ಅವನೂ ಅರಿಯನು. ರತ್ನನ ಪ್ರಸ್ತದ ಸುದ್ದಿಯ ಮಾತು ಕೇಳಿ, 'ಬೇಡದ ಪುಟ್ಟನ್ನು ಅಳಿಸಿಯಾಯಿತು' ಎಂದು ಅವನು ಬಗೆದ. ಮಾರ್ಪಟ್ಟ ಸನ್ನಿವೇಶಕ್ಕೆ ಹೊಂದಿಕೊಳ್ಳುವುದಾಗಿ ನಿಶ್ಚಯಿಸಿದ. ಸದ್ಯಕ್ಕಂತೂ ಅವನು ಯಾವಬಗೆಯ ಧರ್ಮಸಂಕಟಕ್ಕೂ ಸಿಲುಕಿರಲಿಲ್ಲ. 'ಮೆಲುಗಾಳಿಗೆ ಮುಖ ತೋರಿಸು, ಬಿರುಗಾಳಿಗೆ ಬೆನ್ನುತೋರಿಸು' ಎಂಬುದು ಅವನಿಗೆ ಹೊಳೆದ ನೀತಿ. ತಾನಾಗಿ ಪರಿಹಾರವಾಗಲಿದ್ದ ಸಮಸ್ಯೆಯನ್ನು ತಲೆಗೆ ಹಚ್ಚಿಸಿಕೊಂಡು ತನ್ನ ನೆಮ್ಮದಿಗೆ ಭಂಗತಂದುಕೊಳ್ಳಲು ಅವನು ಸಿದ್ಧನಾಗಿರಲಿಲ್ಲ.

ಅಣ್ಣನ ವಿಷಯದಲ್ಲಿ ಎಂದೂ ಅವನಿಗೆ 'ಭಯಭಕ್ತಿ' ಇರಲಿಲ್ಲ; ಅವನ ಹೃದಯವನ್ನು ಅರ್ಥಮಾಡಿಕೊಳ್ಳುವ ಸನ್ನಿವೇಶವೂ ಅವನಿಗೆ ಒದಗಿರಲಿಲ್ಲ; ಅವನ ದೃಷ್ಟಿಯಲ್ಲಿ ಅಣ್ಣ ಎಂದೂ ಪುಸ್ತಕ ಕೀಟ. ಆದರೆ,

ಈಗ ತಾಯಿಗೋಸ್ಕರ ಓದನ್ನು ಬಿಟ್ಟು ಓಡಿಬಂದ ಅಣ್ಣನ ವಿಷಯದಲ್ಲಿ ರಾಜುವಿಗೆ ಮೊದಲ ಸಲ ಒಂದು ಗೌರವಭಾವನೆ ಉಂಟಾಯಿತು. ಹಿಂದೆ, ಆದದ್ದು ಆಯಿತು; ಅದಕ್ಕಿನ್ನು ಮರುಗಿ ಪ್ರಯೋಜನವಿಲ್ಲ. ರತ್ನನ ಮೇಲಣ ಪ್ರೀತಿ ಇನ್ನುಮೇಲೆ ತನ್ನ ಹೃದಯಸಂಪುಟದಲ್ಲಿ ಮರೆಯಲ್ಲಿಡ ಬೇಕಾದ ಭಾವ-ರತ್ನ, ಅಷ್ಟೆ. ಇನ್ನುಮೇಲಾದರೂ, ಶಾಮಣ್ಣ ಹಿಂದಿರುಗಿ ಹೋದರೂ ಕೂಡ, ಅಣ್ಣನಿಗೋಸ್ಕರ ತಾನು ರತ್ನನ ವಿಚಾರದಲ್ಲಿ ಎಚ್ಚರಿಕೆ ವಹಿಸಬೇಕು. ಅಣ್ಣನಿಗೋಸ್ಕರ ಅವಳನ್ನು ಅತ್ತಿಗೆ ಎಂದು ತಿಳಿಯಬೇಕು. ತಿಳಿಯಲಾಗಲಿಲ್ಲ, ಮನೆಬಿಟ್ಟು ಹೊರಡಬೇಕು. ಹೇಗೆ ಆದರೆ ಹಾಗೆ....

* * *

ಶಾಮಣ್ಣ-ರತ್ನ ಇವರ ನಿಷೇಕಪ್ರಸ್ತದ ನಾಟಕವೂ ನಡೆಯಿತು. ಸುಂದರಮ್ಮನವರ ಅಸ್ವಸ್ಥತೆಯ ಕಾರಣ ಅದು ಕೇವಲ ಮನೆಯ ಹಬ್ಬವಾಗಿ ನಡೆಯಿತು. ಎರಡೂ ದಿನ ಸಂಜೆ ರತ್ನನಿಂದ ಫಲತಾಂಬೂಲ ಕೊಡಿಸುವುದಕ್ಕೆ ಮಾತ್ರ ಕೆಲವರು ಸುಮಂಗಲಿಯರನ್ನು ಆಹ್ವಾನಿಸ ಲಾಗಿತ್ತು. ಡಾಕ್ಟರ್ ರಘುರಾಂ ಮತ್ತು ಅವರ ಮನೆಯವರು ಎಷ್ಟೊ ಅಷ್ಟೆ—ಮೂರು ದಿನಗಳು ಮನೆಯಲ್ಲಿ ಓಡಾಡಿಕೊಂಡಿದ್ದ ಇಷ್ಟಮಿತ್ರರು, ಆಪ್ತರು, ಬಂಧುಬಳಗ, ಎಲ್ಲವೂ.

ಮುಂದೆ ನಿಂತು ಶುಭಪ್ರಸ್ತವನ್ನು ಆಗಮಾಡಿಸಿಕೊಟ್ಟದ್ದಕ್ಕಾಗಿ ಸುಂದರಮ್ಮನವರು ಡಾಕ್ಟರ್ ದಂಪತಿಗಳಿಗೆ ತುಂಬು ಕೃತಜ್ಞತೆಯನ್ನು ಸಲ್ಲಿಸಿದರು; ಅವರನ್ನೇ ಬೀಗರೆಂದು ತಿಳಿದು ಅವರಿಗೆ ಮಗ-ಸೊಸೆಯರ ಕೈಲಿ ಉಡುಗೊರೆ ಕೊಡಿಸಿದರು.

ಈಗ ಸುಂದರಮ್ಮನವರ ಹೃದಯದಮೇಲಿಂದ ದೊಡ್ಡದೊಂದು ಭಾರ ಕಳಚಿದಂತಾಗಿದ್ದುದೇನೋ ದಿಟ. ಆದರೆ, ಡಾಕ್ಟರ ಸೂಚನೆ ಯಂತೆ ಅವರು ನಟಿಸಿದ ನಾಟಕ ಇತರರ ವಿಚಾರದಲ್ಲಿ ಸತ್ಫಲವನ್ನು ಕೊಟ್ಟು ಅವರ ವಿಚಾರದಲ್ಲಿಯೆ ಕೆಡುಕೆನಿಸಿತ್ತು. ನಾಟಕ ನಿಜವೆನ್ನಿಸಿ, ಅವರ ರೋಗ ದಿನ ಮೂರರಲ್ಲಿ ಉಲ್ಬಣಾವಸ್ಥೆಯ ಶಿಖರವನ್ನು ಮುಟ್ಟಿತು.

'ಸೊಂಟ ಪೂರ್ತಿ ಹಿಡಿದುಕೊಂಡುಬಿಟ್ಟಿದೆಯಪ್ಪ' ಎಂದು ಅತ್ತಿತ್ತ ಅಲುಗದೆ ಮಲಗಿ ಅವರ ಸೊಂಟ ಹಿಡಿದುಕೊಂಡೇಬಿಟ್ಟಿತ್ತು; ಅನ್ನ

ಸೇರುವುದೇ ಇಲ್ಲ ಎಂದು ಮಕ್ಕಳಿದುರಿಗೆ ನಟಿಸಿ, ಕದ್ದು ಅನ್ನ ತಿನ್ನುವುದಕ್ಕೆ ಮನಸ್ಸು ಬರದೆ, ಗಂಜಿ ಗ್ಲೂಕೋಸ್ ಬಾರ್ಲಿ ಕಿತ್ತಿಳೆರಸ ಇವುಗಳ ಸೇವನೆ ಯಲ್ಲೆ ಹತ್ತು ಇಪ್ಪತ್ತು ದಿನ ಕಳೆದು ಆಹಾರದಮೇಲೆ ಇಚ್ಛೆ ಮಾಯ ವಾಗಿತ್ತು, ನಿಶ್ಶಕ್ತಿ ನೂರುಮಡಿಯಾಗಿತ್ತು; ಎಂಟುಹತ್ತು ದಿನಗಳ ಮಾನಸಿಕ ವೇದನೆಯಂತೂ ಹೇಳಿ ತೀರದು: ರತ್ನನ ವಿಷಯ ಹೀಗಾಯಿ ತಲ್ಲಾ ಎಂಬ ಕೊರಗು; ಶಾಮಣ್ಣ ಬರದೆಹೋದರೆ ಏನು ಮಾಡುವುದು ಎಂಬ ಚಿಂತೆಯ ಸುಡುವ ಪ್ರಶ್ನೆ; 'ಖಾಯಿಲೆಗೋಸ್ಕರ ಬಂದೆನೇ ಹೊರತು ಪ್ರಸ್ತಮಾಡಿಕೊಂಡು ಭೋಗಿಸುವುದಕ್ಕಲ್ಲ' ಎಂದುಬಿಟ್ಟರೆ ಏನು ಗತಿ ಎಂಬ ದಿಗಿಲಿನ ಧಾವಂತ; ಎಲ್ಲ ತಮ್ಮ ಇಚ್ಛೆಯಂತೆ ನಡೆದರೂ, 'ಎಂತಹ ಮೋಸದ ಬಲೆ ಬೀಸಿದೆ ಹೆತ್ತ ಮಗನಿಗೆ' ಎಂಬ ದಾರುಣ ವೇದನೆ. ಇದೆಲ್ಲದರ ಪರಿಣಾಮವಾಗಿ ಎಷ್ಟು ಸಾಧ್ಯವೋ ಅಷ್ಟು ಬಿಗಿತುಕೊಂಡು ಒಂದು ಕೃತಕಾವಸ್ಥೆಯನ್ನು ಅನುಭವಿಸುತ್ತಿದ್ದ ಅವರ ನರಮಂಡಲ ಶಾಮಣ್ಣನ ಪ್ರಸ್ತದಾಮೋದನೆಯೇ ಅಷ್ಟೇ ಕೃತಕವಾಗಿ ಸಡಿಲಗೊಂಡಿತು. ಬಿಗಿಯಾಗಿ ಕೀಲಿಕೊಟ್ಟು ತಿರುಗಿಸಿದ್ದ ಗಡಿಯಾರದ "ಸ್ಪ್ರಿಂಗ"ನ್ನು (ಸುರುಳಿಪಟ್ಟಿ ಯನ್ನು) ತಟ್ಟನೆ ಬಿಚ್ಚಿದಂತಾಯಿತು; ಜೀರ್ಣವಾಗಿದ್ದ ದಗ್ಗ ಕೊಡದ ಭಾರವನ್ನು ಹೊತ್ತು, ಕೊಡವನ್ನು ಕೈಗೆ ತೆಗೆದುಕೊಂಡು ಅದರ ಭಾರ ಕಳೆಯುವ ಹೊತ್ತಿನಲ್ಲಿ ಅದು ಕಿತ್ತಂತಾಯಿತು; ಜ್ವರ ತುತ್ತತುದಿಗೆ ಏರಿ, ಅದನ್ನು ಕೃತಕವಾಗಿ ಇಳಿಸಹೋಗಿ, ಕಾಲು ತಣ್ಣಗಾದಂತಾಯಿತು; ನಾಟಕದಲ್ಲಿ ಹುಚ್ಚನಾಗಿ ನಟಿಸಿದ ನಟ ನಾಟಕ ಮುಗಿದಮೇಲೆ ಆ ಭಾವಾ ರೋಪಣೆಯಿಂದ ಬಿಡಿಸಿಕೊಳ್ಳಲಾಗದೆ ನಿಜವಾಗಿಯೂ ಹುಚ್ಚನೇ ಆದಂತಾಯಿತು. 'ನಾಟಕ ಕಟ್ಟಲು' ರೋಗಿಯಾಗಿದ್ದ ಸುಂದರಮ್ಮನವರು ಸ್ವಾಭಾವಿಕ ಸನ್ನಿವೇಶಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೆ ನಿಜವಾದ ರೋಗಿಯಾಗಿದ್ದರು. ಪ್ರಸ್ತದ ದಿನ, ಅದುವರೆಗೆ ಬಾಯಿಕಟ್ಟಿದ ಸುಂದರಮ್ಮ ನವರು ಮಗನ ಒಲವಂತಕ್ಕೆ ಮಂಚದಮೇಲೆ ಕುಳಿತು ಹಬ್ಬದ ಊಟಮಾಡಿ ಬಿಟ್ಟರು. ಹೇಗಿದ್ದರೂ 'ನಾಟಕದ ರೋಗಿ' ಎಂದು ಡಾಕ್ಟರೂ ಊಟಕ್ಕೆ ಅಪ್ಪಣೆಕೊಟ್ಟುಬಿಟ್ಟರು; ಸುಂದರಮ್ಮನವರ ಉಪವಾಸದ ವಿಚಾರ ಅವರಿಗೆ ಗೊತ್ತಿಲ್ಲ, ಅಂತೂ, ನಾನಾ ಕಾರಣಗಳ ಕಲಸು ಮೇಲೋಗರದಿಂದ

ಸುಂದರಮ್ಮನವರ ದೇಹಸ್ಥಿತಿ ಹಿಂದೆಂದೂ ಇಲ್ಲದಷ್ಟು ಉಲ್ಬಣಿಸಿತು. ಡಾ|| ರಘುರಾಂ ಅಚಾತುರ್ಯವಾಯಿತೆಂದುಕೊಂಡರು; ತಾವೆ ಅಪರಾಧಿ ಎಂಬಂತೆ ಭಾವಿಸಿಕೊಂಡರು.

ಪ್ರಪಂಚದಲ್ಲಿ ಹಗಲು ಇರುಳು, ಸುಖ ದುಃಖ, ಒಳಿತು ಕೆಡುಕು ಇವು ಸಮಸಮ. ಒಂದು ಹೆಚ್ಚಿ ಇನ್ನೊಂದು ಕಡಮೆಯಾಗುವಂತಿಲ್ಲ, ಏರು ಪೇರಾಗದಂತೆ ಪ್ರಕೃತಿ ಯಾವಾಗಲೂ ಸಮಸ್ಥಿತಿಯನ್ನು ಕಾಪಾಡುತ್ತದೆ. ಮನೆತನಕ್ಕೆ ಒಳಿತಾಗಬೇಕು, ಕಳಂಕ ಬರಬಾರದು ಎಂದು ಸುಂದರಮ್ಮ ನವರು ಬಯಸಿದರು; ಅವರಿಗೆ ಕೆಡುಕಾಯಿತು.

ತಾಯಿಯ ಕರುಳು ಸರ್ವಕಾಲದಲ್ಲೂ ಸರ್ವವಿಧದಲ್ಲೂ ಮಕ್ಕಳ ಏಳಿಗೆಯನ್ನು, ಹಿತವನ್ನು, ಕ್ಷೇಮವನ್ನು ಬಯಸಿತು. ರಾಜು ಕೆಟ್ಟವನೆಂದು ರತ್ನ ಪತಿದ್ರೋಹಿ ಎಂದು ಅವರನ್ನು ದೂರಮಾಡಲು ಅದು ಹಿಂದೆಗೆಯಿತು. ಆ ತಪ್ಪನ್ನು ಮುಚ್ಚಲು ಇನ್ನೊಂದು ತಪ್ಪಾಯಿತು; ಎರಡು ತಪ್ಪು ಹೆಚ್ಚಾ ಯಿತು. ಮೊದಲಿಂದ ಕಡೆಯವರೆಗೆ ತಾಯಿಯ ಬಯಕೆ ಸಂಜಾಯಿತು; ಇತರರ ಉಳಿವಿಗಾಗಿ ಆ ಸಂಜೆಗೆ ತಾಯೇ ಬಲಿಯಾಗಬೇಕಾಯಿತು.

ಆದರೆ, ಡಾಕ್ಟರ್ ರಘುರಾಂ ತಾವೇ ಅಪರಾಧಿ ಎಂದುಕೊಂಡರು. 'ಏನನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ ಹಚ್ಚಿಕೊಳ್ಳಬೇಡಿ' ಎಂದು ಹೇಳು ತ್ತಿದ್ದವರು ತಾವೇ ರೋಗನಟನೆಯನ್ನು ಹೇಳಿಕೊಟ್ಟವರು. ಮೀನಿಗೆ ಈಜು ಕಲಿಸಬೇಕೆ? ಸುಂದರಮ್ಮನವರ ಪಾಲಿಗೆ ರೋಗ ನಟನೆಯಾಗದೆ ನಿಜ ವಾಯಿತು. ಡಾ|| ರಘುರಾಂ ಪಟ್ಟ ಶ್ರಮವೆಲ್ಲಾ ವ್ಯರ್ಥವಾಯಿತು. ಅವರಿಗೆ ಸ್ವಾಭಾವಿಕವಾಗಿ ಹೆಚ್ಚುತ್ತಿದ್ದ ರಕ್ತದ ಒತ್ತಡ ಇದ್ದಕ್ಕಿದ್ದ ಹಾಗೆ ತಟ್ಟನೆ ಇಳಿದುಹೋಯಿತು. ಹೃದಯ ತೀರ ದುರ್ಬಲವಾಯಿತು.

ಮಾತನಾಡುವ ಚೈತನ್ಯ ಉಡುಗುವ ಮೊದಲೇ, ಒಂದು ದಿನ ಸುಂದರಮ್ಮನವರು ಡಾಕ್ಟರನ್ನೂ ತಮ್ಮ ಮಕ್ಕಳಿಬ್ಬರನ್ನೂ ಸೊಸೆ ರತ್ನನನ್ನೂ ಬರಮಾಡಿಕೊಂಡರು. ತಮ್ಮ ಕಡೆಯ ಇಷ್ಟವನ್ನು ಅವರ ಮುಂದೆ ನುಡಿದರು.:

"ಡಾಕ್ಟರೇ, ಇನ್ನು ಮುಂದೆ ನಮ್ಮ ಮಕ್ಕಳಿಗೆ ನೀವೇ ಗತಿ; ತಾಯಿ ತಂದೆ. ಇದುವರೆಗೆ ನಡಸಿಕೊಂಡಂತೆ ಮುಂದೆಯೂ ನಡಸಿಕೊಂಡು ಬರ

ಬೇಕು ಅವರನ್ನ...."

ಮಕ್ಕಳ ಕಡೆ ತಿರುಗಿ ಹೇಳಿದರು:

"ಶಾಮಣ್ಣಾ, ದೇವರು ನಿನಗೆ ಒಳ್ಳೆಯದು ಮಾಡಲಿ. ನನ್ನ ಬಲವಂತಕ್ಕೆ ರತ್ನನ್ನ ಮದುವೆಮಾಡಿಕೊಂಡಿದ್ದೀಯೆ. ಅವಳು ಸಾವಿರ ತಪ್ಪುಮಾಡಿದರೂ ಅವಳನ್ನ ಕ್ಷಮಿಸಿ ಕಾಪಾಡಿಕೊಳ್ಳಬೇಕಾದ್ದು ನಿನ್ನ ಧರ್ಮ. ನಿನ್ನ ಪ್ರಸ್ತ ಆಯಿತು; ನನ್ನ ಬಯಕೆ ತೀರಿತು; ಮೊಮ್ಮಗುವನ್ನು ಕಣ್ಣಿಂದ ಕಾಣುವ ಭಾಗ್ಯಮಾತ್ರ ಇಲ್ಲ. ನಾನು ಇಷ್ಟು ಬಯಸಿದ್ದೇ ಹೆಚ್ಚಾ ಯಿತೇನೋ. ನನ್ನ ಕಥೆ ಮುಗಿಯಿತಪ್ಪ. ನೀವು ಏನು ಬಯಕೆ ಇಟ್ಟು ಕೊಂಡರೂ ನೀತಿಗೆ ಅನುಗುಣವಾಗಿರಲಿ. ನೀತಿಗೆ ತಪ್ಪದ ಬಯಕೆ ಕೆಡುಕಾಗುವುದಿಲ್ಲ. ಬಯಸಬಾರದ್ದನ್ನು ನಾನು ಎಂದೂ ಬಯಸಿಲ್ಲವಪ್ಪ. ರಾಜುವಿನ ಮದುವೆ ಒಂದಾಗಿದ್ದರೆ ಚೆನ್ನಾಗಿತ್ತು. ಅದನ್ನು ನೀನು ಮಾಡಪ್ಪ. ಇನ್ನು ನನಗೆ ಯಾವ ಬಯಕೆಯೂ ಇಲ್ಲ. ಸಾಯುವುದೊಂದೇ ನನ್ನ ಕಡೆಯ ಬಯಕೆ.

"ರಾಜೂ, ಶಾಮಣ್ಣನ್ನ ಇನ್ನುಮೇಲಾದರೂ ತಂದೆಗೆ ಸಮಾನ ಅಂತ ಗೌರವದಿಂದ ಕಾಣಪ್ಪ. ಮನೆಯ ಆಸ್ತಿಪಾಸ್ತಿ ಇಬ್ಬರಿಗೂ ಸಮಪಾಲು. ಅವನ ಯಾವ ಒಡವೆಗೂ ನೀನು ಆಸೆಪಡಬಾರದು. ನಿನ್ನ ಪಾಲಿಗೆ ಬಂದದ್ದು ನಿನಗೆ. ಅವನ ಪಾಲಿಗೆ ಬಂದದ್ದು ಅವನಿಗೆ.

"ರತ್ನಾ, ಮದುವೆ ಹೆಸರಿಗೆ ಹೊರತು, ಪ್ರಸ್ತವಾದ ಮೇಲೆಯೇ ನಿಜವಾದ ಮದುವೆ. ಇನ್ನುಮೇಲೆ ಶಾಮಣ್ಣನೇ ನಿನ್ನ ದೈವ ಕಣಮ್ಮಾ. ಕಾಯಾ ವಾಚಾ ಮನಸಾ ಅವನ ಸೇವೆಯೇ ನಿನ್ನ ಧರ್ಮ ಕಣಮ್ಮಾ. ಸರ್ವಮಂಗಳೆ ನಿನಗೆ ಸೌಮಂಗಲ್ಯವನ್ನ ಕರುಣಿಸಲಿ."

ಇಷ್ಟನ್ನು ನುಡಿಯಲು ಸುಂದರಮ್ಮನವರಿಗೆ ಬಹು ಹೊತ್ತು ಹಿಡಿಯಿತು. ಕಡೆಯಲ್ಲಿ, ಶಾಮಣ್ಣನನ್ನು ಕುರಿತು, ಹೇಳಿದರು:

"ಅಪ್ಪಾ, ಶಾಮಣ್ಣಾ...."

"ಏನಮ್ಮ...."

"ನನಗೆ ಬದುಕುವ ಆಸೆ ಇಲ್ಲವಪ್ಪ."

"ಹಾಗನ್ನಬೇಡ ಕಣಮ್ಮ."

"ಇಷ್ಟರ ಮೇಲೆ ದೈವಚಿತ್ತ. ಅದಿರಲಿ. ನಿನ್ನ ಪರದೇಶದ ವಿದ್ಯಾಭ್ಯಾಸ ನಿಲ್ಲಿಸಬೇಕಾಯಿತಲ್ಲಪ್ಪ...."

"ನೀನು ಒದುಕಿದರೆ ಸಾಕಮ್ಮ. ನನಗೆ ಯಾವುದೂ ಬೇಡ."

"ನಾನು ಹೋದರೂ ನೀನು ಸೀಮೆಗೆ ಹೋಗಕೂಡದಪ್ಪ, ರತ್ನ ಒಬ್ಬಳನ್ನೇ ಬಿಟ್ಟು ನೀನು ಹೊರಟುಹೋದರೆ ಅವಳ ಜೊತೆಗೆ ಯಾರು?"

"ಆಗಲಿ ಕಣಮ್ಮ."

ಸುಂದರಮ್ಮನವರಿಗೆ ಈ ಲೋಕದಲ್ಲಿ ಇನ್ನು ಯಾವ ಆಸೆಯೂ ಉಳಿದಿರಲಿಲ್ಲ. ಕಡೆಯ ಬಯಕೆಯನ್ನು ನುಡಿದಾದ ಮೇಲೆ ಅವರ ಪ್ರಾಣಪಕ್ಷಿ ಒಡಲ ಪಂಜರವನ್ನು ಬಿಟ್ಟುಹೋಗಲು ಹಾತೊರೆಯುತ್ತಿತ್ತು.

ತುಸ ಚೈತನ್ಯ ಉಳಿದಿರುವಾಗಲೇ ಸುಂದರಮ್ಮನವರು ಡಾಕ್ಟರ ಸಮ್ಮುಖದಲ್ಲಿ ಪರಿಚಯಸ್ಥರಾದ ವಕೀಲರಿಂದ ತಮ್ಮ ಅಂತಿಮ ಇಷ್ಟ ಪತ್ರವನ್ನು ಬರೆಸಿದರು. ಈಗ ವಾಸವಾಗಿದ್ದ ಬಂಗಲೆ ಮತ್ತು ಇನ್ನೊಂದು ಸಣ್ಣ ಮನೆ ಶಾಮಣ್ಣನ ಪಾಲಿಗಾದುವು; ಉಳಿದ ಎರಡು ಸಾಧಾರಣ ಮನೆಗಳು ರಾಜುವಿನ ಪಾಲಿಗಾದುವು. ಸರ್ಕಾರದ ಸಾಲ ಪತ್ರಗಳು, ಬ್ಯಾಂಕಿನ ಹಣ, ನಗನಾಣ್ಯ ಎಲ್ಲವನ್ನೂ ವಿವರವಾಗಿ ಒಕ್ಕಣಿಸಿ, ಇಬ್ಬರಿಗೂ ಸಮ ಸಮವಾಗಿ ಹಂಚಿಬಿಟ್ಟರು.

ಮನಸ್ಸಿನ ಭಾರವೆಲ್ಲಾ ಸಂಪೂರ್ಣವಾಗಿ ಕಳಚಿಕೊಂಡು, ಒಂದು ದಿನ ಹೃದಯಕ್ರಿಯೆ ನಿಂತು ಸುಂದರಮ್ಮನವರು ಮಕ್ಕಳ ಎದುರಿನಲ್ಲಿ ಕಣ್ಣು ಮುಚ್ಚಿದರು. ಅದಕ್ಕೆ ಮೊದಲು ಮಾತಾಡುವುದಕ್ಕೆ ಚೈತನ್ಯ ವಿರಲಿಲ್ಲವೇ ಹೊರತು, ಕಣ್ಣಿನಿಂದಲೇ ಮಕ್ಕಳನ್ನು ಹರಸಿದರು.

## ೩೨

ಹಿರಿಯರ ಮರಣ ಒಂದು ಮನೆಯ ಆಗುಹೋಗುಗಳನ್ನು ಸಂಪೂರ್ಣ ವಾಗಿ ಬದಲಾಯಿಸಿಬಿಡುತ್ತವೆ. ಕಟ್ಟಿದ ಮನೆ ಒಡೆಯುವುದೂ ಉಂಟು; ಒಡೆದ ಮನಗಳು ಬೆಸೆಯುವುದೂ ಉಂಟು. ಎಲ್ಲರ ಪರಿಶ್ರಮದಿಂದ ಆಸ್ತಿ ಊರ್ಜಿತವಾಗುವುದೂ ಉಂಟು; ಬೆಳಸಿದ ಆಸ್ತಿ ಹರಿದು ಹಂಚಿ ದಿಕ್ಕುಪಾಲಾಗುವುದೂ ಉಂಟು.

ಸುಂದರಮ್ಮನವರು ಸತ್ತ ಮೇಲೆ, ಅನಿವಾರ್ಯವಾಗಿ ಅಣ್ಣತಮ್ಮಂದಿರು ದಿನ ಕರ್ಮಗಳಲ್ಲಿ ಕಲೆತು ಹತ್ತಿರ ಹತ್ತಿರವಾಗತೊಡಗಿದರು. ಒಬ್ಬರೊಬ್ಬರಿಗೆ ಮುಖ ಕೊಟ್ಟು ಮಾತಾಡದೆ ಇದ್ದವರು ಈಗ ನೂರಾರು ಸಣ್ಣ ಪುಟ್ಟ ವಿವರಗಳಲ್ಲಿ ಬೆರೆತು ಮಾತಾಡತೊಡಗಿದರು; ಹತ್ತಾರು ಮುಖ್ಯ ವಿಚಾರ ಗಳಲ್ಲಿ ಒಮ್ಮನಸ್ಸಿನಿಂದ ತೀರ್ಮಾನಕ್ಕೆ ಬರುತ್ತಿದ್ದರು. ಶಾಮಣ್ಣ ಹೇಳಿದ್ದಕ್ಕೆ ರಾಜು ಅಸ್ತು ಎನ್ನುತ್ತಿದ್ದ.

ತಾಯಿಯ ಬದುಕೇ, ರಾಜುವಿನ ಮೇಲೆ ತುಂಬ ಪರಿಣಾಮಕಾರಿ ಯಾಗಿತ್ತು; ಆಕೆಯ ಸಾವು ಅವನ ಸ್ವಭಾವವನ್ನೇ ಮಾರ್ಪಡಿಸಿಬಿಟ್ಟಿತು.

ಅಣ್ಣತಮ್ಮಂದಿರು ಬೆಳೆಯುತ್ತಿದ್ದ ಅನ್ಯೋನ್ಯಭಾವವನ್ನು ಕಂಡು ರತ್ನನಿಗೂ ಸಮಾಧಾನ; ಡಾಕ್ಟರಿಗೂ ಸಮಾಧಾನ. ತಮ್ಮ ನೆರ ವಿಲ್ಲದೆಯೇ ಇವರು ನಿರ್ವಹಿಸಿಕೊಂಡು ಹೋಗಬಲ್ಲರು ಎಂದು ಅವರಿಗೆ ಧೈರ್ಯವಾಯಿತು.

"ಏನೋ ಒಂದು ಅಚಾತುರ್ಯ ನಡೆಯಿತು. ಮಕ್ಕಳ ಅಪರಾಧ ಮುಚ್ಚಲು ತಾಯಿಜೀವ ಬಲಿಯಾಯಿತು. ಅಪರಾಧ ಮಾಡಿದವರೂ ಈಗ ಒಳ್ಳೆಯವರಾಗುತ್ತಿದ್ದಾರೆ. ಮಗು ಮಾಡಿದ ತಪ್ಪನ್ನ ತಾಯಿ ಹೊಟ್ಟೆಗೆ ಹಾಕಿಕೊಳ್ಳದೆ ಇನ್ನು ಯಾರು ಹಾಕಿಕೊಳ್ಳಬೇಕು? ಯಜ ಮಾನರಂತೆಯೇ ಈಕೆಯೂ ದೊಡ್ಡ ತರಹದ ಹೆಂಗಸು; ಪುಣ್ಯಾತ್ಮಳು" ಎಂದು ರಘುರಾಂ ಮನಸ್ಸಿನಲ್ಲಿಯೇ ಸಮಾಧಾನಗೊಂಡರು.

ತಾಯಿಯ ಖಾಯಿಲೆ, ಮರಣ, ಮರಣಾನಂತರದ ಕರ್ಮಗಳು— ಇವುಗಳ ಪರಿಣಾಮವಾಗಿ ರಾಜು ಶಾಲೆಗೆ ಹೋಗುವುದು ತಪ್ಪಿಹೋಗಿತ್ತು; ವ್ಯಾಸಂಗಕ್ಕೆ ವಿಚ್ಛಿತ್ತಿಯಾಗಿತ್ತು. ಶಾಮಣ್ಣ ರಾಜುವಿಗೆ ಹೇಳಿದ:

"ರಾಜು, ಪರೀಕ್ಷೆ ಹತ್ತಿರವಾಗುತ್ತ ಬಂತು. ನನ್ನ ಓದು ಒಂದು ಘಟ್ಟಕ್ಕೆ ಬಂದಿದೆ. ನಾನು ಮತ್ತೆ ಸೀಮೆಗೆ ಹೋದರೂ ಆಯಿತು, ಬಿಟ್ಟರೂ ಆಯಿತು. ಸರ್ಕಾರ ನನಗೆ ಪ್ರೊಫೆಸರ್ ಕೆಲಸ ಕೊಡದೆ ಇರಬಹುದು; ಹೈಸ್ಕೂಲು ಮೇಷ್ಟರ ಕೆಲಸವಾದರೂ ಸಿಕ್ಕುತ್ತೆ. ನೀನು ಕಷ್ಟಪಟ್ಟು ಓದಿ, ಡಾಕ್ಟರಾಗಬೇಕು. ಕೂತು ತಿನ್ನುವವನಿಗೆ ಕುಡಿಕೆ ಹಣ ಸಾಲದು: ಎನ್ನುವಂತೆ ಆಸ್ತಿ ಮುರಿಸಿಕೊಂಡು ತಿನ್ನುವುದಕ್ಕಾಗುವುದಿಲ್ಲ. ಅಮ್ಮ ಬದುಕಿದ್ದಾಗ ನೀನು ಹೇಗೆ ಇದ್ದೆಯೋ ಹಾಗೇ ಇರು. ಯಾವುದಕ್ಕೂ ಕೊರತೆ ಮಾಡಿಕೊಳ್ಳಬೇಡ, ಕಾರ್ಪಣ್ಯ ಪಡಬೇಡ, ತಿಳಿಯಿತೆ? ಬೇಕಾದ್ದನ್ನ ಸಂಕೋಚವಿಲ್ಲದೆ ಬಾಯಿಬಿಟ್ಟು ಕೇಳು. ಮುಖ್ಯ ನೀನು ಮುಂದಕ್ಕೆ ಬರಬೇಕು."

ಅಣ್ಣನ ಬಿಚ್ಚು ಹೃದಯದ ಈ ಪ್ರೇಮದ ಮಾತುಗಳು ರಾಜುವಿನ ಹೃದಯವನ್ನು ಚುಚ್ಚತೊಡಗಿದುವು. "ಇಂಥ ಅಣ್ಣನಿಗೆ ನಾನು ದ್ರೋಹ ಮಾಡಿದೆನೆ? ಯಾಕೆ ನನ್ನ ಬುದ್ಧಿ ಮಂಕಾಯಿತು ? ಯಾಕೆ ಮೋಹಕವಿಯಿತು? ನನ್ನ ಪಾಪಕ್ಕೆ ಏನು ಪ್ರಾಯಶ್ಚಿತ್ತ" ಎಂದು ಒಳಗೇ ಕುದ್ದುಕೊಂಡನು. "ಅಣ್ಣ ಹೇಳುವುದೆಲ್ಲ ನನ್ನ ಹಿತಕ್ಕೆ. ಅವನ ಮಾತನ್ನು ತೆಗೆದುಹಾಕುವುದಿಲ್ಲ" ಎಂದು ಮನಸ್ಸಿನಲ್ಲಿಯೇ ಶಪಥ ಮಾಡಿಕೊಂಡನು.

ಅಣ್ಣನ ಮಾತಿಗೆ, "ಆಗಲಿ" ಎಂದನು.

ಮರುಗಳಿಗೆಯೆ ಅಣ್ಣನ ಮಾತನ್ನು ಮೀರಬೇಕಾಯಿತು!

"ಇನ್ನೊಂದು ಮಾತು, ರಾಜು...."

"ಏನು ಶಾಮಣ್ಣ...."

"ಸರಿಯಾದ ಕಡೆ ಹೆಣ್ಣು ಬಂದಾಗ, ನೀನು ಮದುವೆ ಮಾಡಿಕೊಂಡುಬಿಡಬೇಕು."

"ಇದೊಂದು ಮಾತು ಮಾತ್ರ ಎತ್ತಬೇಡ ಶಾಮಣ್ಣ...."

"ನನ್ನ ಇಷ್ಟ ಅಲ್ಲ, ರಾಜು, ಇದು ಅಮ್ಮನ ಇಷ್ಟ."

"ಈ ವರ್ಷವಂತೂ ಅದರ ಮಾತು ಬೇಡ. ವರ್ಷಾಬ್ಧಿಕ ಎಲ್ಲ ಮುಗಿಯಲಿ. ಆಮೇಲೆ ನೋಡೋಣ."

"ಹಾಗೇ ಆಗಲಪ್ಪ"

ಈಗ ಮನೆಗೆ ಶಾಮಣ್ಣನೇ ಯಜಮಾನ; ರತ್ನ ಯಜಮಾನಿ. ಶಾಮಣ್ಣ ನಾನಾ ಕಾರಣಗಳಿಂದ ಯಜಮಾನನಂತೆ ವರ್ತಿಸದೆ ವಿಧಿಯೆ ಇರಲಿಲ್ಲ. ಗೃಹಕೃತ್ಯದ ಎಲ್ಲ ಹೊಣೆಗಳೂ ಅವನ ಇಷ್ಟವನ್ನು ಕೇಳದೆಯೆ ಅವನ ಹೆಗಲೇರಿದ್ದುವು; ಕರ್ತವ್ಯ ದೃಷ್ಟಿಯಿಂದ ಅವನು ಅವಕ್ಕೆ ಹೆಗಲು ಕೊಟ್ಟೂ ಇದ್ದ. ಇಷ್ಟಪಟ್ಟಿದ್ದರೆ ರತ್ನ ಯಜಮಾನಿಯಂತೆ ನಡೆದು ಕೊಳ್ಳಬಹುದಾಗಿತ್ತು. ಆದರೆ ಅವಳಿಗೆ ಅದು ಬೇಕಾಗಿರಲಿಲ್ಲ. ಆ ಹಿರಿಯ ಪಟ್ಟಕ್ಕೆ ತಾನು ಅರ್ಹಳಲ್ಲ ಎಂಬ ಭಾವನೆ ಅವಳಲ್ಲಿ ಅದು ಹೇಗೋ ಬಂದು ನೆಲಸಿತ್ತು. ಯಾವ ವಿಚಾರದಲ್ಲಿಯೋ ಆಗಲಿ ಮುಂದು ವರಿಯಲು ಅವಳ ಅಳುಕುಮನಸ್ಸು ಹಿಂಜರಿಯುತ್ತಿತ್ತು. ಅವಳ ಉದಾಸ ವೃತ್ತಿ ಶಾಮಣ್ಣನಿಗೆ ಅರ್ಥವೇ ಆಗಲಿಲ್ಲ.

ರತ್ನ ಶಾಮಣ್ಣನ ಪತ್ನಿಯೆನಿಸಿ ಸುಖದೂರಳಾಗಿದ್ದಳು, ಭೋಗ ವಿಮುಖಳಾಗಿದ್ದಳು; ಮೊದಲಿನ ಹಾಗೆ ಅಲಂಕರಿಸಿಕೊಳ್ಳುವುದನ್ನು ಬಿಟ್ಟು ಬಿಟ್ಟಿದ್ದಳು. ತನಗೆ ಅವೊಂದೂ ಬೇಕಾಗಿಲ್ಲದ್ದರಿಂದ ತನಗಾಗಿ ರತ್ನ ಎಲ್ಲವನ್ನೂ ತ್ಯಜಿಸುತ್ತಿದ್ದಾಳೆ ಎಂದು ಶಾಮಣ್ಣ ಎಣಿಸಿದ. "ಥಳುಕು ಪಳುಕು ನನಗೆ ಬೇಕಿಲ್ಲ. ಆದರೂ, ನಿನಗೆ ಇಷ್ಟ ಇದ್ದರೆ ಹೇಗೆ ಬೇಕಾದರೂ ಇರು; ನನ್ನ ಅಡ್ಡಿಯೇನೂ ಇಲ್ಲ" ಎಂದು ಶಾಮಣ್ಣ ಹೆಂಡತಿಗೆ ಸಂಪೂರ್ಣಸ್ವಾತಂತ್ರ್ಯವನ್ನು ಕೊಟ್ಟಿದ್ದ. ಆದರೂ ರತ್ನ ವಸ್ತ್ರಾಭರಣ ಗಳಲ್ಲಿ ಮೊದಲಿನ ಆಸಕ್ತಿ ಚಾಪಲ್ಯಗಳನ್ನು ಬಿಟ್ಟುಬಿಟ್ಟಿದ್ದಳು. "ಅತ್ತೆ ಸತ್ತ ವರ್ಷ. ನಾನು ಹೇಳಿದರೂ ಅವಳಿಗೆ ಬೇಕಿಲ್ಲ. ರತ್ನ ಒಳ್ಳೆಯ ಹುಡುಗಿ" ಎಂದುಕೊಂಡ ಶಾಮಣ್ಣ.

ರತ್ನ ಮೂರು ನಾಲ್ಕು ತಿಂಗಳ ಬಸುರಿ. ಶಾಮಣ್ಣನಿಗೆ ಹಾಗೆಂದು ತಿಳಿಯದು. ಆದರೆ ಅವನು ಕೇಳದೆಯೇ ಡಾ|| ರಘುರಾಂ ಒಂದು ದಿನ

ಶಾಮಣ್ಣನಿಗೆ ಆ ಸಂಗತಿಯನ್ನು ಬಹಿರಂಗಪಡಿಸಿದ್ದರು. ರತ್ನನಿಗೆ ತಲೆ ಸುತ್ತು, ಓಕರಿಕೆ, ಆಹಾರ ಬೇಡದಿರುವುದು ಮುಂತಾದ ಗರ್ಭಿಣಿಯ ಲಕ್ಷಣಗಳು ಪ್ರಕಟವಾಗಿ ಕಾಣಿಸಿಕೊಳ್ಳತೊಡಗಿದ್ದುವು. ಪ್ರಸ್ತವಾದ ಮೇಲೆ ರತ್ನ ಹೊರಗಾಗಿಲ್ಲವೆಂಬ ಸಂಗತಿ ಶಾಮಣ್ಣನ ಗಮನದಿಂದ ನುಸುಳಿ ಹೋಗಿತ್ತು. ಗಂಡುಬುದ್ಧಿ, ಎಷ್ಟಾದರೂ. ರತ್ನನಿಗೆ ಮೈಗೆ ಆಲಸ್ಯ ವೆಂದು ಎಣಿಸಿ, ಡಾ|| ರಘುರಾಂ ಅವರಿಗೆ ಬಂದು ಪರೀಕ್ಷಿಸಿ ನೋಡುವಂತೆ ಹೇಳಿಕಳಿಸಿದ್ದ. ಆಗ ಡಾ|| ರಘುರಾಂ, "ರತ್ನನಿಗೆ ಎರಡು ತಿಂಗಳು ಆಗಿರುವ ಹಾಗೆ ಕಾಣುತ್ತೆ ಕಣಯ್ಯ, Congratulations" (ಅಭಿನಂದನೆಗಳು)" ಎಂದು ಶಾಮಣ್ಣನಿಗೆ ಏಕಾಂತದಲ್ಲಿ ತಿಳಿಸಿದ್ದರು.

ಹಾಗೆ ಹೇಳಿದಾಗ ಡಾಕ್ಟರ ಮನಸ್ಸಿನಲ್ಲಿ ಒಂದು ಬಗೆಯ ಹೇಳಿ ಕೊಳ್ಳಲಾಗದಂತಹ ಸಂಕಟವಾಯಿತು. "ಈ ಮೋಸಕಾರ್ಯದಲ್ಲಿ ನಾನೂ ಭಾಗಿಯಾಗಬೇಕಾಯಿತೆ" ಎಂದು ಪರಿತಾಪಪಟ್ಟುಕೊಂಡರು. "ಸತ್ಯ ವನ್ನು ಹೊರಗೆಡಹಿದರೆ ಎಂಥ ಅಪ್ರಿಯವಾದ ಸತ್ಯ, ಎಂಥ ಅನಾಹುತಕ್ಕೆ ಕಾರಣವಾದ ಸತ್ಯ! ಈಗಿನ ಮೋಸವೇ ಲೇಸು" ಎಂದು ತಮಗೆ ತಾವೇ ಸಮಾಧಾನವನ್ನೂ ಹೇಳಿಕೊಂಡರು. "ಏನು ಮಾಡುವುದು? ಎಲ್ಲ ಸುಂದರಮ್ಮನವರ ಇಷ್ಟದಂತೆಯೇ ನಡೆಯಿತು, ಅದರ ಫಲ. ಅವರು ನನ್ನ ಮಾತನ್ನು ಮೊದಲೇ ಕೇಳಿದ್ದರೆ ಎಲ್ಲಾ ನೇರವಾಗುತ್ತಿತ್ತು"— ಎಂದು, ತಮ್ಮ ಅಪರಾಧ ಏನೂ ಇಲ್ಲವೆಂಬಂತೆ, ತಮ್ಮ ಸಮಾಧಾನವನ್ನು ಮತ್ತಷ್ಟು ಬಲಪಡಿಸಿಕೊಂಡರು. "ನಾನು ಮರೆತು ರತ್ನ ನಾಲ್ಕು ತಿಂಗಳ ಬಸುರಿ ಎನ್ನಲಿಲ್ಲವಲ್ಲ, ಸದ್ಯ!" ಎಂದು ತಮ್ಮ ಜಾಗ್ರುತ ಬುದ್ಧಿಗೆ ತಾವೇ ಮೆಚ್ಚಿಕೊಂಡರು.

ಅಂತೂ, ರತ್ನ ಎರಡು ತಿಂಗಳ ಬಸುರಿ ಎಂಬುದು ಶಾಮಣ್ಣನಿಗೆ ಹೊಸ ಹಿಗ್ಗಿನ ಅಂಕುರಕ್ಕೆ ಕಾರಣವಾಯಿತು. ಅರ್ಥವಾಗದಿದ್ದ ರತ್ನನ ನಡತೆ ಈಗ ಅವನಿಗೆ ಹೊಸ ಬೆಳಕಿನಲ್ಲಿ ಕಾಣತೊಡಗಿತು. "ಅದಕ್ಕೇ ರತ್ನನಿಗೆ ಏನೂ ಬೇಕಿಲ್ಲ. ಊಟ ಉಡಿಗೆ ತೊಡಿಗೆ ಮಾತುಕತೆ ಯಾವುದ ರಲ್ಲಿಯೂ ಆಸಕ್ತಿಯಿಲ್ಲ. ಅವಳಿಗೆ ನೋವಾಗದಂತೆ ನಡೆದುಕೊಳ್ಳಬೇಕು. ಅವಳ ಬಯಕೆಯನ್ನೆಲ್ಲ ತೀರಿಸಬೇಕು. ....ಅಮ್ಮ ಬದುಕಿದ್ದರೆ ಎಷ್ಟು

ಹಿಗ್ಗುತ್ತಿದ್ದಳು! ಕಡೆಗೆ, ಸೊಸೆ ಗರ್ಭಿಣಿ ಎಂದು ಇಷ್ಟಾದರೂ ತಿಳಿದು ಕಣ್ಣು ಮುಚ್ಚಿದ್ದರೆ ಅವಳ ಜೀವಕ್ಕೆ ಎಷ್ಟೋ ಸುಖವೆನಿಸುತ್ತಿತ್ತು. ರತ್ನನನ್ನು ಬಲವಂತವಾಗಿ ನನಗೆ ಮದುವೆ ಮಾಡಿದ್ದಾದರೂ ಯಾಕೆ? ಈ ಭಾಗದಲ್ಲಿ ತಾಯ ಬಯಕೆ ಅವಳು ಬದುಕಿದ್ದಾಗಲೇ ತೀರಲಿಲ್ಲ...." ತಾಯನ್ನು ನೆನೆದು ಶಾಮಣ್ಣನ ಕಣ್ಣು ಹನಿಗೂಡುತ್ತಿತ್ತು.

ಪ್ರಸ್ತವಾಗುವುದಕ್ಕೆ ತುಸ ಮುಂಚೆಯೇ ಸಂಗೀತದ ಪಾಠವನ್ನು ರತ್ನ ಬೇಡವೆಂದು ನಿಲ್ಲಿಸಿಬಿಟ್ಟಿದ್ದಳು.

"ಪಿಟೀಲು ಬಾರಿಸಿದರೆ ಏನೂ ಆಯಾಸವಾಗುವುದಿಲ್ಲ, ಮತ್ತೆ ಬೇಕಾದರೆ ಪ್ರಾರಂಭಮಾಡು, ಹೇಳಿ ಕಳಿಸುತ್ತೇನೆ ಮೇಷ್ಟರಿಗೆ" ಎಂದ ಒಂದು ದಿನ ಶಾಮಣ್ಣ.

"ಸದ್ಯಕ್ಕೆ ಬೇಡ, ಮುಂದೆ ನೋಡಿಕೊಳ್ಳೋಣ" ಎಂದು ರತ್ನ ಉದಾಸೀನಳಾಗಿ ಉತ್ತರಕೊಟ್ಟಳು.

"ಈಗ ನೋಡು, ರತ್ನ, ಓದುವುದನ್ನೇ ಬಿಟ್ಟುಬಿಟ್ಟಿದ್ದೀನಿ. ನಿನಗೆ ಸಂತೋಷವಾಗಿರಬೇಕು, ಅಲ್ಲವೆ?" ಎಂದು ನಗುತ್ತ ಒಮ್ಮೆ ಕೇಳಿದ ಶಾಮಣ್ಣ.

"ಆಗಿನ ಮಾತು ಈಗ ಯಾಕೆ? ಮಹಾರಾಯರಾಗಿ ಓದಿಕೊಳ್ಳಿ ಎಷ್ಟು ಬೇಕಾದರೂ, ಬೇಡ ಅಂದವರು ಯಾರು?" ಎಂದು ರತ್ನ ಹೇಳಿದಳು.

"ಸಿನಿಮಾಕ್ಕೆ ಹೋಗೋಣವೆ? ನಿನಗೆ ಸಿನಿಮಾ ಅಂದರೆ ಹುಚ್ಚು."

"ಗಾಯನ ಸಮಾಜಕ್ಕೆ ಹೋಗೋಣವೆ?"

"ಅದು ಯಾಕೆ, ಮೊನ್ನೆ ತರಿಸಿದ್ದ ಸಿಲ್ಕ್ ಸೀರೆಯನ್ನು ಇಟ್ಟು ಕೊಳ್ಳದೆ ಶೆಟ್ಟರ ಅಂಗಡಿಗೆ ವಾಪಸ್ಸು ಮಾಡಿದೆ?"

ಅವನ ಎಲ್ಲ ಪ್ರಶ್ನೆಗಳಿಗೂ ರತ್ನನದು ಒಂದೇ ಉತ್ತರ:

"ಏನೂ ಬೇಡ. ಈಗ ನನಗೆ ಏನು ಕೊರತೆಯಾಗಿರುವುದು?"

ಬಸುರಿಯರ ಬಯಕೆಯ ವಿಚಾರವನ್ನು ಶಾಮಣ್ಣ ಕೇಳಿಬಲ್ಲ. ತಾಯ ಆತ್ಮ ನೊಂದುಕೊಳ್ಳಬಾರದು ಎಂಬ ಕಾರಣದಿಂದ ತನ್ನ ತಾಯಿ ತನಗೆ ಹೆಂಡತಿಯನ್ನಾಗಿ ಮಾಡಿದ್ದ ರತ್ನನನ್ನು ಈಗ ಅವನು ಮನಸಾರ ಪ್ರೀತಿಸತೊಡಗಿದ್ದ. ರತ್ನನ ಬಳಿ ಅದನ್ನು ಬಗೆಬಗೆಯಲ್ಲಿ ಪ್ರದರ್ಶಿಸುತ್ತಿದ್ದ. ಅವಳು ಬೇಸರವನ್ನು ವ್ಯಕ್ತಪಡಿಸಿದರೆ—

"ಆಗಿನ ಮಾತು ಈಗ ಯಾಕೆ? ಆಗ ನೀನು ನನಗೆ ಬೇಕಾಗಿರಲಿಲ್ಲ. ಈಗ ಬೇಕು. ಇದು ಬೂಟಾಟಿಕೆಯಲ್ಲ, ರತ್ನ"—ಅವಳು ಆಡಿದ ಮಾತನ್ನು ನಗುತ್ತ ಅವಳಿಗೇ ಹಿಂದಿರುಗಿಸುತ್ತಿದ್ದನು.

ಈ ಮಾತನ್ನು ಕೇಳಿ ರತ್ನನ ಕರುಳು ಕಿವುಚಿದಂತಾಗುತ್ತಿತ್ತು. ಮನಸ್ಸಿನ ನೋವು ಮುಖದಲ್ಲಿ ಮೂಡಿ ಕಾಣುತ್ತಿತ್ತು. ಅದು ಬಸುರಿಯ ಕಳ್ಳಬೇನೆ, ಹೊಟ್ಟೆಯುನೋವು, ಎಂದುಕೊಳ್ಳುವನು ಶಾಮಣ್ಣ.

ರತ್ನ ತಾಯಾಗಲಿರುವವಳು; ಅವಳ ಬಯಕೆ ತೀರಿಸಬೇಕಾದ್ದು ತನ್ನ ಕರ್ತವ್ಯ ಎಂದು ಶಾಮಣ್ಣ ಭಾವಿಸುವನು. ರತ್ನನ ಅಂತರಂಗದ ಬಯಕೆಯನ್ನು ಅರಿತು ಅದನ್ನು ತೃಪ್ತಿಪಡಿಸಬೇಕೆಂದು ಶಾಮಣ್ಣ ಬಹು ವಿಧದಲ್ಲಿ ಹೆಣಗಿದನು. ಭಟ್ಟರಿಗೆ ಹೇಳಿ ದಿನಕ್ಕೆ ಒಂದು ಬಗೆಯ ತಿಂಡಿ ತಿನಿಸು ಮಾಡಿಸುತ್ತಿದ್ದನು.

ಏನು ಮಾಡಿದರೂ, ಬಾಯಿಬಿಟ್ಟು ಹೇಳಿಕೊಳ್ಳದ ರತ್ನನ ಬಯಕೆ ಏನು ಎಂಬುದು ಅವನಿಗೆ ಗೊತ್ತಾಗುತ್ತಿರಲಿಲ್ಲ.

ಭಟ್ಟರು ಅಡಿಗೆಯ ಕೆಲಸವನ್ನು ಮಾಡಿಕೊಳ್ಳುತಿದ್ದರು. ಮನೆಯನ್ನು ಗುಡಿಸುವುದು, ಪೇಟೆಗೆ ಹೋಗಿ ಸಾಮಾನು ತರುವುದು ಮೊದಲಾದ ಹೊರಗಿನ ಸುತ್ತಾಟದ ಕೆಲಸ ಇವಕ್ಕೆಲ್ಲ ಕೆಂಚಪ್ಪ ಇದ್ದೇ ಇದ್ದ; ಮನೆಯನ್ನು ಸಾರಿಸುವುದು, ರಂಗೋಲಿಯಿಡುವುದು, ಕಸಮುಸುರೆ ಮೊದಲಾದ ಕೆಲಸಗಳಿಗೆ ಹೆಣ್ಣಾಳು ಇದ್ದಳು. ರತ್ನ ಕುಳಿತಕಡೆ ಬಿಟ್ಟು ಕದಲಬೇಕಾಗಿರಲಿಲ್ಲ.

ಇಷ್ಟೆಲ್ಲ ಸಹಾಯ ಸೌಕರ್ಯಗಳಿದ್ದರೂ, ಮನೆಯಲ್ಲಿ ಸುಂದರಮ್ಮ ನವರು ಇದ್ದಾಗಿನ ಹೆಣ್ಣು ದಿಕ್ಕು ಇಲ್ಲದಂತಾಗಿತ್ತು. ಗಂಡನೊಂದಿಗೆ ಕೂಡ ಹೇಳಿಕೊಳ್ಳಲಾಗದಂತಹ ಬೇನೆಯನ್ನೊ ಬಯಕೆಯನ್ನೊ ರತ್ನ ಯಾರಲ್ಲಿ ಹೇಳಿಕೊಳ್ಳಬೇಕು?

ಡಾ|| ರಘುರಾಂ ಈ ಸಂದರ್ಭವನ್ನು ಗ್ರಹಿಸಿದರು. ಹಿಂದೆ ಒಮ್ಮೆ ನೇಮಿಸಿಕೊಂಡಿದ್ದ ಬಡಮುತ್ತೈದೆಯನ್ನು ಗೊತ್ತುಮಾಡಿ, ಮನೆಯ 'ಸುತ್ತುಗೆಲಸಕ್ಕೆ' ಮತ್ತು ರತ್ನನ ನೆರವಿಗೆ ನೇಮಿಸಿಕೊಳ್ಳುವಂತೆ ಒತ್ತಾಯಮಾಡಿದರು.

ಹಾಗೆ ನೇಮಕಗೊಂಡ ಸಾವಿತ್ರಮ್ಮನವರಿಗೆ ಮನೆಯ ಸುತ್ತ ಸುತ್ತುವ ಕೆಲಸ ಇದ್ದಿತೆ ಹೊರತು, ಸುತ್ತುಗೆಲಸ ಏನೂ ಇರಲೇ ಇಲ್ಲ. ರತ್ನ ಬೇಡ ಎಂದರೂ ಕೇಳಲಿಲ್ಲ; ಶಾಮಣ್ಣ ಅವರನ್ನು ಡಾಕ್ಟರ ಸಲಹೆ ಯಂತೆ ಅವಳ ನೆರವಿಗೆಂದು ನೇಮಿಸಿಕೊಂಡ.

ಡಾ|| ರಘುರಾಂ ಅವರೂ ಆಗಾಗ್ಗೆ ಬಂದು ರತ್ನನನ್ನು ಪರೀಕ್ಷಿಸು ತ್ತಿದ್ದರು. ಏನೇನೋ 'ಟಾನಿಕ್' ಬರೆದುಕೊಟ್ಟರು. ಆತಂಕಕ್ಕೇನೂ ಕಾರಣವಿಲ್ಲವೆಂದು ಧೈರ್ಯಕೊಡುತ್ತಿದ್ದರು.

ದಿನ ಕಳೆದಂತೆ, ಬಸಿರಲ್ಲಿ ಕೂಸು ಬಲಿತು ಬೆಳೆದಂತೆ, ತಾನು ತಾಯಾಗಲಿರುವವಳು ಎಂಬ ಭಾವನೆಯೂ ರತ್ನನಲ್ಲಿ ಬಲಿತು ಬೆಳೆಯ ತೊಡಗಿತು. ಆ ಕೂಸಿನ ತಂದೆಯಲ್ಲಿ ಸಹಜವಾದ ಅನುರಕ್ತಿ ಅಂತರಂಗದಲ್ಲಿ ಅಂತರ್ಗಾಮಿಯಾಗಿ ಇದ್ದೇ ಇದ್ದಿತು. ಅದನ್ನು ಹೊರಕ್ಕೆ ತೋರುವ ಅವಕಾಶವಾಗಲಿ ಇಷ್ಟವಾಗಲಿ ಅವಳಿಗೆ ಇರಲಿಲ್ಲ. ಇಷ್ಟವಿಲ್ಲದಿದ್ದರೂ ಅವಳು ಈಗ ತನ್ನ ಪತಿಯೆನ್ನಿಸಿದ ಶಾಮಣ್ಣನಲ್ಲಿ ಅನುರಾಗವನ್ನಲ್ಲದಿದ್ದರೂ ಅವನು ವ್ಯಕ್ತಪಡಿಸುತ್ತಿದ್ದ ನಯದ, ಅ ನು ನ ಯ ದ ನಡತೆಯನ್ನೇ ತೋರಿಸಬೇಕಾಗಿತ್ತು.

ಗರ್ಭಶಿಶು ತನ್ನದಲ್ಲ; ಆದರೆ ಶಾಮಣ್ಣ ತನ್ನದೆಂದೇ ತಿಳಿದು ರತ್ನನ ವಿಷಯದಲ್ಲಿ ಅದೆಷ್ಟು ಕೋಮಲವಾಗಿ ವರ್ತಿಸುತ್ತಿದ್ದಾನೆ!

ವಿಚಿತ್ರ! ಅವನ ಕೋಮಲಭಾವ ರತ್ನನ ಹೃದಯಕ್ಕೆ ಹೊನ್ನ ಕಠಾರಿ!

ಹೊರಕ್ಕೆ ಹೇಗೆ ಹೇಗೋ ಕಾಣುತ್ತಿದ್ದ, ಥಳುಕು ಪಳುಕು ಇಲ್ಲದ, ಯಾವಾಗಲೂ ತನ್ನಲ್ಲಿ ಒಲವಿನ ಸುಳಿವನ್ನೇ ತೋರದ, ಓದಿನಲ್ಲಿ ಆಸಕ್ತ ರಾಗಿ ತನ್ನ ಕಡೆಗೆ ಗಮನವನ್ನೇ ಕೊಡದಿದ್ದ ಇವರು ಇದ್ದಕಿದ್ದಹಾಗೆ ಎಲ್ಲ ವನ್ನೂ ಮರೆತು ತನ್ನನ್ನು ಏಕೆ ಹೀಗೆ ನಂಬಲಾಗದಷ್ಟು ಪ್ರೀತಿಯಿಂದ ಕಂಡುಕೊಳ್ಳುತ್ತ ಇದ್ದಾರೆ! ಇಂಥವರಿಗೆ ಈ ಮೋಸವೇ! ಇದೇಕೆ ಹೀಗಾ ಯಿತು? ತಪ್ಪೇನೋ ತನ್ನದೆ? ಆ ತಪ್ಪಿಗೆ ಪ್ರಾಯಶ್ಚಿತ್ತವೇನು?

ತಾನು ಈಗ ಸಾಯುವ ಹಾಗಿಲ್ಲ. ತಾನು ಸತ್ತರೆ ಬಸಿರ ಹಸುಳೆ

ಯನ್ನೂ ತನ್ನೊಂದಿಗೆ ಸಾವಿನ ದವಡೆಗೆ ಸೆಳೆದೊಯ್ಯಬೇಕು. ಅದು ತಪ್ಪು; ಅಲ್ಲ, ಘೋರ ಪಾಪ! ಛೆ ಛೆ, ಅದು ಸಾಧ್ಯವಿಲ್ಲ. ಮಗು ಬಸಿರಿನಿಂದ ಹೊರಬಂದು ಉಸಿರಾಡಲು ಸ್ವತಂತ್ರವಾದ ಮೇಲೆ ತಾನು ಕಣ್ಣು ಮುಚ್ಚ ಬೇಕು. ಆಗ, ನಿಜವನ್ನು ಒಪ್ಪಿಕೊಂಡರೂ ಬಾಧಕವಿಲ್ಲ; ಒಪ್ಪಿಕೊಳ್ಳು ವುದು ಸುಲಭ. ತಪ್ಪನ್ನು ಒಪ್ಪಿಕೊಳ್ಳುವುದೇ ಸರಿಯಾದ್ದು; ಅದೇ ಪ್ರಾಯಶ್ಚಿತ್ತ. ಒಳಗಿನ ಪಶ್ಚಾತ್ತಾಪ ಅದು ಹೇಗೆ ಪ್ರಾಯಶ್ಚಿತ್ತವಾ ದೀತು? ಅದನ್ನು ಹೊರಪಡಿಸಿದಾಗ ಮಾತ್ರ ಅದು ಪ್ರಾಯಶ್ಚಿತ್ತ. ತಪ್ಪನ್ನು ಒಪ್ಪಿಕೊಳ್ಳುವುದೇ ಸರಿಯಾದ ಪ್ರಾಯಶ್ಚಿತ್ತ. ಬಹಿರಂಗವಾದ ಪಶ್ಚಾತ್ತಾಪವೇ ಎಲ್ಲ ಪಾಪವನ್ನೂ ತೊಳೆಯಬಲ್ಲ ಪವಿತ್ರ ಗಂಗೆ. ಮಗು ಹುಟ್ಟಿದ ಮೇಲೆ ಆ ಪಶ್ಚಾತ್ತಾಪದ ಕಣ್ಣೀರ ಗಂಗೆಯಲ್ಲಿ ತಾನು ಮಿಾಯ ಬೇಕು; ಅದರಲ್ಲಿ ಮುಳುಗಬೇಕು; ಅದರಲ್ಲಿ ಅಂತ್ಯವನ್ನು ಕಾಣಬೇಕು. ಪಾಪಿಗಳನ್ನೂ ಕಾಪಾಡುವ ಆ ಭಗವಂತ ತನಗೆ ಆ ಅಂತ್ಯವನ್ನು ಕರುಣಿಸ ಬೇಕು.

ಈಗ ತಪ್ಪನ್ನು ಒಪ್ಪಿಕೊಂಡರೆ, ಅನಾಹುತವಾಗಬಹುದು. ಅಣ್ಣ ತಮ್ಮಂದಿರಲ್ಲಿ ದ್ವೇಷದ ಬೀಜವನ್ನು ಬಿತ್ತಿದಂತಾಗಬಹುದು. ಗರ್ಭದ ಶಿಶುವನ್ನು ಕೈಹಿಡಿದ ಗಂಡ ನಿರಾಕರಿಸಬಹುದು; ರಾಜು ತಂದೆಯ ಹೊಣೆ ಯನ್ನು ಹೊತ್ತುಕೊಳ್ಳದೆ ಮುಖ ಮರಸಿಕೊಳ್ಳಲು ಹೇಡಿಯಂತೆ ಓಡಿ ಹೋಗಬಹುದು. ತನ್ನನ್ನು ಪ್ರೀತಿಯಿಂದ ಸಾಕಿ ಸಲಹಿದ ಅತ್ತೆ ಮಾವಂದಿರ ಮನೆ ಒಡೆಯಲು ತಾನು ಕಾರಣವಾಗಬೇಕೆ?

ಮಗು ಹೆತ್ತು ತಾನು ಸತ್ತರೆ, ಅಣ್ಣ ತಮ್ಮಂದಿರಲ್ಲಿ ಬಹುಶಃ ವೈಮನಸ್ಯಕ್ಕೆ ಕಾರಣವಾಗಲಾರದು. ತಾನು ಕಣ್ಮರೆಯಾದ ಮೇಲೆ, ಏನೂ ಅರಿಯದ ಹಸುಳೆಯ ಮೇಲೆ ಯಾರೂ ಕ್ರೋಧವನ್ನು ಮಸೆಯ ಲಾರರು; ಅಷ್ಟು ಕಟುಕರಾಗಲಾರರು.

ಅಥವಾ, ಸಾಯುವಂದು ನಿಜವನ್ನು ತಿಳಿಸದೆ ಸತ್ತರೂ ಆಯಿತು. ಹೌದು; ಒಂದು ದೃಷ್ಟಿಯಲ್ಲಿ ತಿಳಿಸದೆ ಸಾಯುವುದೂ ಒಳ್ಳೆಯದೆ. ಆಗ 'ಅವರು' ಮಗುವನ್ನು ತಮ್ಮದೆಂದೇ ಸಾಕಿಕೊಳ್ಳುತ್ತಾರೆ.

ತಿಳಿಸಿದರೊ? ತಿಳಿಸಿ ಕಣ್ಣು ಮುಚ್ಚಿದರೆ, ರಾಜು ತನ್ನ

ಮಗುವಿನ ಸಂರಕ್ಷಣೆ ಹೊರದೆ ಇರುತ್ತಾನೆಯೆ ? ಅಥವಾ, ತಮ್ಮನ ಮಗು ಎಂದು ತಮ್ಮದನ್ನಾಗಿಯೇ ಮಾಡಿಕೊಂಡು ಅವರೇ ಸಾಕಿಕೊಳ್ಳದೆ ಇರುತ್ತಾರೆಯೆ ?

ಆಗ ದೇವರು ಹೇಗೆ ಬುದ್ಧಿ ಕೊಡುತ್ತಾನೆಯೋ ಹಾಗೆ ಮಾಡುವುದು. ದುರ್ಬುದ್ಧಿ ಹೇಗೆ ಹುಟ್ಟಿತೋ, ಅದರ ಅರಿವಾದಮೇಲೆ ಕಾಲಕ್ಕೆ ತಕ್ಕ ಸದ್ಬುದ್ಧಿ ಹುಟ್ಟದೆ ಇರುತ್ತದೆಯೆ?

ಆದರೆ, ಮಗು ಹುಟ್ಟಿದ ಕೂಡಲೆ ಕಣ್ಣುಮುಚ್ಚುವಂತಾಗಬೇಕು. ಅದು ಹೇಗೆ ಸಾಧ್ಯ?

ಸಾವಿನ ವರವನ್ನು ದೇವರು ಕರುಣಿಸಬೇಕು.

ತನ್ನ ಬಯಕೆ ಇಷ್ಟೇ: ತಾಯಾದ ತಪ್ಪಿಗೆ ಮಗುವನ್ನು ಹಡೆಯಬೇಕು; ಹೆಂಡತಿಯಾಗಿ ಅಧರ್ಮಮಾಡಿದರೂ ಹೆಣ್ಣಿನ ಧರ್ಮವನ್ನಾದರೂ ಪಾಲಿಸಬೇಕು. ಅದನ್ನು ಪಾಲಿಸದಿರುವುದು ಹೆಚ್ಚಿನ ಪಾತಕ. ಮಗುವನ್ನು ಹಡೆದಾದಮೇಲೆ, ಕಣ್ಣು ಮುಚ್ಚಬೇಕು. ಸಾವಿನ ಕತ್ತಲೆಯನ್ನು ಹೊಕ್ಕೇ ಬೆಳಕು ಕಾಣಬೇಕು.

ಸಾವು—ಈಗಲ್ಲ; ಮುಂದೆ, ಮಗುವನ್ನು ಹಡೆವನಂತರ. ಆ ಸಾವನ್ನು ದೇವರು ಕರುಣಿಸಬೇಕು: ತತ್‌ಕ್ಷಣದ ಸಾವು; ಮಗು ಹೆತ್ತ ಮರುಕ್ಷಣದ ಸಾವು.

ತನ್ನ ಬಯಕೆ ಇಷ್ಟೇ : ಮಗುವನ್ನು ಹಡೆದು ಸಾಯುವುದು.—

ಬಸಿರಿಯ ಬಸಿರಲ್ಲಿ ಮಗುವಿನೊಂದಿಗೆಯೇ ಈ ಬಯಕೆಯೂ ಬಲಿಯುತ್ತಿತ್ತು.

ಆದರೆ, ಬಸಿರಿಯ ಬಯಕೆ ಏನೆಂದು ಶಾಮಣ್ಣನಿಗೆ ತಿಳಿಯಲಾಗಲಿಲ್ಲ.

ಎಷ್ಟೋ ವೇಳೆ ಅವನು ಪ್ರೀತಿಯಿಂದ ಕೇಳುತ್ತಿದ್ದ:

"ರತ್ನ, ನಿನಗೆ ಏನು ಬಯಕೆ ಇದ್ದರೂ ಹೇಳು. ಅದನ್ನು ನೆರವೇರಿಸಲು ಪ್ರಯತ್ನಪಡುತ್ತೇನೆ. ಬಸುರಿಯ ಬಯಕೆ ತೀರದೆ ಇರಬಾರದಂತೆ; ತೀರದ ಬಯಕೆಯಿದ್ದರೆ ಹೆರಿಗೆ ತುಂಬ ಕಷ್ಟವಾಗುತ್ತಂತೆ...."

ರತ್ನನ ಮನಸ್ಸಿನ ಗರ್ಭದಲ್ಲಿ ಬಯಕೆ ಇರಲಿಲ್ಲವೆ? ಇದ್ದಿತು. ಅವಳು ಹೇಳಿಕೊಳ್ಳಲಾಗದ ಬಯಕೆ.

ಆದರೆ, ಶಾಮಣ್ಣನ ಮನಸ್ಸನ್ನು ಇನ್ನು ನೋಯಿಸಲು ರತ್ನನಿಗೆ ಮನಸ್ಸಾಗಲಿಲ್ಲ.

"ಮೈಸೂರಿನ ಮಲ್ಲಿಗೆ ಹೂವನ್ನು ಮುಡಿಯಲು ತಂದು ಕೊಡುತ್ತೀರಾ?........ಮೈಸೂರು ಬದನೆಯ ಕಾಯಿ ತರಿಸಿ ವಾಂಗೀಭಾತು ಮಾಡಿಸಿ ಇವೊತ್ತು........ಹಾಗಲಕಾಯಿ ಗೊಜ್ಜು ಮಾಡಿಸಿ; ನಿಮಗೆ ಸೇರುತ್ತೋ ಇಲ್ಲವೋ...." ಹಾಗೆ ಇಲ್ಲದ ಸಣ್ಣಪುಟ್ಟ ಬಯಕೆಗಳನ್ನು ರತ್ನ ಶಾಮಣ್ಣನಿಗೆ ಹೇಳಿಕೊಳ್ಳ ತೊಡಗಿದಳು.

"ಹೆಣ್ಣಾದರೆ ಏನು ಹೆಸರಿಡೋಣ, ರತ್ನ?"

"ಅಜ್ಜಿಯ ಹೆಸರು."

"ಮಗು ನನ್ನನ್ನ ಹೋತುಕೊಂಡರೋ?"

ಎಂದು ಶಾಮಣ್ಣ ನಗುವನು. ಮತ್ತೆ ಪ್ರಶ್ನಿಸುವನು:

"ಗಂಡುಮಗು ಆದರೆ?"

"ಗೊತ್ತೇ ಇದೆ. ಅಜ್ಜನ ಹೆಸರು."

ಹೀಗೆ ಸಾಗುತ್ತಿತ್ತು ರತ್ನನ ಸೋಗಿನ ಬಾಳು.

ಅವಳ ಪ್ರಸುಪ್ತವಾದ ನಿಜವಾದ ಅಂತರಂಗದ ಬಯಕೆ ಏನೆಂದು ಶಾಮಣ್ಣನಿಗೆ ಮಾತ್ರ ಗೊತ್ತಾಗಲೇ ಇಲ್ಲ. ಗರ್ಭದ ಶಿಶುವಿನೊಂದಿಗೆ ಹೊರಬರಲು ಅದು ಕಾಯುತ್ತಿತ್ತು.

ಯಾವ ಬಯಕೆಯೋ ಆಗಲಿ, ಹಣ್ಣಾಗಲು ಕಾಲ ಬೇಕಷ್ಟೆ?

ರತ್ನ ಹೆರುವುದಕ್ಕೆ ಮೂರು ದಿನ ಮುಂಚೆಯೇ ಅವಳಿಗೆ ಬೇನೆ ಮೊದಲಾಯಿತು.. ಹೆರಿಗೆಯ ಬೇನೆ ಅಡ್ಡ ಮಳೆಯ ಹಾಗೆ: ಎಂದು ಮೊದಲಾಗುತ್ತದೆಯೋ, ಎಂದು ಹೆರಿಗೆಯಾಗುವುದೋ ಹೇಳುವುದು ಕಷ್ಟ. ಅದನ್ನವಳು ಎರಡು ದಿನ ಹೇಗೋ ಸಹಿಸಿದಳು. ಎರಡು ದಿನ ಕಳೆದಮೇಲೆ, ರತ್ನ ಬಾಯಿಬಿಟ್ಟು ಬೇನೆ ಎಂದು ಹೇಳಿಕೊಳ್ಳದಿದ್ದರೂ ಅವಳ ಸಂಕಟದ ಸುಳಿವು ಸಾವಿತ್ರಮ್ಮನವರಿಗೆ ಗೊತ್ತಾಗದೆ ಹೋಗಲಿಲ್ಲ. ಅವರು ಕೂಡಲೆ ಶಾಮಣ್ಣನಿಗೆ ಎಚ್ಚರಿಕೆ ಕೊಟ್ಟರು: "ಹತ್ತಿರದಲ್ಲಿರುವ ಯಾರಾದರೂ ಸೂಲಗಿತ್ತಿಗೆ ಹೇಳಿಕಳಿಸಿ" ಎಂದು. ಸೂಲಗಿತ್ತಿಯನ್ನು ಕರೆತರುವ ಕೆಲಸವನ್ನು ರಾಜುವಿಗೆ ವಹಿಸಿ, ಶಾಮಣ್ಣ ಡಾಕ್ಟರ ಮನೆಗೆ ಧಾವಿಸಿದ. ಆಗ ರಾತ್ರಿ ಹತ್ತುಗಂಟೆ, ಡಾ|| ರಘುರಾಂ ಅದೇತಾನೆ ಊಟಮಾಡಿ, ತಾಂಬೂಲಹಾಕಿಕೊಳ್ಳುತ್ತಾ, ಪತ್ರಿಕೆ ಓದುತ್ತಾ ಮಂಚದ ಮೇಲೆ ಮಲಗಿದ್ದರು. ಶಾಮಣ್ಣ ಬಂದದ್ದನ್ನು ತಿಳಿದಕೂಡಲೆಯೇ ಅವರು ಸಂದರ್ಭವೇನೆಂಬುದನ್ನು ಗ್ರಹಿಸಿದರು. ಅವನು ಸಂದರ್ಭವನ್ನು ತಿಳಿಸಿದ ಮೇಲೆ, ತಮ್ಮ ಊಹೆ ಸರಿಯಾಯಿತೆಂದುಕೊಂಡರು.

'ಮಿಡ್‌ವೈಫಿಗೂ (ಸೂಲಗಿತ್ತಿಗೂ) ಹೇಳಿ ಕಳಿಸಿದ್ದೀಯೋ ಇಲ್ಲವೋ?' ಎಂದು ಡಾಕ್ಟರ್ ಶಾಮಣ್ಣನನ್ನು ಕಾರಿನಲ್ಲಿ ಪ್ರಶ್ನಿಸಿದರು.

"ರಾಜುವನ್ನು ಕಳಿಸಿದ್ದೇನೆ. ಗಾಡಿಮಾಡಿಕೊಂಡು ಹೋಗಿ ಬೇಗನೆ ಕರೆದುಕೊಂಡು ಬಾ ಎಂದು ಹೇಳಿದ್ದೇನೆ" ಎಂದು ಶಾಮಣ್ಣ ಉತ್ತರ ಕೊಟ್ಟ.

"ಒಳ್ಳೆಯ ಕೆಲಸಮಾಡಿದೆ" ಎಂದರು ಡಾಕ್ಟರು.

ಡಾಕ್ಟರೂ ಶಾಮಣ್ಣನೂ ಮನೆಗೆ ಬಂದಾಗ ರಾಜು ಇನ್ನೂ ಸೂಲಗಿತ್ತಿಯನ್ನು ಕರೆತಂದಿರಲಿಲ್ಲ. ಅಷ್ಟು ಹೊತ್ತಿಗೆ, ಸಾವಿತ್ರಮ್ಮನವರು

ರತ್ನನನ್ನು ಅವಳ ಹಾಸಿಗೆಯ ಮೇಲೆ ಮಲಗಿಸಿ ಪಕ್ಕದಲ್ಲಿ ಅವಳಿಗೆ ಧೈರ್ಯ ಹೇಳುತ್ತ ಕುಳಿತಿದ್ದರು. ಡಾಕ್ಟರೂ ಶಾಮಣ್ಣನೂ ಬಂದಕೂಡಲೆ, ಅವರು ಎದ್ದುನಿಂತು ದೂರಕ್ಕೆ ಸರಿದರು.

ಡಾಕ್ಟರ್ ರಘುರಾಂ ಹೆಚ್ಚೇನೂ ಮಾಡುವಂತಿರಲಿಲ್ಲ; ತಮ್ಮಿಂದ ಸಾಧ್ಯವಿದ್ದಷ್ಟು ಪೂರ್ವಭಾವಿ ಪರೀಕ್ಷೆಗಳನ್ನೆಲ್ಲ ನಡಸಿದರು.

"ಎಲಾ, ಇದೇನಿದು! ಹಿಂದೆ ಪರೀಕ್ಷೆಮಾಡುತ್ತಾ ಇದ್ದಾಗ ಎಂದೂ 'ಬ್ಲಡ್ ಪ್ರೆಷರ್' (High blood-pressure) ಇರಲೇ ಇಲ್ಲ! **It has shot up now!** (ಈಗ ತುಂಬ ಮೇಲೇರಿದೆ). ಎಷ್ಟು ತಿಂಗಳು ಸುಮಾರು?" ಎಂದು ಡಾಕ್ಟರ್ ಶಾಮಣ್ಣನನ್ನು ಕೇಳಿದರು.

ತಮಗೆ ಗೊತ್ತಿರುವ ವಿಚಾರವಾಗಿಯೇ ಪ್ರಶ್ನೆ ಕೇಳುತ್ತಿದೇನೆಂದು ಡಾಕ್ಟರಿಗೆ ತಟ್ಟನೆ ನೆನಪಾಯಿತು. ಆದರೆ, ಪ್ರಶ್ನೆ ಕೇಳಿದ್ದರಿಂದ ಬಾಧಕವೇನಿಲ್ಲವೆಂದು ಸಮಾಧಾನಗೊಂಡರು.

"ಇನ್ನೂ ಎಂಟು ತುಂಬಿಲ್ಲ ಅಂತ ಕಾಣುತ್ತೆ, ಅಲ್ಲವೆ ರತ್ನಾ?" ಎಂದು, ಶಾಮಣ್ಣ ರತ್ನನನ್ನು ಪ್ರಶ್ನಿಸಿದ.

ರತ್ನ ಏನು ಉತ್ತರ ಕೊಟ್ಟಾಳು? ಮೌನವಾಗಿದ್ದಳು.

"ನಾನು ಒಂದು ಸಲ ಕೇಳಿದಾಗ, ಹಾಗಂತ ಹೇಳಿದಹಾಗೆ ನೆನಪು" ಎಂದರು ಬಳಿಯೆ ನಿಂತಿದ್ದ ಸಾವಿತ್ರಮ್ಮನವರು.

ಅಷ್ಟು ಹೊತ್ತಿಗೆ ಸೂಲಗಿತ್ತಿಯೂ ಬಂದಳು. ಗಂಡಸರನ್ನು ಹೊರಕ್ಕೆ ಹೋಗುವಹಾಗೆ ಆಜ್ಞೆ ಮಾಡಿದಳು. ಡಾ|| ರಘುರಾಂ ಕೂಡ ಆಕೆಯ ಆಜ್ಞೆಗೆ ತಲೆಬಾಗಬೇಕಾಯಿತು. ಸಾವಿತ್ರಮ್ಮನವರು ಒಳಗೇ ಉಳಿದಿದ್ದರು. ಸೂಲಗಿತ್ತಿ ಕೋಣೆಯ ಬಾಗಿಲನ್ನು ಹಾಕಿಕೊಂಡು, ಐದು ನಿಮಿಷವಾದ ಮೇಲೆ ಹೊರಕ್ಕೆ ಬಂದಳು. ಶಾಮಣ್ಣನನ್ನು ಕುರಿತು, ಆದರೆ ಡಾಕ್ಟರ ಮುಖವನ್ನು ನೋಡುತ್ತಾ, ಆಕೆ ಹೇಳಿದಳು.

"ಚೊಚ್ಚಲು ಬಸಿರಿಯಂತೆ. ಕೇಳಿದರೆ ಎಂಟು ತಿಂಗಳೂ ಇಲ್ಲ ಅಂತಾರೆ. ನೋಡಿದರೆ ದಿನ ತುಂಬಿರುವಹಾಗೆ ಕಾಣುತ್ತೆ. ಹೇಗಾದರೂ ಆಗಲಿ, ಈ 'ಕೇಸ್'(ಹೆರಿಗೆ)ತುಂಬ ಕಷ್ಟದ್ದು ಅಂತ ನನಗೆ ತೋರುತ್ತೆ. ಇನ್ನೂ ತುಂಬ ಎಳೆಯುವ ಹಾಗೂ ಕಾಣುತ್ತೆ. ಆಸ್ಪತ್ರೆಗೆ ಕರೆದುಕೊಂಡು

ಹೋಗುವುದು ಮೇಲು. ಆಮೇಲೆ ಕೇಸ್ ಕೆಡಿಸಿದಳು ಅಂತ ನನ್ನ ದೂರಬೇಡಿ" ಎಂದು ಮಿಡ್‌ವೈಫ್ ಮೀನಾಕ್ಷಮ್ಮ ಸ್ಪಷ್ಟವಾಗಿ ಹೇಳಿಬಿಟ್ಟಳು.

ಮೀನಾಕ್ಷಮ್ಮ ಡಾಕ್ಟರ್ ರಘುರಾಂ ಅವರ ಪರಿಚಯದ ಸೂಲಗಿತ್ತಿಯೇ. ಆಕೆಯ ಮಾತೇನು, ಅವರೂ ಅದೇ ಅಭಿಪ್ರಾಯಕ್ಕೆ ಆಗಲೇ ಬಂದಿದ್ದರು. ಆಕೆಯ ಮಾತಿನಿಂದ ರಘುರಾಂ ಅವರ ತೀರ್ಮಾನಕ್ಕೆ ಪುಷ್ಟಿ ದೊರಕಿತು.

"ಹೇಗಿದ್ದರೂ ಕಾರ್ ತಂದಿದ್ದೇನೆ. ಆಸ್ಪತ್ರೆಗೆ ಕರೆದುಕೊಂಡು ಹೊರಟು ಹೋಗೋಣ, ಶಾಮಣ್ಣ. ಅದೇ ಮೇಲು" ಎಂದರು ಡಾಕ್ಟರ್.

"ನೀವು ಹೇಗೆ ಹೇಳಿದರೆ ಹಾಗೆ. ಏನು ರತ್ನ, ನಿನ್ನ ಅಭ್ಯಂತರ ಇಲ್ಲ ತಾನೆ?"ಎಂದು ಕೋಣೆಯ ಹೊಸಿಲಮೇಲೆ ನಿಂತು, ಶಾಮಣ್ಣ ರತ್ನ ನನ್ನು ಪ್ರಶ್ನಿಸಿದ.

ರತ್ನ "ಆಗಲಿ" ಎಂದು ಒಪ್ಪಿಕೊಂಡಳು.

ಸಾವಿತ್ರಮ್ಮನವರು ರತ್ನನ್ನು ಕೈಹಿಡಿದು ಕರೆತಂದು ಕಾರಿನ ಹಿಂದುಗಡೆಯ ಪೀಠದ ಮೇಲೆ ಕುಳ್ಳಿರಿಸಿದರು. "ದಯವಿಟ್ಟು ನೀವೂ ಬನ್ನಿ, ರತ್ನಮ್ಮನ ಜೊತೆಗಿದ್ದರೆ ಮೇಲು" ಎಂದು ಡಾ|| ರಘುರಾಂ ಸೂಚಿಸಿದ್ದರ ಮೇಲೆ, ಸಾವಿತ್ರಮ್ಮನವರೂ ರತ್ನನ ಪಕ್ಕದಲ್ಲಿ ಕುಳಿತರು. ಶಾಮಣ್ಣ ರತ್ನನ ಪಕ್ಕದಲ್ಲಿ ಕುಳಿತ.

ರಾಜು, ಕೆಂಚಪ್ಪ, ಮೀನಾಕ್ಷಮ್ಮ ಕಾರಿನ ಪಕ್ಕದಲ್ಲಿ ನಿಂತಿದ್ದರು.

"ನಾನೂ ಬರಲೇ, ಶಾಮಣ್ಣ, ಜೊತೆಗೆ?" ಎಂದು ರಾಜು ಪ್ರಶ್ನಿಸಿದ.

"ಏನೂ ಬೇಡ. ನಮ್ಮ ಜೊತೆ ನೀನೂ ಯಾಕೆ ಸುಮ್ಮನೆ ನಿದ್ದೆಗೆಡಬೇಕು" ಎಂದ ಶಾಮಣ್ಣ.

ರತ್ನ ರಾಜುವಿನ ಕಡೆತಿರುಗಿ, ಕಣ್ಣನೋಟದಿಂದ "ನೀನೂ ಬಾ" ಎಂದು ಕರೆದದ್ದು ಮಬ್ಬು ಬೆಳಕಿನಲ್ಲಿ ಅವನ ಗಮನಕ್ಕೆ ಬರಲಿಲ್ಲ.

ಕಾರ್ 'ಸ್ಟಾರ್ಟ್' ಆಯಿತು. ಅಷ್ಟರಲ್ಲಿ ರಾಜು ಮನೆಯೊಳಕ್ಕೆ ಧಾವಿಸಿ, ಸುಂದರಮ್ಮನವರು ಹೊದೆಯುತ್ತ ಇದ್ದ ಕಾಶ್ಮೀರದ ಶಾಲನ್ನು

ತಂದು, ಸಾವಿತ್ರಮ್ಮನವರ ಕೈಗಿತ್ತು, "ಕಾರು ಓಡುವಾಗ ತುಂಬ ಚಳಿಯಾಗುತ್ತೆ. ರತ್ನ ಹೊದೆದುಕೊಳ್ಳಲಿ" ಎಂದು ಹೇಳಿದ. "ನೀನು ಶಾಲು ತಂದದ್ದು ಒಳ್ಳೆಯದಾಯಿತು. ನನಗೆ ಮರೆತೇ ಹೋಯಿತು. ನೋಡಿದೆಯಾ, ಇಂಥ ಸಂದರ್ಭದಲ್ಲಿ ಒಬ್ಬರಿಗಿಂತ ಇಬ್ಬರು ಲೇಸು. ಹೋಗಲಿ, ನೀನೂ ಬಂದೇಬಿಡು. ಹೇಗಿದ್ದರೂ, ಕಾರಿನಲ್ಲಿ ಸ್ಥಳ ಇದೆ" ಎಂದು ಶಾಮಣ್ಣ ರಾಜುವನ್ನೂ ಕರೆದ. "ಡಾಕ್ಟರಿಗಿಂತ ನಾನು ಜೊತೆಯೇ? ನಾನೂ ಕೆಂಚಪ್ಪ ಮನೆಯ ಕಡೆ ನೋಡಿಕೊಂಡಿರುತ್ತೇವೆ. ಹೊತ್ತಾಯಿತು, ನೀವು ಬೇಗ ಹೊರಡಿ" ಎಂದು ರಾಜು ತನ್ನ ಹೋಗಬೇಕೆಂಬ ಅಸಕ್ತಿಯನ್ನೂ ಅಡಗಿಸಿ ನುಡಿದ. ಆಗ, ರತ್ನ, "ಪರವಾಯಿಲ್ಲ. ಮನೆಯ ಕಡೆ ಕೆಂಚಪ್ಪ ನೋಡಿಕೊಳ್ಳುತ್ತಾನೆ. ನೀನೂ ಬಾ ರಾಜು" ಎಂದು ಮೆಲ್ಲನೆ ನರಳುದನಿಯಲ್ಲಿ ನುಡಿದಳು. ರಾಜು ಮರು ಮಾತಾಡದೆ ಕಾರನ್ನು ಹತ್ತಿ ಡಾಕ್ಟರ ಪಕ್ಕದಲ್ಲಿ ಕುಳಿತ. "ಮೀನಾಕ್ಷಮ್ಮನವರು?" ಎಂದು ಅವನೇ ತಟ್ಟನೆ ನೆನೆದು ನುಡಿದ. "ಹೌದು ಹೌದು. ಅವರು ಒಬ್ಬರೇ ಮನೆಗೆ ಹೋಗುವ ಹಾಗಿಲ್ಲ. ಕೆಂಚಪ್ಪ ಮನೆಯ ಕಡೆ ನೋಡಿಕೊಳ್ಳಬೇಕು........" ಎಂದು ಶಾಮಣ್ಣ ಪೇಚಾಡುತ್ತಿದ್ದಾಗ, "ಅವರೂ ಕಾರಿನಲ್ಲಿ ಬಂದು ಬಿಡಲಿ. ನಾವು ಹಿಂದಿರುಗುವಾಗ ಅವರನ್ನು ಅವರ ಮನೆಯಲ್ಲಿ ಬಿಟ್ಟರಾಯಿತು: ಆಗಬಹುದಲ್ಲ, ಮೀನಾಕ್ಷಮ್ಮ" ಎಂದು ಡಾಕ್ಟರು ಅವರನ್ನು ಕೇಳಿದರು. "ಆಗಬಹುದು, ಅದಕ್ಕೇನು" ಎಂದು ಮೀನಾಕ್ಷಮ್ಮನವರು ಒಪ್ಪಿಕೊಂಡರು. ಶಾಮಣ್ಣ ಕಾರನ್ನು ಇಳಿದು ರಾಜುವಿನ ಪಕ್ಕದಲ್ಲಿ ಸ್ಥಳಮಾಡಿಕೊಂಡು ಕುಳಿತ. ಮೀನಾಕ್ಷಮ್ಮನವರು ರತ್ನನ ಪಕ್ಕದ ಇರುಕಿನೆಡೆಯಲ್ಲಿ ದಪ್ಪ ಮೈಯನ್ನು ಸಣ್ಣದಾಗಿಸಿಕೊಂಡು ಕುಳಿತರು.

ಡಾ|| ರಘುರಾಂ ಅವರ ಕಿರಿಯ ಕಾರು ಆರು ಮಂದಿಯನ್ನೂ ಹುಟ್ಟಲಿರುವ ಶಿಶುವನ್ನೂ ಹೊತ್ತು, ಹೆರಿಗೆಯ ಆಸ್ಪತ್ರೆಗೆ ಅಭಿಮುಖವಾಗಿ ಭರ್ರನೆ ಓಡಿತು.

ಆಸ್ಪತ್ರೆಯನ್ನು ತಲುಪಿದ ಕೂಡಲೆ ತುಂಬ ನಿಶ್ಯಕ್ತಳಾಗಿದ್ದ ರತ್ನನನ್ನು ಆಸ್ಪತ್ರೆಯ ಸಮ ವಸ್ತ್ರ ಧರಿಸಿದ್ದ ಇಬ್ಬರು ಆಳುಗಳು 'ಸ್ಟ್ರೆಚರ್' ಮೇಲೆ ಮಲಗಿಸಿಕೊಂಡು 'ಲೇಬರ್ ವಾರ್ಡಿ'ಗೆ (ಹೆರಿಗೆಯ ಕೋಣೆಗೆ) ಕರೆದೊಯ್ದರು. ಜೊತೆಯಲ್ಲಿ ಒಬ್ಬಳು 'ಆಯಾ' ಹಿಂಬಾಲಿಸಿದಳು.

ಶಾಮಣ್ಣ ಮತ್ತು ಇತರರೂ ರತ್ನನನ್ನು ಹಿಂಬಾಲಿಸಿದರು. ರತ್ನ ಹೆರಿಗೆಯ ವಾರ್ಡನ್ನು ಪ್ರವೇಶಿಸಿದಾಗ ಮೀನಾಕ್ಷಮ್ಮನೂ ಸಾವಿತ್ರಮ್ಮನವರೂ ವಾರ್ಡಿನ ಹೊರಗೇ ಕಾಯಬೇಕಾಯಿತು. ಡಾ|| ರಘುರಾಂ, ಶಾಮಣ್ಣ ಮತ್ತು ರಾಜು ಹೊರಗಡೆ, ಲೇಬರ್ ವಾರ್ಡಿನ ಸಮೀಪದ ವೆರಾಂಡದಲ್ಲಿಯೇ, ಒಂದು ಬೆಂಚಿನ ಮೇಲೆ ಕುಳಿತರು.

ಒಂದೆರಡು ನಿಮಿಷಗಳಲ್ಲಿಯೇ ನರ್ಸುಗಳು ಮತ್ತು ಡಾಕ್ಟರು ಲೇಬರ್ ವಾರ್ಡ್ ಕಡೆ ಹೊರಟರು. ಅವರು ಕಣ್ಣು ಹೊಸಕಿಕೊಂಡೇ ಬರುತ್ತಿದ್ದರು. ಅಂದಿನ 'ನೈಟ್ ಡ್ಯೂಟಿ'ಯಲ್ಲಿ ರತ್ನನದೇ ಮೊದಲನೆಯ 'ಕೇಸ್' (ಹೆರಿಗೆ).

ಒಬ್ಬಳು ಆಯಾ ಕೈಯಲ್ಲಿ ಒಂದು ಪುಸ್ತಕ ಹಿಡಿದುಕೊಂಡು ಬಂದು, "ಈಗ ಬಂತಲ್ಲ, ಕೇಸು, ಆ ಯಮ್ಮನ ಗಂಡ ಯಾರು?" ಎಂದು ಬೆಂಚಿನ ಮೇಲೆ ಕುಳಿತಿದ್ದವರ ಮುಂದೆ ಪುಸ್ತಕವನ್ನು ನೀಡಿದಳು.

"ನಾನು" ಎಂದ ಶಾಮಣ್ಣ.

"ನಿಮ್ಮ ಅಡ್ರುಸ್ಸು (ವಿಳಾಸ), ಕೆಲಸ, ಸಂಬಳ, ಎಲ್ಲ ಬರೀರಿ ಇದರಾಗೆ. ಹೆರಿಗೆ ಆದಮೇಲೆ 'ಸ್ಪೆಷಲ್ ವಾರ್ಡ್' ತಾನೆ?"

"ಹ್ಞೂ" ಎಂದ ಶಾಮಣ್ಣ.

"ಅದನ್ನೂ ಬರೀರಿ" ಎಂದಳು ಆಯಾ.

ಶಾಮಣ್ಣ ವಿವರಗಳನ್ನೆಲ್ಲಾ ಆ ಪುಸ್ತಕದಲ್ಲಿ ಬರೆದ.

ಐದು ನಿಮಿಷ ಕೂಡ ಇಲ್ಲ. ಹೊರಗೆ ಕಾದುಕುಳಿತಿದ್ದವರಿಗೆ ಅದು ಐದು ಯುಗವಾಗಿ ಪರಿಣಮಿಸಿತ್ತು. ಕ್ಷಣಕ್ಷಣದ ಗರ್ಭದಲ್ಲಿಯೂ ಅವರು ವರ್ತಮಾನ ಜನನವನ್ನು ನಿರೀಕ್ಷಿಸುತ್ತಿದ್ದರು.

ಮೀನಾಕ್ಷಮ್ಮ ದಡದಡನೆ ನಡೆದು ಬಂದಳು.

"ನಾನು ಹೇಳಲಿಲ್ಲವೇ? ಈ ಕೇಸು ತುಂಬ ಎಳೆಯುತ್ತೆ. ಎರಡು ಮೂರು ದಿನ ಎಳೆದರೂ ಎಳೆಯಬಹುದು. ಇನ್ನು ನನ್ನ ಕೆಲಸ ಏನಿಲ್ಲ ಡಾಕ್ಟರೆ. ನಾನು ಮನೆಗೆ ಹೋಗಬೇಕಲ್ಲ?" ಎಂದು ಮೀನಾಕ್ಷಮ್ಮ ಡಾ|| ರಘುರಾಂ ಅವರನ್ನು ಬೇಡಿಕೊಂಡಳು.

"ಸರಿ, ಹಾಗಾದರೆ. ಶಾಮಣ್ಣ, ನೀವು ಇಲ್ಲೇ ಇರಿ. ನಾನು ಮೀನಾಕ್ಷಮ್ಮನ್ನ ಬಿಟ್ಟು ಬಂದುಬಿಡುತ್ತೇನೆ'' ಎಂದು ಡಾ|| ರಘುರಾಂ ಮೀನಾಕ್ಷಮ್ಮನನ್ನು ಕರೆದುಕೊಂಡು ಹೊರಟರು.

ಡಾ|| ರಘುರಾಂ ಹೊರಟ ಒಂದೆರಡು ನಿಮಿಷಗಳಲ್ಲಿಯೇ ಶಾಮಣ್ಣನ ಬಳಿಗೆ ಒಬ್ಬಳು ಬಿಳಿಸೀರೆಯುಟ್ಟ ನರ್ಸ್ ಚಟಪಟನೆ ನಡೆದು ಬಂದಳು.

"ಲೇಬರ್ ಪೇಷೆಂಟಿನ ಹಸ್ಬೆಂಡ್ (ಬಸಿರಿಯ ಗಂಡ) ಯಾರು?" ಎಂದು ಕೇಳಿದಳು.

ಉಪಾಧ್ಯಾಯರ ಪ್ರಶ್ನೆಗೆ ವಿದ್ಯಾರ್ಥಿ ತಟ್ಟನೆ ಎದ್ದು ನಿಲ್ಲುವಂತೆ, ಶಾಮಣ್ಣ —

"ನಾನು'' ಎಂದು ಎದ್ದು ನಿಂತ. ಅವನ ಎದೆ ಡವಡವನೆ ಹೊಡೆದು ಕೊಳ್ಳುತ್ತಿತ್ತು.

"ಏನು, ಹೆರಿಗೆ ಆಯ್ತೆ?" ಎಂದು ರಾಜು ಆತಂಕಗೊಂಡು ಪ್ರಶ್ನಿಸಿದ.

"ಇನ್ನೂ ಈಗಲ್ಲಿ ಬಂತು. ತುಂಬ ಸಂಕಟಪಡ್ತುತ್ತಾ ಇದ್ದಾರೆ. ತುಂಬಾ ಹೈ ಬ್ಲಡ್ ಪ್ರೆಷರ್ ಇದೇರಿ! ಈಗ ತಾನೇ ಒಂದು ಗ್ಲೂಕೋಸ್ ಇಂಜೆಕ್ಷನ್ ಕೊಡ್ತು. ಹಾಗೆ ಮತ್ತಾಗಿ ಮಲಗಿದಾರೆ...."

ಇದ್ದಕ್ಕಿದ್ದ ಹಾಗೆ ನೋವಿನಿಂದ ಚೀರಿದ ಶಬ್ದ ಹೆರಿಗೆಯ ವಾರ್ಡ್ ಕಡೆಯಿಂದ ಕೇಳಿಬಂತು. "ರತ್ನನೇ, ಸಂದೇಹವಿಲ್ಲ" ಎಂದುಕೊಂಡರು ತಮ್ಮ ತಮ್ಮ ಮನಸ್ಸಿನಲ್ಲಿ, ಶಾಮಣ್ಣ ರಾಜು ಇಬ್ಬರೂ.

"ಹೋಗಿದ್ದು ನಮ್ಮ ಮನೆಯವರೇ ಅಲ್ಲವೆ?" ಶಾಮಣ್ಣ ಆತಂಕ ದಿಂದ ಪ್ರಶ್ನಿಸಿದ.

"ಹೌದು. ಅವರಲ್ಲದೆ ಬೇರೆ 'ಕೇಸು' ಯಾವುದೂ ಇಲ್ಲವೇ ಇಲ್ಲವಲ್ಲ. ಅಂದಹಾಗೆ, ಗಂಡಸರು ಇಲ್ಲಿ ಉಳಿದುಕೊಳ್ಳುವ ಹಾಗಿಲ್ಲ. ಹೇಗೂ ನಿಮ್ಮ ಕಡೆಯ ಹೆಂಗಸರು ಒಬ್ಬರು ಬಂದಿದ್ದಾರಲ್ಲಾ. ಅವರು ಇಲ್ಲೇ ಮಲಗಿ ಕೊಳ್ಳಬಹುದು. ನೀವು ಯಾಕೆ ನಿದ್ದೆ ಕೆಡುತ್ತೀರಿ, ಪಾಪ. ಕೇಸ್ ಇವೊತ್ತೂ ನಾಳೆ ಎಳೆಯುವಹಾಗೆ ಕಾಣುತ್ತೆ. ನೀವು ಹೋಗಿಬಿಟ್ಟು ನಾಳೆ ಬೆಳಗ್ಗೆ ಬಂದು ನೋಡಿಕೊಂಡು ಹೋಗಿ"—ಎಂದಳು ನರ್ಸ್.

"ಡಾ|| ರಘುರಾಂ ನಮ್ಮ ಜೊತೆ ಬಂದಿದ್ದ ಮಿಡ್‌ವೈಫನ್ನು ಬಿಟ್ಟು ಬರಲು ಹೋಗಿದ್ದಾರೆ. ಅವರು ಬರುವವರೆಗೆ ಇಲ್ಲಿ ಕುಳಿತಿರಬಹುದಲ್ಲ?" ಎಂದ ಶಾಮಣ್ಣ ಕೇಳಿದ.

"ಅದಕ್ಕೇನು ಪರವಾಯಿಲ್ಲ" ಎಂದಳು ನರ್ಸ್.

ಮತ್ತೆ ಕೇಳಿಬಂದಿತು ರತ್ನನ ವೇದನೆಯ ರೋದನಧ್ವನಿ.

ಶಾಮಣ್ಣ ರಾಜು ಇಬ್ಬರಿಗೂ ಕರುಳು ಕಿವಿಚಿಬಂದಿತು.

ಇನ್ನೊಬ್ಬಳು ಬಿಳಿಯಲಂಗದ ನರ್ಸ್ ಪಟಪಟನೆ ಪುಟಿಯುತ್ತಾ ಬಂದಳು.

"ಇಲ್ಲೇನು ಮಾಡ್ತಾ ಇದ್ದೀ ಅಲಮೇಲು? ಬೇಗ ಹೋಗಿ ದೊಡ್ಡ ಡಾಕ್ಟರ್‌ಗೆ 'ಫೋನ್'ಮಾಡು. ತುಂಬ 'ಡಿಫಿಕಲ್ಟ್ ಕೇಸು'. ನಾಳೆಯೋ ನಾಡಿದ್ದೋ ಅಂತಿದ್ರೆ, ಇವೊತ್ತೇ ಆಗುವ ಹಾಗೆ ಕಾಣುತ್ತೆ. ತುಂಬಾ unusual (ಅಸಾಧಾರಣ) ಕೇಸ್, ಸಿಸ್(ಸಿಸ್ಟರ್)"

ಸೀರೆಯ ನರ್ಸ್ ಕಣ್ಮರೆಯಾದಳು.

ಅಷ್ಟುಹೊತ್ತಿಗೆ ವಾರ್ಡಿನ ಮೇಟ್ರನ್ ಬಿರುಗಾಳಿ ಅಟ್ಟಿಸಿಕೊಂಡು ಬಂದ ಮೋಡದಂತೆ ಓಡಿಬಂದಳು.

"ಪೇಷೆಂಟಿನ ಹಸ್ಬೆಂಡ್ ಯಾರು?"

"ನಾನು" ಎಂದು ನಿಂತೇ ಇದ್ದ ಶಾಮಣ್ಣ ಹೃದಯವನ್ನು ಹಿಡಿಯಲ್ಲಿ ಹಿಡಿದು ಉತ್ತರಕೊಟ್ಟ.

"ನೀವು ಇಲ್ಲೇ ಇದ್ದರೆ ಒಳ್ಳೆಯದು ಅಂತ ಡಾಕ್ಟರ್ ಹೇಳ್ತಾರೆ?

ಇರುತ್ತೀರಾ, ಪ್ಲೀಸ್ (ದಯವಿಟ್ಟು) ?"

"ಆಗಬಹುದು" ಎಂದ ಶಾಮಣ್ಣ.

ಲಂಗದ ನರ್ಸ್, ಮೇಟ್ರನ್ ಇಬ್ಬರೂ ಮತ್ತೆ ಲೇಬರ್ ವಾರ್ಡಿನ ಕಡೆಗೆ ಹೊರಟರು.

ಮತ್ತೆ ಎರಡು ಮೂರು ನಿಮಿಷ. ಸೀರೆಯ ನರ್ಸ್ ಬಂದಳು.

"ಇನ್ನೇನು ದೊಡ್ಡ ಡಾಕ್ಟರೇ ಬಂದುಬಿಡುತ್ತಾರೆ. ನಿಮ್ಮ ವೈಫ್‌ಗೆ (ಹೆಂಡತಿಗೆ) ಪ್ರಜ್ಞೆ ತಪ್ಪಿಬಿಟ್ಟದೇರಿ! ಗಾಬರಿಯಾಗಬೇಡಿ. ಈಗಲೇ ಹೆರಿಗೆಯಾಗಿಬಿಟ್ಟರೆ ತುಂಬ ಅನುಕೂಲ" ಎಂದು ಒಂದು ಸುದ್ದಿ ತಿಳಿಸಿ ಹೊರಟುಹೋದಳು.

ಕಾಲು ಗಂಟೆಯಾದಮೇಲೆ ಸೀರೆ ಉಟ್ಟಿದ್ದ ನರ್ಸ್ ಬಂದಳು. ಶಾಮಣ್ಣನನ್ನು ಕುರಿತು ಹೇಳಿದಳು:

"ದೊಡ್ಡ ಡಾಕ್ಟರ್ ಬಂದು ತುಂಬ ಪ್ರಯಾಸಪಡುತ್ತ ಇದಾರೆ. ಈಸಿ ಲೇಬರ್ (ಸುಖಪ್ರಸವ) ಆಗುವ ಹಾಗೆ ಕಾಣುವುದಿಲ್ಲವಂತೆ. ಅವರೂನೂ, ಲೇಬರ್ ನರ್ಸೂನೂ ಮಾತಾಡಿಕೊಳ್ಳುತ್ತಾ ಇದ್ದರು: ಆಪರೇಷನ್ ಮಾಡಬೇಕಾಗಬಹುದಂತೆ. ವಿಕ್ಟೋರಿಯಾ ಆಸ್ಪತ್ರೆಯಿಂದ ಸರ್ಜನ್ ಸಾಹೇಬರನ್ನು ಬರಮಾಡಿಕೊಳ್ಳಬೇಕಾಗಬಹುದು ಅಂತಿದ್ದರು. ತಾಯಿಯ ಪ್ರಾಣ ಉಳಿಯಬೇಕಾದರೆ ಹೊಟ್ಟೆ ಆಪರೇಷನ್ ಮಾಡಿ ಮಗುವನ್ನ ತೆಗೆಯಬೇಕಂತೆ. ಅವರ ಅಭಿಪ್ರಾಯದ ಪ್ರಕಾರ ಮಗುವಿಗೆ ಹತ್ತು ತಿಂಗಳ ಹತ್ತಿರ ಹತ್ತಿರ. ಮಗು ತಾನಾಗಿ ಪ್ರಸವವಾಗುವುದಕ್ಕೆ ಬಿಟ್ಟರೆ ತಾಯಿಯ ಪ್ರಾಣ ಉಳಿಯುವುದಿಲ್ಲವಂತೆ. ಬಹುಶಃ ಇನ್ನು ಸ್ವಲ್ಪ ಹೊತ್ತಿಗೆ ದೊಡ್ಡ ಡಾಕ್ಟರೇ ಬಂದು ಆಪರೇಷನ್ನಿಗೆ ನಿಮ್ಮ ಒಪ್ಪಿಗೆ ಕೇಳುತ್ತಾರೆ ಅಂತ ಕಾಣುತ್ತೆ. ನಿಮಗೆ ಮುಂಚೆಯೇ ತಿಳಿಸಿ ಹೋಗೋಣ ಅಂತ ಬಂದೆ...."

ನಿಂತು ನರ್ಸಿನ ನುಡಿಗಳನ್ನು ಆಲಿಸುತ್ತ ಇದ್ದ ಶಾಮಣ್ಣ ಬೆಂಚಿನ ಮೇಲೆ ಕುಸಿದು ಕುಳಿತ.

ಕುಳಿತ ಕಡೆಯೇ ಮೌನವಾಗಿ ಕುಳಿತಿದ್ದ ರಾಜುವಿನ ಮೈ ಬೆವತು ಹೋಗಿತ್ತು.

ನರ್ಸ್ ಮತ್ತೆ ತಡೆದು ತಡೆದು ಹೇಳಿದಳು:

"....ದೇವರ ದಯದಿಂದ ತಾಯಿ ಮಗು ಇಬ್ಬರೂ ಉಳಿದು ಕೊಂಡರೆ....ನಮಗೆಲ್ಲಾ ಚೆನ್ನಾಗಿ ಬಹುಮಾನ ಮಾಡಬೇಕು....ಸಾರ್...."

"ಆಗಲಿ ಅಮ್ಮ" ಎಂದ ಶಾಮಣ್ಣ.

ತಾಯಿ ,ಮಗು ಇಬ್ಬರೂ ಉಳಿಯಲಿ ಎಂದು ಅಣ್ಣ-ತಮ್ಮಂದಿರಿಬ್ಬರೂ ಮನಸಾರ ಬಯಸುತ್ತಿದ್ದರು.

ಅಣ್ಣ-ತಮ್ಮಂದಿರ ಬಯಕೆಯೇನೋ ಹೀಗಿತ್ತು. ಆದರೆ, ಪ್ರಜ್ಞಾ ಶೂನ್ಯಳಾಗಿ ಮಲಗಿದ್ದ ತಾಯ ಬಯಕೆಯೇ ಬೇರೆಯಾಗಿತ್ತು. ಆ ತಾಯ ಬಯಕೆಯನ್ನು ತಿಳಿಯುವ ಹಾಗಿರಲಿಲ್ಲ; ತಿಳಿಯುವುದಕ್ಕೆ ಪ್ರಯತ್ನ ಪಡಲೂ ಸಾಧ್ಯವಿರಲಿಲ್ಲ.

"ಡಾಕ್ಟರು ಏಕೋ ಬರಲೇ ಇಲ್ಲವಲ್ಲ, ಇಷ್ಟು ಹೊತ್ತಾದರೂ" ಎಂದು ಮುಳ್ಳಿನ ಮೇಲೆ ಕುಳಿತಂತಿದ್ದ ಶಾಮಣ್ಣ ತನಗೆ ತಾನೆ ಹೇಳಿಕೊಂಡ.

"ಅವರು ಬಂದು ತಾನೆ ಏನು ಮಾಡಬಲ್ಲರು?" ಎಂದು ಉದಾಸೀನನಾಗಿ ಉಸುರಿದ ರಾಜು.

"ನಮಗೊಂದು ಧೈರ್ಯ" ಎಂದ ಶಾಮಣ್ಣ.

"ಅದು ದಿಟ" ಎಂದು ಒಪ್ಪಿಕೊಂಡ ರಾಜು.

ಅಷ್ಟು ಹೊತ್ತಿಗೆ ಸರಿಯಾಗಿ ಡಾ|| ರಘುರಾಂ ಹಿಂದಿರುಗಿ ಬಂದರು. "ಪೆಟ್ರೋಲ್ ಮುಗಿದುಹೋಗಿ ಕಾರ್ ಚಕ್ಕರ್ ಕೊಟ್ಟುಬಿಟ್ಟಿತು ಶಾಮಣ್ಣ. ದೇವರ ದಯದಿಂದ ಮೀನಾಕ್ಷಮ್ಮನ ಮನೆಯವರೆಗೆ ಹೋಯಿತು. ಅದಿರಲಿ, ಏನು ಸಮಾಚಾರ?'' ಎಂದು ಶಾಮಣ್ಣನನ್ನು ಅತ್ಯಂತ ಕುತೂಹಲದಿಂದ ಪ್ರಶ್ನಿಸಿದರು.

''ಇನ್ನೂ ಏನೂ ಆಗಿಲ್ಲ. ಏನೋ ಸ್ವಲ್ಪ ಅಪಾಯವಿದೆಯಂತೆ'' ಎಂದು ಶಾಮಣ್ಣ ನಿರಾಶೆಯಿಂದ ನುಡಿದ.

ಅಷ್ಟು ಹೊತ್ತಿಗೆ ಒಳಗಿನಿಂದ ಲಂಗದ ನರ್ಸಿನೊಂದಿಗೆ ದೊಡ್ಡ ಡಾಕ್ಟರೇ ಬಂದರು:

"ಹಲೋ, ಡಾ|| ರಘುರಾಂ! ನಿಮ್ಮ ಕಡೆಯವರೊ? ನನಗೆ ಗೊತ್ತೇ ಇರಲಿಲ್ಲ. ತುಂಬ ಡಿಫಿಕಲ್ಟ್ ಕೇಸು, ಡಾಕ್ಟರ್. ಸರ್ಜನ್ ಬಂದಿದ್ದಾರೆ.

ಆಪರೇಷನ್ ಮಾಡಬೇಕು. ತಾಯಿಯ ಇಷ್ಟವನ್ನೂ ತಿಳಿಯಲು ಇದುವರೆಗೂ ಕಾದೆವು. ಆಕೆಗೆ ಪ್ರಜ್ಞೆಯೇ ಬಂದಿಲ್ಲ. ಹಸ್ಬಂಡ್ ಯಾರು?"

"ಇವರೇ, ಡಾ|| ಶಾಮಣ್ಣ...."

"ಡಾಕ್ಟರ್?''

"ಅಂದರೆ, ಎಂ. ಎ., ಪಿ ಎಚ್.ಡಿ...."

"ಓ! Glad to meet you, Dr. Shamanna" ಎಂದು ದೊಡ್ಡ ಡಾಕ್ಟರು ಶಾಮಣ್ಣನಿಗೆ ಕೈ ಮುಗಿದರು.

ಶಾಮಣ್ಣನಿಗೆ ಆಗ ಯಾವ ಉಪಚಾರವೂ ಬೇಕಾಗಿರಲಿಲ್ಲ.

ದೊಡ್ಡ ಡಾಕ್ಟರ್ ಮುಂದುವರಿಸಿದರು:

"ಡಾ|| ರಘುರಾಂ, ನಿಮಗೇನೂ ವಿವರಿಸಬೇಕಾಗಿಲ್ಲ. ಆಮೇಲೆ ಶಾಮಣ್ಣನವರಿಗೆ ಬೇಕಾದರೆ ವಿವರಿಸಿ. We haven't a moment to lose (ಒಂದು ಕ್ಷಣವನ್ನೂ ನಾವು ಕಳೆದುಕೊಳ್ಳುವಹಾಗಿಲ್ಲ.) ತಾಯಿಯ ಇಷ್ಟ ಏನೋ ನನಗೆ ಗೊತ್ತಿಲ್ಲ. ನಮಗೆ ಅವರ ಇಷ್ಟಕ್ಕಿಂತ ಅವರ ಹಸ್ಬಂಡಿನ ಇಷ್ಟ ಮುಖ್ಯ. ಈಗ ನಾವು ತಾಯಿಯನ್ನು ಉಳಿಸಿಕೊಳ್ಳಬಹುದು, ಇಲ್ಲವೆ ಮಗುವನ್ನು ಉಳಿಸಿಕೊಳ್ಳಬಹುದು. As you know, Doctor, (ಡಾಕ್ಟರೆ, ನಿಮಗೆ ತಿಳಿದಂತೆ), ಇಬ್ಬರನ್ನೂ ಬದುಕಿಸಿಕೊಳ್ಳುವುದು Medical Scienceಗೆ (ವೈದ್ಯ ವಿಜ್ಞಾನಕ್ಕೆ) ಇನ್ನೂ ಸಾಧ್ಯವಿಲ್ಲ. ನಿಮ್ಮ ಇಷ್ಟ ಏನು, ಮಿಸ್ಟರ್....I'm sorry.... ಡಾಕ್ಟರ್ ಶಾಮಣ್ಣ?''

"ಏನು ಡಾಕ್ಟರೆ" ಎಂದು ಶಾಮಣ್ಣ ಡಾ|| ರಘುರಾಂ ಅವರ ಕಡೆ ತಿರುಗಿದ.

"ನಿನ್ನ ಇಷ್ಟ ತಿಳಿಸಪ್ಪ....".

"ಏನು, ರಾಜು...."

ರಾಜು ಮೌನವಾಗಿದ್ದ.

"Quick, Quick. (ಜಾಗ್ರತೆ, ಜಾಗ್ರತೆ). ಬೇಗ ಹೇಳಿ ಶಾಮಣ್ಣ. ನಮಗೆ ಬೇಕಾದ್ದು ನಿಮ್ಮ ಇಷ್ಟ...."

"ತಾಯಿಯನ್ನು ಬದುಕಿಸಿಕೊಡಿ. ಮಗು ಹೋದರೆ ಹೋಗಲಿ...." ಕುಗ್ಗಿದ ದನಿಯಲ್ಲಿ ಹೇಳಿದ ಶಾಮಣ್ಣ.

**"That's all right".** (ಅದು ಸರಿ). ಮಿಸ್ ಫ್ಲೋರಾ, ಆ ಫಾರಂ ಭರ್ತಿಮಾಡಿಸಿ ಶಾಮಣ್ಣನವರ ರುಜು ಹಾಕಿಸಿಕೊಂಡು ಬೇಗ ಬಾ" ಎಂದು ದೊಡ್ಡ ಡಾಕ್ಟರು ಲೇಬರ್ ವಾರ್ಡಿಗೆ ಸರ್ರನೆ ಹಿಂದಿರುಗಿದರು.

ಲಂಗದ ನರ್ಸ್ ಹಾಗೆಯೇ ಮಾಡಿ ಹಿಂತಿರುಗಿದಳು.

ಡಾಕ್ಟರೂ ಶಾಮಣ್ಣನೂ ರಾಜುವಿನ ಪಕ್ಕದಲ್ಲಿ ಹೋಗಿ ಕುಳಿತರು. ಕೆಲವು ನಿಮಿಷಗಳ ಆತಂಕದ ಮೌನದ ತೆರೆ ಮೂವರನ್ನೂ ಮುಸುಕಿತು.

ಸೀರೆಯ ನರ್ಸ್ ಧಾವಿಸಿ ಬಂದಳು. ಜೊತೆಯಲ್ಲಿಯೇ ರತ್ನ ಚೀರಿದ್ದೂ ಕೇಳಿಬಂತು.

"ಪೇಷೆಂಟಿಗೆ ಜ್ಞಾನ ಬಂದಿದೆ. ಮಗು ಮಗು ಮಗು ಅಂತ ಚೀರಿಕೊಳ್ಳುತ್ತಾ ಇದ್ದಾರೆ. ಗಂಡನನ್ನ ನೋಡಬೇಕಂತೆ. ನಿಮ್ಮನ್ನು ಕರೆದುಕೊಂಡು ಬಾ ಅಂತ ದೊಡ್ಡ ಡಾಕ್ಟರ್ ಹೇಳಿದಾರೆ." ಎಂದಳು, ಶಾಮಣ್ಣನನ್ನು ಕುರಿತು.

ಶಾಮಣ್ಣ ನರ್ಸನ್ನು ಹಿಂಬಾಲಿಸಿದ.

ರತ್ನ ದೊಡ್ಡ ಮೇಜಿನ ಮೇಲೆ ಮಲಗಿದ್ದಳು. ಅವಳ ಮುಖವನ್ನು ಪ್ರಕಾಶಮಾನವಾದ ವಿದ್ಯುಚ್ಛಕ್ತಿಯ ದೀಪ ಬೆಳಗುತ್ತಿತ್ತು. ಮುಖ ಬಿಳಿಚಿತ್ತು, ನೋವಿನ ನಕ್ಷೆಯಾಗಿತ್ತು.

ಶಾಮಣ್ಣ ಹೋಗಿ ರತ್ನನ ಪಕ್ಕದಲ್ಲಿ ನಿಂತ.

"ನಿಮ್ಮ ಯಜಮಾನರು ಬಂದಿದ್ದಾರಮ್ಮಾ" ಎಂದು ದೊಡ್ಡ ಡಾಕ್ಟರ್ ಮೆಲ್ಲನೆ ಹೇಳಿದರು.

ರತ್ನ ಶಾಮಣ್ಣನ ಮುಖವನ್ನು ಗುರುತಿಸಿದಳು. ಪ್ರಯತ್ನಪೂರ್ವಕವಾಗಿ ನೋವಿನ ಭಾವವನ್ನು ಅಡಗಿಸಿಕೊಂಡು, ಮಂದಹಾಸವನ್ನು ತಂದುಕೊಂಡು, ಶಾಂತಭಾವದಿಂದ ನುಡಿದಳು.

"ನನ್ನನ್ನು ಕ್ಷಮಿಸುತ್ತೀರಾ....?"

"ಯಾಕೆ ರತ್ನ ?"

"ಮೊದಲು ಕ್ಷಮಿಸಿ. ಕ್ಷಮಿಸಿದ್ದೀರಾ ?"

"ಹ್ಞೂ, ಕ್ಷಮಿಸಿದ್ದೇನೆ."

"ನಾನು ಬದುಕುವ ಹಾಗಿಲ್ಲ, ಬದುಕಲಾರೆ, ಬದುಕಕೂಡದು.

ಮಗು, ಮಗೂ, ಮಗೂ........" ಎಂದು ಗಟ್ಟಿಯಾಗಿ ಚೀರಿದಳು.

"ಏನು, ರತ್ನ ? ಮಗು ಬದುಕುತ್ತೆ. ಹೆದರಬೇಡ...."

"ಅಯ್ಯೋ, ಅಯ್ಯೋ!....ಮಗು....ಮಗು....ನಿಮ್ಮದಲ್ಲ, ನಿಮ್ಮ ತಮ್ಮನದು....ಅವರನ್ನು ಕ್ಷಮಿಸಿ....ಮಗು ಮಗು....ಬದುಕಲಿ, ಬದುಕಲಿ....ಕಾಪಾಡಿ."

ರತ್ನನ ಮುಖ ಒಂದು ಕಡೆಗೆ ಹೊರಳಿತು, ಗೋಣು ಸಡಿಲವಾಯಿತು ; ಅವಳ ಪ್ರಜ್ಞೆ ತಪ್ಪಿತು.

"ಇನ್ನು ನೀವು ಹೋಗಿ. ನಮ್ಮ ಕೈಲಾದದ್ದನ್ನು ಮಾಡುತ್ತೇವೆ" ಎಂದು ಸರ್ಜನ್ ಶಾಮಣ್ಣನಿಗೆ ತಿಳಿಸಿದರು. ಶಾಮಣ್ಣ ಹೊರಬಂದ.

ಅವನನ್ನು ಹಿಂಬಾಲಿಸಿ ಗಾಲಿಗಳ ಮೇಜೂ ಹೊರಕ್ಕೆ ಸರಿದು ಬಂತು.

"ಎಲ್ಲಿಗೆ ?" ಎಂದು ಶಾಮಣ್ಣ ಮೆಲ್ಲನೆ ಆಯಾನನ್ನು ಕೇಳಿದ.

"ಆಪರೇಷನ್ ಥಿಯೇಟರಿಗೆ."

ಶಾಮಣ್ಣ ರತ್ನನನ್ನು ಹಿಂಬಾಲಿಸಿದ. ಎಲ್ಲರೂ ಶಸ್ತ್ರಚಿಕಿತ್ಸೆಯ ಶಾಲೆಯನ್ನು ಪ್ರವೇಶಿಸಿದರು. ಶಾಮಣ್ಣ ಹೊರಗೆ ನಿಂತಿದ್ದ. ಯಾರೂ ಆಕ್ಷೇಪಿಸಲಿಲ್ಲ.

ನಿಮಿಷಗಳು ಕಣ್ಣುಮಿಟುಕಿಸಿ ಜಗುಳುತ್ತಿದ್ದುವು.

ರತ್ನನ ಕೂಗಾಟ, ಚೀರಾಟ, ನರಳಾಟ–ಏನೂ ಇಲ್ಲ. ಶ್ಮಶಾನ ಮೌನ.

ಬಾಗಿಲು ತೆರೆಯಿತು. ಲಂಗದ ನರ್ಸ್—ಫ್ಲೋರಾ—ಹೊರಕ್ಕೆ ಬಂದಳು.

"ಸಾರಿ (ವ್ಯಸನವಾಗುತ್ತೆ), ತಾಯಿಯನ್ನು ಉಳಿಸಿಕೊಳ್ಳಲಾಗಲಿಲ್ಲ. ಮಗು ಬದುಕಿತು ; ಗಂಡು. ಭಾರಿ ಮಗು, ಚೆನ್ನಾಗಿದೆ. ನಾಳೆ ಬೆಳಗ್ಗೆ ಬನ್ನಿ, ಮುಂದಿನ ಕೆಲಸಕ್ಕೆ...."

ತಾಯ ಬಯಕೆ ಗೆದ್ದಿತ್ತು.

ಶಾಮಣ್ಣ ನಿಧಾನವಾಗಿ ಹೆಜ್ಜೆ ಹಾಕುತ್ತ, ನಿರ್ವಿಣ್ಣ ವದನನಾಗಿ ನಿರ್ವಿಕಾರ ಮನಸ್ಕನಾಗಿ, ರಾಜುವಿನ ಬಳಿಗೆ ಬಂದ.

"ರಾಜು, ನಿನಗೆ ಗಂಡು ಮಗುವಾಗಿದೆ" ಎಂದ, ಅನುದ್ವಿಗ್ನನಾಗಿ.

"ರತ್ನಾ....?"

"ಹೊರಟುಹೋದಳು."

"ಅಣ್ಣಾ, ಕ್ಷಮಿಸು" ಎಂದು ರಾಜು ಶಾಮಣ್ಣನ ಕಾಲುಗಳಮೇಲೆ ಕೆಡೆದು, ಕಂಬನಿಯಿಂದ ಅಣ್ಣನ ಪಾದಗಳನ್ನು ತೊಳೆದು, ತಟ್ಟನೆ ಎದ್ದು ಹೇಳದೆ ಕೇಳದೆ ಹೊರಟುಹೋದ.

೩೫

ಸುಂದರಮ್ಮನವರ ಮೊಮ್ಮಗು ಒಂದು ತಿಂಗಳು ಆಸ್ಪತ್ರೆಯಲ್ಲೇ ಇದ್ದು ಅನಂತರ ಶಾಮಣ್ಣನ ಆರೈಕೆಗೆ ಒಳಪಟ್ಟಿತು.

ಮಗುವಿನ ಆರೈಕೆಗೆ ಸಾವಿತ್ರಮ್ಮನವರನ್ನು ಮತ್ತೆ ನೇಮಿಸಿಕೊಳ್ಳಲಾಯಿತು. ಶಾಮಣ್ಣ ಒಬ್ಬ ಹಾಲೂಡುವ ದಾದಿಯನ್ನೂ (Wet Nurse) ಗೊತ್ತುಮಾಡಿದ.

ಡಾ|| ರಘುರಾಂ ಆಗಲೇ ಶಾಮಣ್ಣನಿಗೆ ಬೇರೊಂದು ಮದುವೆ ಮಾಡಿಸುವ ಪ್ರಯತ್ನದಲ್ಲಿದ್ದರು.

*  *  *  *

ಒಂದು ದಿನ ಇದ್ದಕ್ಕಿದ್ದಹಾಗೆ, ರಾಜು ಶಾಮಣ್ಣನ ಮುಂದೆ ನಿಂತು ಹೇಳಿದ.

"ಶಾಮಣ್ಣಾ...."

"ಏನು ರಾಜು?"

"ನಾನು ಬೊಂಬಾಯಿಗೆ ಹೋಗುತ್ತೇನೆ...."

"ಯಾಕೆ, ರಾಜು? ಕೋರ್ಸ್ ಮುಗಿಯಲಿ....ಆಮೇಲೆ ಬೇಕಾದರೆ...."

"ಚಲನ ಚಿತ್ರ ನಟನಾಗುವುದಕ್ಕೆ ಅಲ್ಲ, ಶಾಮಣ್ಣಾ...."

"ಹಾಗಾದರೆ ಯಾತಕ್ಕೆ?"